ಸಂಯುಕ್ತ ಕರ್ನಾಟಕ

ಸೋಮವಾರ 29 ಜುಲೈ 2024
ಬೆಂಗಳೂರು | BENGALURU

# ಸಂವಹನ ಕ್ರಿಯೆ ತೇಜಸ್ವಿ ಸಾಹಿತ್ಯದ ಹಿರಿಮೆ

ಬೆಂಗಳೂರು : ಓದುಗರೊಡನೆ ಇದ್ದಂತಹ ಸಂವಹನ ಕ್ರಿಯೆಯೇ ತೇಜಸ್ವಿ ಅವರ ಸಾಹಿತ್ಯ ಪ್ರಸಿದ್ಧವಾಗಲು ಪ್ರಮುಖ ಕಾರಣ ಎಂದು ಹಿರಿಯ ಸಾಹಿತಿ ಪ್ರೊ. ಬಿ.ಎನ್.ಶ್ರೀರಾಮ್ ಅಭಿಪ್ರಾಯಪಟ್ಟಿದ್ದಾರೆ.

ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಎಂ. ಚಂದ್ರಶೇಖರ್ ಪ್ರತಿಷ್ಠಾನ, ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರ ಸಂಯುಕ್ತವಾಗಿ ಹಮ್ಮಿಕೊಂಡಿದ್ದ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು ಹದಿನಾಲ್ಕು ಸಂಪುಟಗಳ ಬಿಡುಗಡೆ ಮತ್ತು ತೇಜಸ್ವಿ ಎಂಬ ವಿಸ್ಮಯ ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆ, ಪೂರ್ಣಚಂದ್ರ ಚಿತ್ರ ಸಂಪುಟ ಬಿಡುಗಡೆ ಹಾಗೂ ತೇಜಸ್ವಿ ಸಾಹಿತ್ಯ, ಸಾಂಸ್ಕೃತಿಕ ಹಬ್ಬ ರಾಷ್ಟ್ರೀಯ ವಿಚಾರ ಸಂಕಿರಣ ಸಮಾರಂಭವನ್ನು ಉದ್ಘಾಟಿಸಿ ಅವರು ಮಾತನಾಡಿದರು. ತೇಜಸ್ವಿ ಅವರಿಗೆ ತಾವು ಬರೆದದ್ದನ್ನು ಬರೆಯವರು ಓದಿ ಅರ್ಥ ಮಾಡಿಕೊಳ್ಳುತ್ತಾರೋ ಇಲ್ಲವೋ ಎಂಬುವುದು ಚೆನ್ನಾಗಿ ತಿಳಿದಿತ್ತು. ಹಾಗೆಯೇ ಅವರು ಅರ್ಥವಾಗುವ ರೀತಿಯಲ್ಲೇ ಬರೆಯುತ್ತಿದ್ದರು. ಇವತ್ತಿಗೂ ಅವರ ಯಾವುದೇ ಕೃತಿಯನ್ನು ಓದಿದರು ಅವರೇ ಓದುಗರ ಕಿವಿಯಲ್ಲಿ ಹೇಳುತ್ತಿದ್ದಾರೆಯೇ ಅನ್ನುವಂತೆ ಭಾಸವಾಗುತ್ತದೆ ಎಂದರು.

'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿಯನ್ನು ಲೋಕರ್ಪಾಣೆಗೊಳಿಸಿ ಮಾತನಾಡಿದ ಮಾಜಿ ಉಪಮುಖ್ಯಮಂತ್ರಿ, ಡಾ.ಸಿ.ಎನ್. ಅಶ್ವತ್ಥ ನಾರಾಯಣ್, ತೇಜಸ್ವಿ ಅವರ ಜೀವನ ಹಾಗೂ ಬರವಣಿಗೆಯೇ ನಮಗೆಲ್ಲಾ ಒಂದು ಸಂದೇಶ. ಸಮಾಜದಲ್ಲಿ ನಾವು ಹೇಗೆ ಬದುಕಬೇಕು ಎಂಬುವುದಕ್ಕೆ ನಿದರ್ಶನವಾಗಿದೆ ಎಂದರು.



ತೇಜಸ್ವಿ ಎಂಬ ವಿಸ್ಮಯ ಬದುಕು ಬರಹಗಳ ಕುರಿತು ಸಾಕ್ಷಚಿತ್ರ ಸರಣಿಯನ್ನು ಶಾಸಕ ಸಿ.ಎನ್. ಅಶ್ವತ್ ನಾರಾಯಣ ಬಿಡುಗಡೆ ಮಾಡಿದರು. ಸಾಹಿತಿಗಳಾದ ಪ್ರೊ. ಎಸ್. ಜಿ. ಸಿದ್ಧರಾಮಯ್ಯ, ಪ್ರೊ. ಬಿ.ಎಂ. ಶ್ರೀ ರಾಮ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಸೇರಿ ಇತರರು ಇದ್ದರು.

ಪ್ರಾಸ್ತಾವಿಕವಾಗಿ ಮಾತನಾಡಿದ ಕನ್ನಡ ವಿವಿ ವಿಶ್ರಾಂತ ಪ್ರಾಧ್ಯಾಪಕ, ಲೇಖಕ ಪ್ರೊ. ಕೆ.ಸಿ.ಶಿವಾರೆಡ್ಡಿ, ತೇಜಸ್ವಿ ಅಂತಹ ವ್ಯಕ್ತಿತ್ವಗಳು ಜಗತ್ತಿನಾದ್ಯಂತ ಎಲ್ಲಾ ಕಾಲದಲ್ಲಿಯೂ ಹುಟ್ಟುತ್ತಿರುತ್ತಾರೆ. ಹುಟ್ಟುವ ಕಾಲಕ್ಕೆ ಪ್ರತಿಯೊಂದು ಮಗುವು ಕೂಡ ಯಾವುದೋ ಲೋಕದ ಅಭೀಕ್ಷೆಯಿಂದ ಹುಟ್ಟುತ್ತದೆ ಎನ್ನುವ ನಂಬಿಕೆಯಿದೆ. ತೇಜಸ್ವಿ ಅವರನ್ನು ಕೂಡ ಕುವೆಂಪು ಅವರ ಅಭೀಕ್ಷೆಯೇ ಈ ಲೋಕಕ್ಕೆ ಕರೆದು ತಂದಿದೆ ಎಂದು ಶಿವಾರೆಡ್ಡಿ ವಿಶ್ಲೇಷಿಸಿದರು.

ಕಾರ್ಯಕ್ರಮದಲ್ಲಿ ಗಾಂಧಿ ಭವನದ ನಿರ್ದೇಶಕ ಪ್ರೊ.ಜಿ.ಬಿ ಶಿವರಾಜು, ಗಾಂಧಿ ಭವನದ ಕಾರ್ಯಧ್ಯಕ್ಷರು ಎನ್.ಆರ್. ವಿಶುಕುಮಾರ್, ಬೆಂಗಳೂರಿನ ಎಂ. ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯೆ ಸರೋಜ ಎಂ. ಚಂದ್ರಶೇಖರ್, ಕುವೆಂಪು ವಿಶ್ವವಿದ್ಯಾಲಯ ಶಂಕರಘಟ್ಟದ ವಿಶ್ರಾಂತ ಕುಲಪತಿ ಕವಿ ಡಾ. ಕೆ ಚಿದಾನಂದಗೌಡ, ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಮಾಜಿ ಅಧ್ಯಕ್ಷ, ಕವಿ, ಪ್ರೊ. ಎಸ್. ಜಿ. ಸಿದ್ಧರಾಮಯ್ಯ, ಕನ್ನಡ ವಿಶ್ವವಿದ್ಯಾಲಯ, ಹಂಪಿಯ ಕುಲಪತಿ ಡಾ. ಡಿ. ವಿ. ಪರಮಶಿವ ಮೂರ್ತಿ, ಲೇಖಕಿ ತಾರಿಣಿ ಚಿದಾನಂದಗೌಡ ಸೇರಿದಂತೆ ಪ್ರಮುಖರು ಉಪಸ್ಥಿತರಿದ್ದರು. ಬೆಂಗಳೂರಿನ ಎಂ ಚಂದ್ರಶೇಖರ್ ಪ್ರತಿಷ್ಠಾನದ ಅಧ್ಯಕ್ಷ ನ್ಯಾಯಮೂರ್ತಿ ಎ. ಜೆ. ಸದಾಶಿವ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು.

ಪ್ರಜಾವಾಣಿ

ಸೋಮವಾರ • ಜುಲೈ 29, 2024

## 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆ

# 'ಪ್ರತಿಕ್ರಿಯೆಗಳು ಪುಸ್ತಕವಾಗಲಿ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಪೂರ್ಣಚಂದ್ರ ತೇಜಸ್ವಿ ಅವರ ನಿರ್ಗಮನದ ಬಳಿಕ 1,200 ಪುಟಗಳಷ್ಟು ಪ್ರತಿಕ್ರಿಯೆಗಳು ಓದುಗರಿಂದ ಬಂದಿದ್ದವು. ಅವುಗಳು ಪುಸ್ತಕ ರೂಪದಲ್ಲಿ ಬಂದರೆ ತೇಜಸ್ವಿ ಅವರ ಬೇರೆಯದೇ ಜಗತ್ತು ತೆರೆದುಕೊಳ್ಳಲಿದೆ' ಎಂದು ಸಾಹಿತಿ ಬಿ.ಎನ್. ಶ್ರೀರಾಮ್ ತಿಳಿಸಿದರು.

ಮೂನಿಸ್ವಾಮಿ ಆ್ಯಂಡ್ ಸನ್ಸ್, ಎಂ.ಚಂದ್ರಶೇಖರ್ ಪ್ರತಿಷ್ಠಾನ ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರ ಜಂಟಿಯಾಗಿ ನಗರದಲ್ಲಿ ಭಾನುವಾರ ಹಮ್ಮಿಕೊಂಡ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು 14 ಸಂಪುಟಗಳು ಮತ್ತು 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಬಿಡುಗಡೆ, 'ತೇಜಸ್ವಿ ಸಾಹಿತ್ಯ–ಸಾಂಸ್ಕೃತಿಕ ಹಬ್ಬ' ರಾಷ್ಟ್ರೀಯ ವಿಚಾರಸಂಕಿರಣ ಉದ್ಘಾಟಿಸಿ, ಮಾತನಾಡಿದರು.

'ತೇಜಸ್ವಿ ಅವರ ಸಾಹಿತ್ಯ ಪ್ರಸಿದ್ಧಿಯಾಗಲು ಓದುಗರೊಂದಿಗೆ ಅವರಿಗೆ ಇದ್ದ ಸಂವಹನವೇ ಕಾರಣ. ಅವರ ಕೃತಿಗಳನ್ನು ಓದುತ್ತಿದ್ದರೆ ಸ್ವತಃ ಅವರೇ ಕಿವಿಯಲ್ಲಿ ಹೇಳಿದಂತೆ ಭಾಸವಾಗುತ್ತದೆ. ಕುವೆಂಪು ಅವರಿಂದ ಬಂದಿರುವ ತಿಳಿಹಾಸ್ಯದ ಜತೆಗೆ ಸ್ವಲ್ಪ ರಾಜಕೀಯ, ಸಾಹಿತ್ಯ ಹಾಗೂ ಸ್ವಲ್ಪ ತುಂಟಾಟವನ್ನು ಅವರ ಕೃತಿಗಳಲ್ಲಿ ಕಾಣಬಹುದು. ಕಠಿಣವಾದ ವಿಷಯಗಳನ್ನೂ ಅರ್ಥವಾಗುವ ರೀತಿಯಲ್ಲಿ ಬರೆಯುತ್ತಿದ್ದರು. ಲೇಖಕರಾದವರು ತಾನು ಬರೆದದ್ದು ಬೇರೆಯವರಿಗೆ ಅರ್ಥವಾಗುತ್ತದೆಯೋ ಇಲ್ಲವೋ ಎಂದು ತಿಳಿದು, ಬರೆಯಬೇಕು' ಎಂದು ಹೇಳಿದರು.



ಮಾಧ್ಯಮ ಅನೇಕ ಪ್ರೊಡಕ್ಷನ್‌ನ ಅರವಿಂದ್ ಮೋತಿ ಅವರು (ಎಡದಿಂದ ನಾಲ್ಕನೆಯವರು) ನಿರ್ಮಿಸಿದ 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿಯನ್ನು ಶಾಸಕ ಸಿ.ಎನ್. ಅಶ್ವತ್ಥನಾರಾಯಣ ಬಿಡುಗಡೆ ಮಾಡಿದರು. (ಎಡದಿಂದ) ಸಾಹಿತಿ ಎಸ್.ಜಿ. ಸಿದ್ಧರಾಮಯ್ಯ, ಬಿ.ಎನ್. ಶ್ರೀರಾಮ್, ಎಂ. ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯೆ ಸರೋಜ ಎಂ. ಚಂದ್ರಶೇಖರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಹಂಪಿ ಕನ್ನಡ ವಿಶ್ವವಿದ್ಯಾಲಯದ ಕುಲಪತಿ ಡಿ.ವಿ. ಪರಮಶಿವಮೂರ್ತಿ, ಕೆ. ಚಿದಾನಂದ ಗೌಡ, ತೇಜಸ್ವಿ ಅವರ ಸಹೋದರಿ ತಾರಿಣಿ ಚಿದಾನಂದ ಮತ್ತು ಪುತ್ರಿ ಕೆ.ಪಿ. ಸುಸ್ಮಿತಾ ಪಾಲ್ಗೊಂಡಿದ್ದರು —ಪ್ರಜಾವಾಣಿ ಚಿತ್ರ

'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಬಿಡುಗಡೆ ಮಾಡಿದ ಬಿಜೆಪಿ ಶಾಸಕ ಡಾ.ಸಿ.ಎನ್. ಅಶ್ವತ್ಥ ನಾರಾಯಣ, ಮಾತನಾಡಿ, 'ತೇಜಸ್ವಿ ಅವರ ಜೀವನವೇ ಒಂದು ಸಂದೇಶ. ಅವರ ವ್ಯಕ್ತಿತ್ವ ಆಶ್ಚರ್ಯ ಹುಟ್ಟಿಸುತ್ತದೆ. ಅವರು ಆಗಲೇ ಹವಾಮಾನ ವೈಪರೀತ್ಯದಂತಹ ವಿಷಯಗಳ ಬಗ್ಗೆ ಪ್ರಸ್ತಾಪ ಮಾಡಿದ್ದರು. ಈಗ ಪ್ರಕೃತಿಯ ವಿಕೋಪ ದೊಡ್ಡ ಸವಾಲಾಗಿದೆ. ವಿಜ್ಞಾನ ಮತ್ತು ತಂತ್ರಜ್ಞಾನ ವೇಗವಾಗಿ ಬೆಳೆಯುತ್ತಿರುವ ಈ ಕಾಲದಲ್ಲಿ ಅವುಗಳನ್ನು ಪರಿಸರಕ್ಕೆ ಪೂರಕವಾಗಿ ಯಾವ ರೀತಿ ಅಳವಡಿಸಿಕೊಳ್ಳುತ್ತೇವೆ ಎನ್ನುವುದೂ ಮುಖ್ಯವಾಗುತ್ತದೆ' ಎಂದರು.

ಕುವೆಂಪು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಕೆ. ಚಿದಾನಂದಗೌಡ ಮಾತನಾಡಿ, 'ತೇಜಸ್ವಿ ಅವರು ತಮ್ಮ ಅನುಭವವನ್ನು ಕೃತಿಗಳಲ್ಲಿ ದಾಖಲಿಸಿದ್ದಾರೆ. ಇದರಿಂದ ಅವರು ನಮಗೆ ಆಪ್ತರಾಗುತ್ತಾರೆ. ಈಗ ಕೃತಕ ಬುದ್ಧಿಮತ್ತೆ ತಂತ್ರಜ್ಞಾನದ ಬಗ್ಗೆ ಚರ್ಚೆ ಮಾಡಲಾಗುತ್ತಿದೆ. ತೇಜಸ್ವಿ ಅವರು ಆಗಲೇ ತಮ್ಮ ಕೃತಿಗಳಲ್ಲಿ ಜೀವಿಗಳಲ್ಲಿನ 'ಸ್ವಾಭಾವಿಕ ಕೃತಕಬುದ್ಧಿಮತ್ತೆ' ಬಗ್ಗೆ ಪ್ರಸ್ತಾಪಿಸಿದ್ದರು' ಎಂದು ಹೇಳಿದರು.

ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ನಿರ್ದೇಶಕ ಕೆ.ಸಿ. ಶಿವಾರೆಡ್ಡಿ ಮಾತನಾಡಿ, 'ತೇಜಸ್ವಿ ಅವರ ಸಾಹಿತ್ಯದ ಓದು ಆತ್ಮವಿಶ್ವಾಸ ಹೆಚ್ಚಳ ಹಾಗೂ ಗಂಭೀರ ಬದುಕಿಗೆ ಪ್ರೇರಣೆ ನೀಡುತ್ತದೆ. ಲಕ್ಷಾಂತರ ರೂಪಾಯಿ ವೇತನ ಪಡೆಯುತ್ತಿದ್ದ ಐಟಿ–ಬಿಟಿ ಉದ್ಯೋಗಿಗಳು ಅವರ ಪ್ರೇರಣೆಯಿಂದ ಗ್ರಾಮೀಣ ಪ್ರದೇಶಕ್ಕೆ ಹೋದ ಉದಾಹರಣೆಗಳಿವೆ. ನೆಮ್ಮದಿಯ ಬದುಕನ್ನು ಕಟ್ಟಿಕೊಳ್ಳುವುದು ಹೇಗೆ ಎನ್ನುವುದನ್ನು ಅವರು ತೋರಿಸಿಕೊಟ್ಟಿದ್ದಾರೆ' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಸಂಯುಕ್ತ ಕರ್ನಾಟಕ
ಗುರುವಾರ 11 ಜನವರಿ 2024
ಬೆಂಗಳೂರು | BENGALURU


# ಮಠಗಳಿಂದ ಬಸವಾದಿ ಪ್ರಮಥರ ಅನುಸರಣೆ

## ಸುತ್ತೂರಿನಲ್ಲಿ ಆದಿ ಜಗದ್ಗುರು ಶಿವರಾತ್ರೀಶ್ವರ ಶಿವಯೋಗಿಗಳ ಜಯಂತಿ ಮಹೋತ್ಸವ



ಸಂ.ಕ. ಸಮಾಚಾರ ನಂಜನಗೂಡು

ಕೇವಲ ಗುಡಿ ಗುಂಡಾರಗಳನ್ನು ತೆರೆಯದ ಬಸವಾದಿ ಪ್ರಮಥರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ಮನುಷ್ಯತ್ವದ ಕೆಲಸಗಳನ್ನು ಮಾಡಿರುವ ಶ್ರೇಯಸ್ಸು ಇಲ್ಲಿನ ಲಿಂಗಾಯತ ಮಠಾಧೀಶರು ಮತ್ತು ಮಠಗಳಿಗೆ ಸಲ್ಲುತ್ತದೆ ಎಂದು ನಿಷ್ಕಲ ಮಂಟಪದ ನಿಜಗುಣಾನಂದ ಸ್ವಾಮೀಜಿ ತಿಳಿಸಿದರು.

ನಂಜನಗೂಡು ತಾಲೂಕಿನ ಸುತ್ತೂರಿನಲ್ಲಿ ಆದಿ ಜಗದ್ಗುರು ಶಿವರಾತ್ರೀಶ್ವರ ಶಿವಯೋಗಿಗಳ 1064ನೆಯ ಜಯಂತಿ ಮಹೋತ್ಸವದಲ್ಲಿ ಭಾಗವಹಿಸಿ ಮಾತನಾಡಿದರು.

ಅಂದಿನ ಸುತ್ತೂರು ಜಗದ್ಗುರು ತಮ್ಮ ಕೊರಳಿದ್ದ ಬಂಗಾರದ ಕರಡಿಗೆಯನ್ನು ಮಾರಿ ಅದರಲ್ಲಿ ಬಂದ ಹಣದಲ್ಲಿ ಪ್ರಸಾದದ ನಿಲಯಗಳನ್ನು ತೆರೆದು ಲಿಂಗಾಯತ ಧರ್ಮದ ತತ್ವವನ್ನು ಉಳಿಸಿರುವುದು ಜಗತ್ತಿನಲ್ಲಿ ಶ್ರೇಷ್ಠವಾದ ಕೆಲಸವಾಗಿದೆ ಎಂದು ನುಡಿದರು.

ಇದೇ ವೇಳೆ, ತಾವೊಬ್ಬ ನಾನೊಬ್ಬ ಸಂಚಾರಿ ಪ್ರವಚನ ಸ್ವಾಮೀಜಿ. ನಾನು ಉಳಿದುಕೊಂಡಿರುವುದು ಕುಗ್ರಾಮವಾಗಿದ್ದು, ಶಿಕ್ಷಣದ ಕೊರತೆ ಈ ಗ್ರಾಮದಲ್ಲಿ ಎದ್ದು ಕಾಣುತ್ತಿರುವ ಸಂದರ್ಭದಲ್ಲಿ ಅಲ್ಲಿ ಪ್ರವಚನ ಕೈಗೊಂಡೆ. ಈ ಊರಿನಲ್ಲಿ ಜನರಲ್ಲಿ ಭಾವೈಕ್ಯತೆ ಮತ್ತು ಮುಗ್ಧತೆಯಿತ್ತು. ನಾನು 11 ದಿನಗಳ ಕಾಲ ಈ ಊರಿನಲ್ಲಿ ಪ್ರವಚನಗಳ ಮೂಲಕ ಮೌಢ್ಯ ಹೋಗಲಾಡಿಸುವ ನಿಟ್ಟಿನಲ್ಲಿ ಜಾಗೃತಿ ಮೂಡಿಸಿ ಕಡೆಗೂ ಯಶಸ್ವಿಯಾದೆ ಎಂದು ಸ್ಮರಿಸಿದರು.

ಇದೇ ಸಂದರ್ಭದಲ್ಲಿ ಜ್ಯೋತಿಷ ಮಹಾ ಮಹೋಪಾಧ್ಯಾಯ ಡಾ.ಕೆ.ಜಿ. ಪುಟ್ಟಹೊನ್ನಯ್ಯ ಅವರು ಸಿದ್ಧಪಡಿಸಿ, ಭಾರತೀಯ ಜ್ಯೋತಿರ್ವಿಜ್ಞಾನ ಸಂಶೋಧನಾ ಕೇಂದ್ರದಿಂದ ಪ್ರಕಟಿಸಿರುವ ಶೋಭಕೃತು ನಾಮ ಸಂವತ್ಸರದ ಸುತ್ತೂರು ಶ್ರೀ ಶಿವರಾತ್ರೀಶ್ವರ ಪಂಚಾಂಗ ಹಾಗೂ ಶ್ರೀಮಠ ಮತ್ತು ಜೆಎಸ್‌ಎಸ್ ಮಹಾವಿದ್ಯಾಪೀಠದ ನೂತನ ವರ್ಷದ ಗೋಡೆ ಹಾಗೂ ಪಾಕೆಟ್ ಕನ್ನಡ ಮತ್ತು ಇಂಗ್ಲಿಷ್ ಕ್ಯಾಲೆಂಡರ್‌ಗಳನ್ನು ಬಿಡುಗಡೆಗೊಳಿಸಲಾಯಿತು.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ನಿಷ್ಕಲ ಮಂಟಪದ ನಿಜಗುಣಾನಂದ ಸ್ವಾಮೀಜಿ, ಬೆಂಗಳೂರಿನ ಮಿಥಿಕ್ ಸೊಸೈಟಿ, ಡಾ.ಸಿ. ರಾಮಚಂದ್ರ, ಕೆ.ಟಿ. ಚಂದ್ರು, ಪ್ರೊ.ಸಿ. ನಾಗಣ್ಣ, ಡಾ. ಕಬ್ಬಿನಾಲೆ ವಸಂತ ಭಾರದ್ವಾಜ್, ಪಿ. ಗಂಗಾಧರ ಸ್ವಾಮಿ, ಕೆಂಪಸಿದ್ದನಹುಂಡಿಯ ಕಂಸಾಳೆ ಮಹದೇವು, ಗೌರಯ್ಯ, ಜವರಪ್ಪ, ಗೌರವ ಡಾಕ್ಟರೇಟ್ ಪಡೆದ ಅರವಿಂದ ಜತ್ತಿ, ಜಾವಗಲ್ ಶ್ರೀನಾಥ್, ಕೆ.ಬಿ. ಗಣಪತಿ, ನಾಡೋಜ ವೊಡೇ ಪಿ. ಕೃಷ್ಣ, ನಾಡೋಜ ಪ್ರಶಸ್ತಿ ಪಡೆದ ಎಸ್. ಷಡಕ್ಷರಿ ಅವರನ್ನು ಸನ್ಮಾನಿಸಲಾಯಿತು.

ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಮಾಜಿ ಸಂಸದ ಕಾಗಲವಾಡಿ ಶಿವಣ್ಣ, ಪ್ರೊ. ಮೊರಬದ ಮಲ್ಲಿಕಾರ್ಜುನ, ಹಾಗೂ ವಿವಿಧ ಮಠಾಧೀಶರು, ರಾಜಕೀಯ ಮುಖಂಡರ ಇದ್ದರು.

# ಅನ್ನ, ಅಕ್ಷರ, ಆಶ್ರಯ ಶರಣ ಧರ್ಮ

## ಬೈಲೂರು ನಿಷ್ಕಲ ಮಂಟಪ ಮಠಾಧ್ಯಕ್ಷ ನಿಜಗುಣಾನಂದ ಸ್ವಾಮೀಜಿ ಹೇಳಿಕೆ | ಶ್ರೀ ಶಿವರಾತ್ರಿ ಶಿವಯೋಗಿಗಳ ಜಯಂತಿ

- ವಿಕ ಸುದ್ದಿಲೋಕ ನಂಜನಗೂಡು

ಅನ್ನ, ಅರಿವು, ಆಶ್ರಯ ನೀಡಿ ಎಲ್ಲರನ್ನೂ ಮನುಷ್ಯರನ್ನಾಗಿ ಕಾಣುವುದೇ ಲಿಂಗಾಯತ ಧರ್ಮ ಎಂದು ಬೈಲೂರು ನಿಷ್ಕಲ ಮಂಟಪ ಮಠಾಧ್ಯಕ್ಷ ನಿಜಗುಣಾನಂದ ಸ್ವಾಮೀಜಿ ಹೇಳಿದರು.

ತಾಲೂಕಿನ ಸುತ್ತೂರು ಶ್ರೀವೀರಸಿಂಹಾಸನ ಮಹಾಸಂಸ್ಥಾನ ಮಠದಲ್ಲಿ ಆದಿಜಗದ್ಗುರು ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವ ಕಾರ್ಯಕ್ರಮದಲ್ಲಿ ಮಾತನಾಡಿದರು.

''ಶರಣ ಧರ್ಮವನ್ನು ಪರಿಪಾಲನೆ ಮಾಡುತ್ತಿರುವ ಲಿಂಗಾಯತ ಧರ್ಮದ ಮಠಗಳು ಕೋಟ್ಯಂತರ ಜನರ ಬದುಕಿಗೆ ಬೆಳಕಾಗಿವೆ. ಈಗ ಹೇಗೆ ಪಿಜಿ ಎಂದು ಕರೆಯುತ್ತೇವೆಯೋ ಹಾಗೆ ಆಗ ಮಠಗಳು ವಿದ್ಯಾರ್ಥಿಗಳಿಗೆ ಉಚಿತ ಆಶ್ರಯ ನೀಡುತ್ತಿದ್ದವು,'' ಎಂದರು.

''ಕೋವಿಡ್ ಸಂದರ್ಭ ಪ್ರವಚನಗಳೇ ಇಲ್ಲದ ನಮ್ಮಂತಹ ಎಷ್ಟೋ ಮಠಗಳಿಗೆ ಆರ್ಥಿಕ ನೆರವು ನೀಡುವ ಮೂಲಕ ಸುತ್ತೂರು ಮಠದ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ರಕ್ಷಣೆಗೆ ನಿಂತಿದ್ದನ್ನು ಮರೆಯುವಂತಿಲ್ಲ. ಬಸವಣ್ಣನವರನ್ನು ಸಾಂಸ್ಕೃತಿಕ ರಾಯಭಾರಿ ಎಂದು ಘೋಷಣೆ ಮಾಡುವ ಹಿಂದೆ ಸುತ್ತೂರು ಶ್ರೀಗಳ ಕೊಡುಗೆಯೂ ಇದೆ,'' ಎಂದರು.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ ಕ್ಯಾನ್ಸರ್ ತಜ್ಞ ಡಾ.ಸಿ.ರಾಮಚಂದ್ರ ಮಾತನಾಡಿ, ''ಚಿಕ್ಕ ಮಕ್ಕಳಲ್ಲೇ ಹೆಚ್ಚು ಬೊಜ್ಜು


ನಂಜನಗೂಡು ತಾಲೂಕಿನ ಸುತ್ತೂರಿನಲ್ಲಿ ಆದಿ ಜಗದ್ಗುರು ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವ ಅಂಗವಾಗಿ ಉತ್ಸವಮೂರ್ತಿ ಮೆರವಣಿಗೆ ನಡೆಯಿತು.

ಕಾಣಿಸಿಕೊಳ್ಳುತ್ತಿರುವುದರಿಂದ ಅದು ಕ್ಯಾನ್ಸರ್‌ಗೆ ಕಾರಣವಾಗುತ್ತಿದೆ. ತಂಬಾಕು ಸೇವನೆಯಿಂದ ಕ್ಯಾನ್ಸರ್ ಜತೆಗೆ ಹೃದಯ ಸಂಬಂಧಿ ಕಾಯಿಲೆಗೂ ತುತ್ತಾಗುತ್ತಿದ್ದಾರೆ. ಸಣ್ಣ ಮಕ್ಕಳಲ್ಲಿ ರಕ್ತ ಕ್ಯಾನ್ಸರ್ ಕೂಡ ಕಾಣಿಸಿಕೊಳ್ಳುತ್ತಿರುವುದು ಆಘಾತಕಾರಿ ಅಂಶವಾಗಿದೆ. ಇದಕ್ಕೆಲ್ಲಾ ಪಾಶ್ಚಿಮಾತ್ಯ ಆಹಾರ ಶೈಲಿ ರೂಢಿಸಿಕೊಂಡಿರುವುದು ಹಾಗೂ ಶಿಸ್ತುಬದ್ಧವಲ್ಲದ ಜೀವನ ಕ್ರಮವೇ ಕಾರಣವಾಗಿದೆ,'' ಎಂದು ಆತಂಕ ವ್ಯಕ್ತಪಡಿಸಿದರು.

**ಸಾಧಕರಿಗೆ ಸನ್ಮಾನ:** ನಾಡೋಜ ಪ್ರಶಸ್ತಿ ಪುರಸ್ಕೃತ ರಮಣಶ್ರೀ ಪ್ರತಿಷ್ಠಾನ ಹಾಗೂ ಸಮೂಹ ಸಂಸ್ಥೆಯ ಅಧ್ಯಕ್ಷ ಎಸ್.ಷಡಾಕ್ಷರಿ, ಗೌರವ ಡಾಕ್ಟರೇಟ್ ಪುರಸ್ಕೃತರಾದ ಮಾಜಿ ಕ್ರಿಕೆಟಿಗ ಜಾವಗಲ್ ಶ್ರೀನಾಥ್, ಅರವಿಂದ ಜತ್ತಿ, ಹಿರಿಯ ಪತ್ರಿಕೋದ್ಯಮಿ ಕೆ.ಬಿ.ಗಣಪತಿ, ಪೂಡೇ ಪಿ.ಕೃಷ್ಣ ಪ್ರಸಕ್ತ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ನಿಷ್ಕಲ ಮಂಟಪದ ನಿಜಗುಣಾನಂದ ಸ್ವಾಮೀಜಿ, ಬೆಂಗಳೂರಿನ ಮಿಥಿಕ್ ಸೊಸೈಟಿ, ಡಾ.ಸಿ.ರಾಮಚಂದ್ರ, ಕೆ.ಟಿ.ಚಂದು, ಪ್ರೊ.ಸಿ.ನಾಗಣ್ಣ, ಡಾ.ಕಬ್ಬಿನಾಲೆ ವಸಂತ ಭಾರದ್ವಾಜ್, ಪಿ.ಗಂಗಾಧರಸ್ವಾಮಿ, ಮಹದೇವು, ಗೌರಯ್ಯ, ಜವರಪ್ಪ ಅವರನ್ನು ಶ್ರೀಮಠದಿಂದ ಸನ್ಮಾನಿಸಲಾಯಿತು.

ಜ್ಯೋತಿಷಿ ಡಾ.ಕೆ.ಜಿ.ಪುಟ್ಟಹೊನ್ನಯ್ಯ ಅವರು ಸಿದ್ಧಪಡಿಸಿ ಭಾರತೀಯ ಜ್ಯೋತಿರ್ವಿಜ್ಞಾನ ಸಂಶೋಧನಾ ಕೇಂದ್ರದಿಂದ ಪ್ರಕಟಿಸಿರುವ ಶ್ರೀ ಕ್ರೋಧಿ ಸಂವತ್ಸರದ 'ಸುತ್ತೂರು ಶ್ರೀ ಶಿವರಾತ್ರೀಶ್ವರ ಪಂಚಾಂಗ' ಮತ್ತು ಜೆಎಸ್‌ಎಸ್ ಮಹಾವಿದ್ಯಾಪೀಠದ ಕನ್ನಡ ಮತ್ತು ಇಂಗ್ಲಿಷ್ ಟೇಬಲ್ ಕ್ಯಾಲೆಂಡರ್ ಬಿಡುಗಡೆ ಮಾಡಲಾಯಿತು.

ಬೆಂಗಳೂರಿನ ಶ್ರೀ ಚೈತನ್ಯ ಶಾಲೆಯ ವಿದ್ಯಾರ್ಥಿನಿ ಕೆ.ನೇತ್ರಾ ಪರ್‌ಸನ್ ಅವರು ರಚಿಸಿರುವ 'ಒನ್ ಮೈಂಡ್ ಗೇಮ್' ಕೃತಿ ಲೋಕಾರ್ಪಣೆಗೊಳಿಸಲಾಯಿತು.

ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು. ಮಾಜಿ ಸಂಸದ ಕಾಗಲವಾಡಿ ಶಿವಣ್ಣ, ನಿವೃತ್ತ ಐಎಎಸ್ ಅಧಿಕಾರಿ ಚಂದ್ರಶೇಖರ್ ಉಪಸ್ಥಿತರಿದ್ದರು.

### ಉತ್ಸವಮೂರ್ತಿ ಮೆರವಣಿಗೆ

ಆದಿಜಗದ್ಗುರು ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವ ಅಂಗವಾಗಿ ಆಕರ್ಷಕ ಕಲಾತಂಡಗಳೊಂದಿಗೆ ಉತ್ಸವಮೂರ್ತಿ ಮೆರವಣಿಗೆ ನಡೆಯಿತು. ಅಲಂಕೃತ ಸಾರೋಟ್‌ನಲ್ಲಿ ಉತ್ಸವಮೂರ್ತಿಯನ್ನು ಪ್ರತಿಷ್ಠಾಪಿಸಿ ಗದ್ದುಗೆಯಿಂದ ಶ್ರೀಮಠಕ್ಕೆ ಮೆರವಣಿಗೆ ಮೂಲಕ ಕರೆದುಕೊಂಡು ಬರಲಾಯಿತು. ಇದಕ್ಕೂ ಮುನ್ನ ಕರ್ತೃ ಗದ್ದುಗೆಯಲ್ಲಿ ರುದ್ರಾಭಿಷೇಕ, ಸಹಸ್ರನಾಮಾವಳಿ, ಶಿವರಾತ್ರೀಶ್ವರ ಅಷ್ಟೋತ್ತರ ಸೇರಿದಂತೆ ವಿಶೇಷ ಪೂಜೆಗಳು ಜರುಗಿದವು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

VIJAYAVANI • BENGALURU
ಮಂಗಳವಾರ 9 ಜನವರಿ 2024
9 JANUARY 2024

### ನಾಡೋಜ ಡಾ. ವೂಡೇ ಪಿ. ಕೃಷ್ಣ ಅಭಿಮತ | ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಹಾಲಪ್ಪ ಪುಸ್ತಕ ಲೋಕಾರ್ಪಣೆ

# ಡಾ. ಎನ್.ಎಚ್.ಹಾಲಪ್ಪ ಬದುಕು ತ್ಯಾಗದ ಸಂಕೇತ

**ಬೆಂಗಳೂರು:** ತ್ಯಾಗ ಮನೋಭಾವದ ಡಾ.ಎನ್.ಎಚ್.ಹಾಲಪ್ಪ ತಮ್ಮ ನಿಷ್ಕಳಂಕ ಬದುಕಿನ ಮೂಲಕ ಎಲ್ಲರಿಗೂ ಪ್ರಿಯವಾದರು. ಆಧ್ಯಾತ್ಮ ಜೀವಿಯಾಗಿದ ಅವರು, ಶಾಂತಸ್ವರೂಪಿ. ವೈದ್ಯ ವೃತ್ತಿಯಲ್ಲಿದ್ದಾಗ ಬಡವರ ಸ್ನೇಹಿಯಾಗಿ ಕಾರ್ಯನಿರ್ವಹಿಸಿದರು ಎಂದು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ.ಕೃಷ್ಣ ಹೇಳಿದರು.

ನಗರದ ಕನ್ನಡ ಸಾಹಿತ್ಯ ಪರಿಷತ್ತಿನ ಕೃಷ್ಣರಾಜ ಸಭಾಂಗಣದಲ್ಲಿ ಸೋಮವಾರ ಆಯೋಜಿಸಿದ್ದ ಡಾ.ಎನ್.ಎಚ್.ಹಾಲಪ್ಪ ಪುಸ್ತಕ ಬಿಡುಗಡೆ ಕಾರ್ಯ ಕ್ರಮದಲ್ಲಿ ಮಾತನಾಡಿದರು. ಆತ್ಮವಿಶ್ವಾಸ ಇದ್ದಾಗ ಉತ್ತಮ ವ್ಯಕ್ತಿಯಾಗಲು ಸಾಧ್ಯ. ಆಧ್ಯಾತ್ಮದ ಶಕ್ತಿಯಿಂದ ಹಾಲಪ್ಪ ತಮ್ಮ ಮನಸ್ಸನ್ನು ಶಾಂತವಾಗಿರಿಸಿಕೊಳ್ಳುತ್ತಿದ್ದರಿಂದ ಜನಪರ ಸಾಧನೆ ಮಾಡಲು ಸಾಧ್ಯವಾಗಿದೆ ಎಂದರು.

ಡಾ.ಎನ್.ಎಚ್.ಹಾಲಪ್ಪ ಅವರಲ್ಲಿ ಗ್ರಾಮೀಣ ಬದುಕಿನ ಪ್ರೀತಿ, ಕಾಳಜಿ ಹಾಗೂ ಜನಸೇವೆಯ ತುಡಿತ ಇದೆ. ಅವರು ಯಾವತ್ತೂ ಭೇದ ತೋರದೆ, ಚಿಕಿತ್ಸೆ ನೀಡಿದ್ದಾರೆ. ಎಲ್ಲರೂ ನಮ್ಮವರು ಎಂದುಕೊಂಡು ಕೆಲಸ ಮಾಡಿದ್ದರಿಂದಲೇ ಅವರಿಗಿಂದು ಆತ್ಮತೃಪ್ತಿಯ ಜೀವನ ನಡೆಸಲು ಸಾಧ್ಯವಾಗುತ್ತಿದೆ ಎಂದರು. ವೈದ್ಯಕೀಯ ಕ್ಷೇತ್ರ ಇಂದು ವಾಣಿಜ್ಯೀಕರಣವಾಗಿದ್ದು, ದುಡ್ಡು ಮುಖ್ಯ ಎಂಬಂತಾಗಿದೆ. ಆದರೆ ಹಾಲಪ್ಪ ಸೇವಾಮನೋಭಾವದೊಂದಿಗೆ ತಮ್ಮ ವೃತ್ತಿ ನಿರ್ವಹಿಸಿದರು. ಹೀಗಾಗಿ ಅವರ ಬದುಕು ಇಂದಿನ ತಲೆಮಾರಿಗೆ ಪ್ರೇರಣೆಯಾಗಿದೆ ಎಂದು ಹೇಳಿದರು.



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸೋಮವಾರ ಆಯೋಜಿಸಿದ್ದ ಡಾ.ಎನ್.ಎಚ್. ಹಾಲಪ್ಪ ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಡಾ. ವೂಡೇ ಪಿ.ಕೃಷ್ಣ, ಡಾ. ಹಾಲಪ್ಪ, ಕೆಪಿಸಿಸಿ ಪ್ರಧಾನ ಕಾರ್ಯದರ್ಶಿ ಮುರಳೀಧರ ಹಾಲಪ್ಪ, ದಯಾನಂದ ಸಾಗರ್ ತಾಂತ್ರಿಕ ವಿವಿ ಪ್ರಾಂಶುಪಾಲ ಡಾ. ಎಚ್.ಕೆ. ರಾಮರಾಜು ಇದ್ದರು.

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ನಾಡೋಜ ಡಾ. ಮಹೇಶ ಜೋಶಿ ಮಾತನಾಡಿ, ಭಾರತೀಯ ಸಂಸ್ಕೃತಿಯಲ್ಲಿ ಗುರು ಹಾಗೂ ವೈದ್ಯರನ್ನು ದೇವರಿಗೆ ಸಮಾನರಾಗಿ ಕಾಣುತ್ತೇವೆ. ಶಿಕ್ಷಕರು ಜೀವನ ರೂಪಿಸಿ ಕೊಟ್ಟರೆ, ವೈದ್ಯರು ಜೀವ ಉಳಿಸುವ ಕೆಲಸ ಮಾಡುತ್ತಾರೆ. ವೈದ್ಯರಾದ ಡಾ.ಎನ್.ಎಚ್. ಹಾಲಪ್ಪ ಆಧ್ಯಾತ್ಮದ ಹಿನ್ನೆಲೆ ಹೊಂದಿದ್ದಾರೆ. ಹೀಗಾಗಿ ಅವರಲ್ಲಿ ಸೇವಾ ಮನೋಭಾವ ಇದೆ. ಜನಪರವಾಗಿ ಕಾರ್ಯನಿರ್ವಹಿಸಿದವರು ಕರ್ಮಯೋಗಿಯಾಗುತ್ತಾರೆ. ಯಾವುದೇ ಫಲಾಪೇಕ್ಷೆಯಿಲ್ಲದೆ ಹಾಲಪ್ಪ ವೈದ್ಯವೃತ್ತಿ ನಿರ್ವಹಿಸಿದ್ದಾರೆ ಎಂದು ಬಣ್ಣಿಸಿದರು.

ಇತಿಹಾಸ ಸಂಶೋಧಕ ಡಾ. ಎನ್. ನಂದೀಶ್ವರ, ಮಧುಮೇಹ ತಜ್ಞ ಡಾ. ಕಾಶಿನಾಥ್ ದೀಕ್ಷಿತ್ ಮತ್ತಿತರರು ಉಪಸ್ಥಿತರಿದ್ದರು.

**ಇಂದಿನ ತಲೆಮಾರಿಗೆ ದಾರಿದೀಪ**

ಆಧ್ಯಾತ್ಮ ಜೀವಿಯಾಗಿರುವ ಡಾ.ಎನ್.ಎಚ್. ಹಾಲಪ್ಪ ಅವರ ವ್ಯಕ್ತಿತ್ವ ಎಲ್ಲರಿಗೂ ಗೊತ್ತಾಗಬೇಕು. ಮನಸ್ಸನ್ನು ಹೇಗೆ ಸ್ಥಿಮಿತದಲ್ಲಿ ಇಟ್ಟುಕೊಳ್ಳಬಹುದು ಎಂಬುದಕ್ಕೆ ಅವರು ಉದಾಹರಣೆ. ಅವರಲ್ಲಿರುವ ತ್ಯಾಗ ಹಾಗೂ ಜನಪರ ಗುಣ ಇಂದಿನ ತಲೆಮಾರಿಗೆ ದಾರಿದೀಪವಾಗಿದೆ. ಪ್ರಸ್ತುತ ಈ ಕೃತಿಯ ಮೂಲಕ ಹಾಲಪ್ಪ ಅವರ ಬದುಕಿನ ಮಾಹಿತಿಗೆ ಬರವಣಿಗೆಯ ರೂಪ ಕೊಟ್ಟಿದ್ದೇನೆ. ಜತೆಗೆ ಅವರೊಂದಿಗೆ ಒಡನಾಟ ಹೊಂದಿರುವವರ ಬರಹಗಳು ಈ ಕೃತಿಯಲ್ಲಿವೆ ಎಂದು ಕೃತಿ ಲೇಖಕ, ರಾಮನ್ ವಿದ್ಯಾಸಂಸ್ಥೆ ಅಧ್ಯಕ್ಷ ಡಾ.ಎಚ್.ಕೆ.ಗೋಪಾಲಕೃಷ್ಣ ತಿಳಿಸಿದರು.

ಮಾರ್ದನಿ

09–01–2024 ಮಂಗಳವಾರ




ಬೆಂಗಳೂರಿನ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ 52 ನೇ ವಾರ್ಷಿಕೋತ್ಸವ ಸಮಾರಂಭವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೆ ಪಿ. ಕೃಷ್ಣ ಅವರು ಉದ್ಘಾಟಿಸಿದರು. ವೇದಿಕೆಯಲ್ಲಿ : ಚಲನಚಿತ್ರ ಹಾಸ್ಯ ಕಲಾವಿದ ಮಿಮಿಕ್ರಿ ದಯಾನಂದ್. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಎಂ.ಎಸ್.ನಟರಾಜ್ . ಕೆ.ಕೃಷ್ಣಸ್ವಾಮಿ. ಟಿ.ಎ.ಅನಂತರಾಮು. ಕಾಲೇಜಿನ ಪ್ರಾಂಶುಪಾಲ ಪ್ರೊ.ಆರ್.ವಿ.ಮಂಜುನಾಥ್. ಸಾಂಸ್ಕೃತಿಕ ಸಮಿತಿಯ ಸಂಚಾಲಕ ಡಾ.ಎಸ್.ರಾಮಲಿಂಗೇಶ್ವರ ಇದ್ದಾರೆ.

ಕಲಾಪ್ರಿಯ 09-01-2024




ಬೆಂಗಳೂರಿನ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ 52 ನೇ ವಾರ್ಷಿಕೋತ್ಸವ ಸಮಾರಂಭವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೆ ಪಿ. ಕೃಷ್ಣ ಅವರು ಉದ್ಘಾಟಿಸಿದರು. ವೇದಿಕೆಯಲ್ಲಿ : ಚಲನಚಿತ್ರ ಹಾಸ್ಯ ಕಲಾವಿದ ಮಿಮಿಕ್ರಿ ದಯಾನಂದ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಎಂ.ಎಸ್.ನಟರಾಜ್, ಕೆ.ಕೃಷ್ಣಸ್ವಾಮಿ, ಬಿ.ಎ.ಅನಂತರಾಮು, ಕಾಲೇಜಿನ ಪ್ರಾಂಶುಪಾಲ ಪ್ರೊ.ಆರ್.ವಿ.ಮಂಜುನಾಥ್, ಸಾಂಸ್ಕೃತಿಕ ಸಮಿತಿಯ ಸಂಚಾಲಕ ಡಾ.ಎಸ್.ರಾಮಲಿಂಗೇಶ್ವರ ಇದ್ದಾರೆ.

ರಾಮನಗರಂ ವಾರ್ತೆ ದಿನ ಪತ್ರಿಕ
09.01.2024




ಬೆಂಗಳೂರಿನ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ 52ನೇ ವಾರ್ಷಿಕೋತ್ಸವ ಸಮಾರಂಭವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೆ ಪಿ.ಕೃಷ್ಣ ಅವರು ಉದ್ಘಾಟಿಸಿದರು. ವೇದಿಕೆಯಲ್ಲಿ: ಚಲನಚಿತ್ರ ಹಾಸ್ಯ ಕಲಾವಿದ ಮಿಮಿಕ್ರಿ ದಯಾನಂದ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಎಂ.ಎಸ್.ನಟರಾಜ್, ಕೆ.ಕೃಷ್ಣಸ್ವಾಮಿ, ಬಿ.ಎ.ಅನಂತರಾಮು, ಕಾಲೇಜಿನ ಪ್ರಾಂಶುಪಾಲ ಪ್ರೊ.ಆರ್.ವಿ.ಮಂಜುನಾಥ್, ಸಾಂಸ್ಕೃತಿಕ ಸಮಿತಿಯ ಸಂಚಾಲಕ ಡಾ.ಎಸ್.ರಾಮಲಿಂಗೇಶ್ವರ ಇದ್ದಾರೆ.

# ಹೊಸ ದಿಗಂತ

ಮಂಗಳವಾರ, 9 ಜನವರಿ 2024, ಬೆಂಗಳೂರು


ಶೇಷಾದ್ರಿಪುರ ಸ್ವತಂತ್ರ ಪದವಿ ಪೂರ್ವ ಕಾಲೇಜಿನ 52ನೇ ವಾರ್ಷಿಕೋತ್ಸವ ಸಮಾರಂಭವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ.ವೂಡೆ ಪಿ.ಕೃಷ್ಣ ಉದ್ಘಾಟಿಸಿದರು. ಈ ವೇಳೆ ಕಲಾವಿದ ಮಿಮಿಕ್ರಿ ದಯಾನಂದ್, ಶೇಷಾದ್ರಿಪುರ ಎಜುಕೇಷನ್ ಟ್ರಸ್ಟ್ ಅಧ್ಯಕ್ಷ ಎನ್.ಆರ್.ಪಂಡಿತ್ ಆರಾಧ್ಯ, ಕಾಲೇಜಿನ ಪ್ರಾಂಶುಪಾಲ, ಪ್ರೊ. ಆರ್.ವಿ.ಮಂಜುನಾಥ್ ಮುಂತಾದವರಿದ್ದರು.




ಜನದನಿಯ ಸಾರಥಿ
ವಾರ್ತಾ ಭಾರತಿ

Jan 9, 2024

# ಕನ್ನಡ ವಾತಾವರಣದಲ್ಲಿ ಇಂಗ್ಲಿಷ್ ಕಲಿಯುವುದರಿಂದ ಅಪಾಯ ಇಲ್ಲ

**ವೂಡೇ ಕೃಷ್ಣ**



ಬೆಂಗಳೂರು, ಜ.8: ಆಧುನಿಕತೆಯ ವೇಗಕ್ಕೆ ತಕ್ಕಂತೆ ನಮ್ಮ ಭಾಷೆ ಮತ್ತು ಸಂಸ್ಕೃತಿಯನ್ನು ಮೈಗೂಡಿಸಿಕೊಳ್ಳಬೇಕು. ಹೀಗಾಗಿ ಕನ್ನಡ ವಾತಾವರಣದಲ್ಲಿ ಇಂಗ್ಲಿಷ್ ಕಲಿಯುವುದರಿಂದ ಯಾವುದೇ ಅಪಾಯ ಇಲ್ಲ ಎಂದು ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್‌ನ ಕಾರ್ಯದರ್ಶಿ ನಾಡೋಜ, ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟಿದ್ದಾರೆ.

ಸೋಮವಾರ ಶೇಷಾದ್ರಿಪುರಂ ಸ್ವತಂತ್ರ ಪಿಯು ಕಾಲೇಜಿನ 52ನೇ ವಾರ್ಷಿಕೋತ್ಸವ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಸ್ಪರ್ಧಾತ್ಮಕ ಜಗತ್ತಿನಲ್ಲಿ ಭಾಷೆಯ ಬಳಕೆ ಮತ್ತು ಕಲಿಕೆ ಬಹಳ ಪ್ರಮುಖವಾಗಿದ್ದು, ಇಂಗ್ಲಿಷ್ ಅತ್ಯಂತ ಅವಶ್ಯದ ಭಾಷೆಯಾಗಿದೆ. ಆದರೆ ಕನ್ನಡ ವಾತಾವರಣದಲ್ಲಿ ಇಂಗ್ಲಿಷನ್ನು ಕಲಿಯುವುದನ್ನು ವಿದ್ಯಾರ್ಥಿಗಳು ರೂಢಿಸಿಕೊಳ್ಳಬೇಕು ಎಂದರು.

ಯಾವುದೇ ಶಿಕ್ಷಣ ಸಂಸ್ಥೆಗಳಿಂದ ಎಷ್ಟು ಪದವಿದರರು ತಯಾರಾದರೂ ಎಂಬುದಕ್ಕಿಂತ, ಮೌಲ್ಯಯುತ ಬದುಕನ್ನು ರೂಪಿಸಿಕೊಳ್ಳುವ ಎಷ್ಟು ಸತ್ಪ್ರಜೆಗಳನ್ನು ಸಮಾಜಕ್ಕೆ ನೀಡಿವೆ ಎಂಬುದು ಮುಖ್ಯವಾಗುತ್ತದೆ. ಈ ನಿಟ್ಟಿನಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಕಾರ್ಯ ಗೌರವಾರ್ಹ ಎಂದು ಅವರು ಹೇಳಿದರು.

ಮಿಮಿಕ್ರಿ ದಯಾನಂದ ಮಾತನಾಡಿ, ಶಿಕ್ಷಣ ಕೇವಲ ಪಠ್ಯದಲ್ಲಿ ಮಾತ್ರವಲ್ಲ, ನಮ್ಮ ಸುತ್ತಮುತ್ತಲಿನ ಪರಿಸರದಲ್ಲೂ ದೊರೆಯುತ್ತದೆ. ಕಷ್ಟ, ಸಮಸ್ಯೆಗಳನ್ನು ಅನುಭವಿಸಿ ಜೀವನದ ಮೌಲ್ಯವನ್ನು ಅರಿತು ಉನ್ನತ ಸ್ಥಾನ ತಲುಪಿದ ನಂತರ, ನೀವು ಶಿಕ್ಷಣ ಕಲಿತ ಕಾಲೇಜನ್ನು, ಶಿಕ್ಷಕರನ್ನು ಮರೆಯಬೇಡಿ ಎಂದು ಹೇಳಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ ಮಾತನಾಡಿ, ಪಿಯುಸಿ ವಿದ್ಯಾರ್ಥಿಗಳ ಮುಂದಿನ ಜೀವನವನ್ನು ರೂಪಿಸುವ ಪ್ರಮುಖವಾದ ಘಟ್ಟವಾಗಿದೆ. ಈ ಹಂತದಲ್ಲಿ ವಿದ್ಯಾರ್ಥಿಗಳು ಬಹಳ ಎಚ್ಚರಿಕೆಯಿಂದ ಹೆಜ್ಜೆ ಇಡಬೇಕು. ತಾಯಿ, ತಂದೆ ಮತ್ತು ಗುರುಗಳು ನಿಮ್ಮ ಪಾಲಿಗೆ ದೇವರಿದ್ದಂತೆ ಎಂದು ತಿಳಿಸಿದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಟ್ರಸ್ಟಿ ಬಿ.ಎ.ಅನಂತರಾಂ, ಕೆ.ಕೃಷ್ಣಸ್ವಾಮಿ, ರಾಜು ಚಂದ್ರಶೇಖರ್, ಸಾಂಸ್ಕೃತಿಕ ಸಂಚಾಲಕ ಡಾ.ಸಿಸಿರಾ ಮತ್ತು ಕಾಲೇಜಿನ ಸಿಬ್ಬಂದಿ ಉಪಸ್ಥಿತರಿದ್ದರು.

ಕನ್ನಡಪ್ರಭ
ಸೋಮವಾರ 1.01.2024

# ‘ಗುಣಮಟ್ಟದ ಶಿಕ್ಷಣವು ಸಂಸ್ಥೆಗಳ ಉದ್ದೇಶವಾಗಲಿ’

• **ಕನ್ನಡಪ್ರಭ ವಾರ್ತೆ** ಯಲಹಂಕ

ಶೈಕ್ಷಣಿಕ ಸಂಸ್ಥೆಗಳ ಮೂಲ ಉದ್ದೇಶ ಗುಣಮಟ್ಟದ ಶಿಕ್ಷಣವಾಗಬೇಕು. ಗುಣಮಟ್ಟದ ಶಿಕ್ಷಣ ನೀಡುವ ಮೂಲಕ ವಿದ್ಯಾರ್ಥಿಗಳನ್ನು ಬೆಳೆಸುವುದರ ಜತೆಗೆ ಶಿಕ್ಷಣ ಸಂಸ್ಥೆಗಳು ತಾವೂ ಬೆಳೆಯಬೇಕು ಎಂದು ಕರ್ನಾಟಕ ರಾಜ್ಯ ಉನ್ನತ ಶಿಕ್ಷಣ ಪರಿಷತ್‌ನ ಉಪಾಧ್ಯಕ್ಷ ಡಾ.ಎಸ್.ಆರ್. ನಿರಂಜನ ಅಭಿಪ್ರಾಯಪಟ್ಟರು.

ಶೇಷಾದ್ರಿಪುರಂ ಸಮೂಹ ಶಿಕ್ಷಣ ಸಂಸ್ಥೆಗಳ ವತಿಯಿಂದ ಯಲಹಂಕ ಉಪನಗರದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ಆವರಣದಲ್ಲಿ ಶನಿವಾರ ಆಯೋಜಿಸಿದ್ದ 25ನೇ ವಾರ್ಷಿಕ ಸ್ನೇಹ ಸಮ್ಮಿಲನ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.

ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಪ್ರಧಾನ ಕಾರ್ಯದರ್ಶಿ ಡಾ।ವೂಡೆ ಪಿ.ಕೃಷ್ಣ, ಉಪಾಧ್ಯಕ್ಷ ಟಿ.ಎಸ್.ಹೆಂಜಾರಪ್ಪ, ಡಬ್ಲ್ಯೂಎಚ್ ಅನಿಲ್ ಕುಮಾರ್, ಕೋಷಾಧ್ಯಕ್ಷ ಬಿ.ಎಂ.ಪಾರ್ಥಸಾರಥಿ, ಜಂಟಿ ಕಾರ್ಯದರ್ಶಿ ಶೇಷನಾರಾಯಣ, ಸಹಾಯಕ ಕಾರ್ಯದರ್ಶಿ ಎಂ.ಎಸ್. ನಟರಾಜ್, ಪ್ರಾಂಶುಪಾಲ ಡಾ। ವೆಂಕಟೇಶ್ ಇದ್ದರು.

# 12 ಮಂದಿ ಸಾಧಕರಿಗೆ ಹಂಸ ಸಮ್ಮಾನ್ ಪ್ರಶಸ್ತಿ ಪ್ರದಾನ



■ ಪ್ರಜಾಪ್ರಗತಿ.ಕಾಂ

**ಬೆಂಗಳೂರು:** ಸಾಹಿತ್ಯ– ಸಂಗೀತ ಸಂಸ್ಕೃತಿಯ ಕುರಿತು ಅರಿವು ಮೂಡಿಸುವಂತೆ ನಮ್ಮ ಆಹಾರ ಪದ್ಧತಿಯ ಕುರಿತು ಇಂದಿನ ಯುವ ಪೀಳಿಗೆಯವರಿಗೆ ಜಾಗೃತಿ ಮೂಡಿಸಬೇಕಾದ ಅನಿವಾರ್ಯತೆ ಇದೆ ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌ. ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ. ಕೃಷ್ಣ ಅಭಿಪ್ರಾಯ ವ್ಯಕ್ತಪಡಿಸಿದರು.

ಅವರು ಹಂಸಜ್ಯೋತಿಯ 48ನೇ ವರ್ಷಾಕೋತ್ಸವ ಸಂದರ್ಭದಲ್ಲಿ ಬೆಂಗಳೂರು ನಗರ ಮಲ್ಲತ್ತಹಳ್ಳಿಯ ಕಲಾಗ್ರಾಮದ ಸಾಂಸ್ಕೃತಿಕ ಸಮುಚ್ಚಯ ಭವನದಲ್ಲಿ ಕೃಷ್ಣಂ ಕಲಯ ಸಖಿ ಹಂಸ ಗಾನ - ನಾಟ್ಯ ಸಂಭ್ರಮ ಮತ್ತು ಹಂಸ ಸಮ್ಮಾನ್ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮಾತನಾಡಿದರು.

ಬೆಂ. ನಗರ ಜಿಲ್ಲೆ ಅಬಕಾರಿ ಇಲಾಖೆ ಉಪ ಆಯುಕ್ತ ಡಾ.ಬಿ.ಆರ್.ಹಿರೇಮಠ್ ಅಧ್ಯಕ್ಷತೆ ವಹಿಸಿದ್ದ ಕಾರ್ಯಕ್ರಮದಲ್ಲಿ ನಾಡಿನ ಸಾಮಾಜಿಕ, ಶೈಕ್ಷಣಿಕ, ಸಾಹಿತ್ಯಕ, ಧಾರ್ಮಿಕ, ಸೇವಾ ವಲಯ 12 ಮಂದಿ ಸಾಧಕೋತ್ತಮರಾದ ವೇದ- ಜೋತಿಷ್ಯ ವಾಸ್ತು ಶಾಸ್ತ್ರ ಪರಿಣತ ಟಿ.ವಿ.ವಿಶ್ವನಾಥ ಅಯ್ಯರ್, ಮೈಸೂರು ಸಾಂಪ್ರದಾಯಿಕ ಶೈಲಿಯ ಖ್ಯಾತ ಚಿತ್ರಕಲಾವಿದೆ ಡಾ. ಮೀರಾ ಕುಮಾರ್, ಸಾಮಾಜಿಕ , ಶೈಕ್ಷಣಿಕ ಮತ್ತು ಧಾರ್ಮಿಕ ಕ್ಷೇತ್ರ ಅಭಿವೃದ್ಧಿಯ ಹರಿಕಾರ ಎಸ್.ವೀರಭದ್ರಯ್ಯ, ಭಾರತೀಯ ಸಾರ್ವಜನಿಕ ಸಂಪರ್ಕ ಪರಿಷತ್ತು ರಾಷ್ಟ್ರೀಯ ಅಧ್ಯಕ್ಷೆ ಎಸ್.ಗೀತಾ ಶಂಕರ್, ವಿಕ್ಟೋರಿಯ ಆಸ್ಪತ್ರೆಯ ಸಹಾಯಕ ಆಡಳಿತಾಧಿಕಾರಿ ಆರ್.ಶ್ರೀನಿವಾಸ್, ಬೆಂಗಳೂರು ವಿವಿ ವಾಣಿಜ್ಯ ಮತ್ತು ನಿರ್ವಹಣಾ ವಿಭಾಗದ ಡೀನ್ ಡಾ.ಆರ್.ಸರ್ವಮಂಗಳ , ವಾಸ್ತು ಶಿಲ್ಪ ತಜ್ಞ ಬಿ.ಕೆ.ಮುರಳೀಧರ , ರಂಗ ಸಜ್ಜಿಕೆ , ಬೆಳಕು ಮತ್ತು ಧ್ವನಿ ತಜ್ಞ ಬಿ.ಕೆ.ರವಿಶಂಕರ್ , ಕ್ರೀಡಾ ಪಟು ಜಯರಾಂಶೆಟ್ಟಿ , ನೃತ್ಯ ತರಬೇತುದಾರೆ ವಿದುಷಿ ರೂಪಶ್ರೀ ಮಧುಸೂಧನ್ , ಸಂಸ್ಕೃತಿ ಚಿಂತಕ, ಅಂಕಣಕಾರ , ಪ್ರಣವ ಮೀಡಿಯಾ ಹೌಸ್ ಪ್ರಕಾಶನದ ನಿರ್ದೇಶಕ ಡಾ.ಗುರುರಾಜ ಪೋಶೆಟ್ಟಿಹಳ್ಳಿ ಮತ್ತು ವಚನ, ಜಾನಪದ ನೃತ್ಯ ಸಂಯೋಜಕಿ ಸ್ನೇಹ ಕಪ್ಪಣ್ಣ ರವರುಗಳಿಗೆ ಈ ಸಾಲಿನ ಪ್ರತಿಷ್ಠಿತ ಹಂಸ ಸಮ್ಮಾನ್ ಪ್ರಶಸ್ತಿ 2023 ವೀಣಾಪಾಣಿ ಸರಸ್ವತಿಯ ಸ್ಮರಣಿಕೆ , ಅಭಿನಂದನಾ ಪತ್ರ ನೀಡಿ ಗೌರವಿಸಲಾಯಿತು .

ಮುಖ್ಯ ಅತಿಥಿಗಳಾಗಿ ಹಿರಿಯ ರಂಗ ಸಂಘಟಕ , ಕರ್ನಾಟಕ ನಾಟಕ ಅಕಾಡೆಮಿ ಮಾಜಿ ಅಧ್ಯಕ್ಷ ಶ್ರೀನಿವಾಸ ಜಿ ಕಪ್ಪಣ್ಣ , ಬೆಂಗಳೂರು ದೂರದರ್ಶನ ಕೇಂದ್ರದ ನಿವೃತ್ತ ನಿರ್ದೇಶಕ ಜಿ.ಎಂ ಶಿರಹಟ್ಟಿ , ಕಿದ್ವಾಯಿ ಸ್ಮಾರಕ ಗ್ರಂಥಿ ಆಸ್ಪತ್ರೆಯ ನಿವೃತ್ತ ನಿರ್ದೇಶಕ ಡಾ.ಸಿ.ರಾಮಚಂದ್ರ ಹಾಗೂ ಎನ್.ಟಿ.ಪಿ.ಸಿ ಮುಖ್ಯ ಸಲಹೆಗಾರ ಎಂ.ಬಿ.ಜಯರಾಮ್ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು.

ಕಳೆದ 48 ವರ್ಷಗಳಿಂದ ಹಲವಾರು ವೈಶಿಷ್ಟಪೂರ್ಣ ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಂಡು ಬರುತ್ತಿರುವ ಹಂಸಜ್ಯೋತಿಯು ಈ ಬಾರಿ ಕೃಷ್ಣಂ ಕಲಯ ಸಖಿ ಎಂಬ ಶೀರ್ಷಿಕೆಯಡಿ ನಾಡಿನ ಸುಪ್ರಸಿದ್ಧ ಕಲಾವಿದರಾದ ವಿಜಯ ಹಾವನೂರು , ರವೀಂದ್ರ ಸೊರಗಾವಿ ,ಗಣೇಶ ದೇಸಾಯಿ, ದಿವಾಕರ ಕಶ್ಯಪ್ , ಹರೀಶ ನರಸಿಂಹ, ಗುರುರಾಜ ಹೊಳೆನರಸೀಪುರ, ಮಧುರ ರವಿಕುಮಾರ್ , ಶ್ರೀದೇವಿ ಗರ್ತಿಕೆರೆ , ಚಾಂದಿನಿ ಗರ್ತಿಕೆರೆ ಮತ್ತು ಹೆಚ್.ಕೆ .ಅನಘ ರವರು ಶ್ರೀಕೃಷ್ಣ ಸ್ಮರಣೆಯ ವೈವಿಧ್ಯಮಯ ಗಾಯನವನ್ನು ಪ್ರಸ್ತುತಪಡಿಸಿ ಗಾನಸುಧೆಯಿಂದ ರಂಜಿಸಿದರು.. ಡಾ.ಮಾಲಿನಿ ರವಿಶಂಕರ್ ನಿರ್ದೇಶನದ ಲಾಸ್ಯ ವರ್ಧನ ಟ್ರಸ್ಟ್ ನೃತ್ಯ ಶಾಲೆಯ ಕಲಾವಿದರು ಮತ್ತು ರೂಪಶ್ರೀ ಮಧುಸೂಧನ್ ನಿರ್ದೇಶನದ ನೃತ್ಯ ಗಂಗಾ ಪ್ರದರ್ಶನ ಕಲಾಕೇಂದ್ರದವರಿಂದ ಶ್ರೀಕೃಷ್ಣ ಸ್ಮರಣೆಯ ಶಾಸ್ತ್ರೀಯ ನೃತ್ಯ ಜನಮನಸೂರೆಗೊಂಡಿತು.

ಹಂಸಜ್ಯೋತಿ ಟ್ರಸ್ಟ್‌ನ ಸಂಸ್ಥಾಪಕ ವ್ಯವಸ್ಥಾಪಕ ಟ್ರಸ್ಟೀ ಎಂ.ಮುರಳೀಧರ ಮತ್ತು ಹಿರಿಯ ಟ್ರಸ್ಟೀ ಎಂ.ಆರ್.ನಾಗರಾಜ ನಾಯ್ಡು , ವಿಮರ್ಶಕ ಡಾ.ಮೊಳಕಾಲ್ಮೂರು ಶ್ರೀನಿವಾಸಮೂರ್ತಿ, ಹಿರಿಯ ಲೇಖಕಿ ಡಾ.ರಾಧಾ ಕುಲಕರ್ಣಿ, ಕೆಂಗೇರಿ ಎಸ್.ಎ.ಬಿ.ಎಸ್ ಕಾಲೇಜಿನ ಪ್ರಾಂಶುಪಾಲ ಪ್ರೋ.ಜಯರಾಮು ಮೊದಲಾದವರು ಉಪಸ್ಥಿತರಿದ್ದರು.

# 'ಗಾಂಧೀಜಿ ಮತ್ತು ಅಂಬೇಡ್ಕರ್ ಪ್ರಸ್ತುತತೆ' ವಿಷಯದ ಕುರಿತು ದತ್ತಿ ಉಪನ್ಯಾಸ




ಗಾಂಧಿ ಶಾಂತಿ ಪ್ರತಿಷ್ಠಾನ ಮತ್ತು ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಶೇಷಾದ್ರಿಪುರಂ ಸಂಜೆ ಪದವಿ ಕಾಲೇಜು ಸಹಯೋಗದಲ್ಲಿ ಬ್ರಹ್ಮ ಸಮಾಜದ ಮುಖಂಡ ಮತ್ತು ಹಿರಿಯ ಗಾಂಧಿವಾದಿ ಡಬ್ಲ್ಯೂ.ಹೆಚ್. ಹನುಮಂತಪ್ಪ ಸ್ಮಾರಕ ದತ್ತಿ ಉಪನ್ಯಾಸವನ್ನು ನಗರದ ಗಾಂಧಿಭವನದ ಶ್ರೀ ಮೈಲಾರ ಮಹಾದೇವ ಸಭಾಂಗಣದಲ್ಲಿ ಆಯೋಜಿಸಲಾಗಿತ್ತು.

'ಗಾಂಧೀಜಿ ಮತ್ತು ಅಂಬೇಡ್ಕರ್ ಪ್ರಸ್ತುತತೆ' ವಿಷಯದ ಕುರಿತು ದತ್ತಿ ಉಪನ್ಯಾಸವನ್ನು ಹಿರಿಯ ವಿದ್ವಾಂಸ ಮತ್ತು ಕಲಬುರ್ಗಿಯ ಗುಲಬರ್ಗಾ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕ ಡಾ. ಹೆಚ್.ಟಿ. ಪೋತೆ ನೀಡಿ ಮಾತನಾಡುತ್ತ ಈ ಜಗತ್ತು ಕಂಡ ಇಬ್ಬರು ಮಹಾನ್ ವ್ಯಕ್ತಿತ್ವವಾಗಿ, ಭೌತಿಕವಾಗಿ ಎರಡು ಹಿರಿಯ ಚೇತನ ಕಣ್ಮರೆಯಾಗಿದ್ದರು ಅವರು ಪ್ರತಿಪಾದಿಸಿದ ವಿಚಾರಧಾರೆ ಇಂದಿಗೂ ನಮಗೆಲ್ಲ ಮಾರ್ಗದರ್ಶಿಯಾಗಿದೆ. ವಿಚಾರ ಭಿನ್ನಾಭಿಪ್ರಾಯಷ್ಟೇ ವಿನಃ ಗುರಿ ಒಂದೇ ಆಗಿ ದಲಿತೋದ್ಧಾರಕ್ಕೆ ತಮ್ಮದೇ ಆದ ರೀತಿಯಲ್ಲಿ ಕೊಡುಗೆ ನೀಡಿದ್ದಾರೆ.

ಭಾರತದ ಹೊರಗಿನ ಜಗತ್ತಿಗೆ ಬುದ್ಧ-ಬಸವ-ಗಾಂಧಿ-ಅಂಬೇಡ್ಕರ್ ಹತ್ತಿರವಾದಷ್ಟು ನಮ್ಮ ನೆಲದಲ್ಲಿ ಆಗದಿರುವುದು ವಿಷಾದನೀಯ. ಒಬ್ಬರು ಬೆಟ್ಟದ ತುದಿಯಿಂದ ಕೆಳಗಿದು ಬಂದು ಜನಸೇವೆಯಲ್ಲಿ ತೊಡಗಿದರೆ ಮತ್ತೊಬ್ಬರು ಕೆಳಸ್ತರದಿಂದ ಮೇಲಕ್ಕೇರಿ ಸ್ವಾತಂತ್ರ್ಯ-ಸಂವಿಧಾನದ ಮೂಲಕ ದೇಶ ಕಟ್ಟುವ ವಹಿಸಿದ ಪಾತ್ರ ಹಿರಿದಾದದು ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಅಧ್ಯಕ್ಷತೆ ವಹಿಸಿದ್ದ ಹಿರಿಯ ಶಿಕ್ಷಣ ತಜ್ಞ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ, ನಾಡೋಜ ಡಾ. ವೂಡೇ ಪಿ. ಕೃಷ್ಣ, ಗಾಂಧಿ ಮತ್ತು ಅಂಬೇಡ್ಕರ್ ವಿಚಾರಧಾರೆ ಸರಿಯಾದ ರೀತಿಯಲ್ಲಿ ಅನುಷ್ಠಾನ ಗೊಂಡಿದ್ದರೆ ಭಾರತ ಎಂದೋ ವಿಶ್ವಗುರುವಾಗುತಿತ್ತು ಅದರೇ ಹಾಗೆ ಆಗಲಿಲ್ಲ; ಸುಸಂಸ್ಕೃತ ಸಮಾಜ ಒಂದಾಗಲು ಪೂರ್ವಾಗ್ರಹ ಪೀಡಿತರಾಗದೆ ಯುವ ಜನತೆ ಗಾಂಧಿ ಮತ್ತು ಅಂಬೇಡ್ಕರ್ ವಿಚಾರಧಾರೆಯನ್ನು ಅಧ್ಯಯನ ಮಾಡಿ ತನ್ಮೂಲಕ ವಿಚಾರ ದರ್ಶನದಿಂದ ವ್ಯಕ್ತಿತ್ವ ತಿಳಿಯುತ್ತದೆ ಎಂದು ತಿಳಿಸಿದರು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಗೌರವ ಕಾರ್ಯದರ್ಶಿ ಎಂ.ಸಿ. ನರೇಂದ್ರ, ದತ್ತಿ ದಾನಿಗಳ ಪ್ರತಿನಿಧಿ ಡಬ್ಲ್ಯೂ.ಡಿ. ಅಶೋಕ್, ಗಾಂಧಿ ಶಾಂತಿ ಪ್ರತಿಷ್ಠಾನದ ಕಾರ್ಯದರ್ಶಿ ಡಾ. ಸತ್ಯಮಂಗಲ ಮಹಾದೇವ ಹಾಗೂ ಶೇಷಾದ್ರಿಪುರಂ ಸಂಜೆ ಕಾಲೇಜಿನ ಪ್ರಾಂಶುಪಾಲ ಪ್ರೊ. ಎನ್.ಎಸ್. ಸತೀಶ್ ಗೌರವ ಖಜಾಂಚಿ ಸಿಸಿರಾ ಉಪಸ್ಥಿತರಿದ್ದರು.

ಗಾಂಧೀ ಶಾಂತಿ ಪ್ರತಿಷ್ಠಾನ, ಬೆಂಗಳೂರು ಕೇಂದ್ರದ ವತಿಯಿಂದ ಡಬ್ಲ್ಯು. ಹೆಚ್. ಹನುಮಂತಪ್ಪನವರ ಸ್ಮರಣಾರ್ಥ ಪ್ರತೀವರ್ಷ ಡಿಸೆಂಬರ್ ೨೪ರಂದು ಸಾರ್ವಜನಿಕ ಮಹತ್ವದ ವಿಷಯದ ಕುರಿತು ವಾರ್ಷಿಕ ಉಪನ್ಯಾಸವನ್ನು ಅದರ ದತ್ತಿ ಕಾರ್ಯಕ್ರಮದ ಭಾಗವಾಗಿ ಆಯೋಜಿಸಲಾಗುತ್ತಿದೆ.

## ವೂಡೇ ಪಿ. ಕೃಷ್ಣರವರ ಅಂಕಣ ಅದ್ಭುತ

ಅಗೆದು ಬಗೆದು ತೆಗೆದ ಸುದ್ಧಿಯ ತಲೆಬರಹ ನಿಮಗೆ ಅತ್ಯಂತ ಸೂಕ್ತವಾಗಿದೆ ಸಂಪಾದಕರೆ, ಏಕೆಂದರೆ ಕೆಲವಾರು ವರ್ಷಗಳಿಂದ ವೂಡೇ ಪಿ. ಕೃಷ್ಣರವರನ್ನು ಹತ್ತಿರದಿಂದ ನೋಡಿದ್ದೇವೆ, ಕಂಡಿದ್ದೇವೆ, ಅವರ ಸಭೆ ಸಮಾರಂಭಗಳಲ್ಲಿ ಭಾಗಿಯಾಗಿದ್ದೇವೆ, ಆದರೆ ಅವರ ವೈಯಕ್ತಿಕ ಜೀವನ, ಅವರ ಸಾಧನೆ, ಅವರ ಶಿಕ್ಷಣ ಅವರು ನಿರಂತರವಾಗಿ ಕನ್ನಡಪರ ಕೆಲಸ ಕಾರ್ಯಗಳ ಬಗ್ಗೆ ಅವರಿಗಿರುವ ಕಾಳಜಿ ಅಷ್ಟಾಗಿ ನಮಗೆ ಗೊತ್ತಿರಲಿಲ್ಲ. ಆದರೆ ತಾವುಗಳು ವೂಡೇ ಪಿ. ಕೃಷ್ಣರವರ ಬಗ್ಗೆ ಆದಿಜಾಂಬವ ಜಾಗೃತಿ ಪತ್ರಿಕೆಯಲ್ಲಿ ತಾವುಗಳು ಬರೆಯುತ್ತಿರುವ ಅಂಕಣ ತುಂಬ ಚೆನ್ನಾಗಿ ಮೂಡಿಬರುತ್ತಿದೆ. ಹಾಗೂ ನಿಮಗೆ ಗೊತ್ತಿಲ್ಲದ ಅನೇಕ ಮಾಹಿತಿಗಳು, ಅವರು ಸಾಧಿಸಿರುವ, ಸಾಧಿಸುತ್ತಿರುವ ಅನೇಕ ಕೆಲಸ ಕಾರ್ಯಗಳ ಬಗ್ಗೆ ತುಂಬಾ ಚೆನ್ನಾಗಿ ಬರೆಯುತ್ತಿದ್ದು ನಮ್ಮಂತಹವರು ವೂಡೇ ಪಿ. ಕೃಷ್ಣರವರ ಬಗ್ಗೆ ಹೆಚ್ಚಿನ ಮಾಹಿತಿಯನ್ನು ತಿಳಿಯುವಂತೆ ಮಾಡುತ್ತಿರುವಿರಿ.

ಈಗಾಗಿ ನಿಮಗೆ ತುಂಬು ಹೃದಯದ ಅಭಿನಂದನೆಗಳು ಒಟ್ಟಿನಲ್ಲಿ ವೂಡೇ ಪಿ. ಕೃಷ್ಣರವರ ಬಗ್ಗೆ ಬರೆಯುತ್ತಿರುವ ಲೇಖನ ಅದ್ಭುತವಾಗಿದೆ. "ಅಗೆದು, ಬಗೆದು ಸುದ್ಧಿಯನ್ನು ತೆಗೆಯುತ್ತಿದ್ದೀರಿ, ಈ ಲೇಖನ ಮೂಲಕ ವೂಡೇ ಪಿ. ಕೃಷ್ಣರವರಿಗೆ ನಮ್ಮ ಅಭಿನಂದನೆಗಳು.

**ಕೆ. ನಾಗರಾಜಯ್ಯ**, ಹವ್ಯಾಸಿ ಬರಹಗಾರರು, ಬೆಂಗಳೂರು.

## ಆಡು ಮುಟ್ಟದ ಸೊಪ್ಪಿಲ್ಲ – ವೂಡೇ ಪಿ. ಕೃಷ್ಣ

# 24X7 ದಿನದ 24 ಗಂಟೆಯೂ ಮಹಾತ್ಮ ಗಾಂಧೀಜಿಯವರ ನೆನಪು



**ಪರಿಚಯ**

ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ಅಪರೂಪದ ಗಾದೆಯ ಮಾತಿನಂತೆ ವೂಡೇ ಪಿ. ಯವರು ಸರ್ವಜನರ ಪ್ರೀತಿಯ ವ್ಯಕ್ತಿ, ಹುಟ್ಟಿನಿಂದಲೇ ತಂದೆ, ತಾಯಿ, ಅಜ್ಜ, ಅಜ್ಜಿ ಮತ್ತು ಕುಟುಂಬದ ಹಿರಿಯರಿಂದ ಬಳುವಳಿಯಾಗಿ ಪಡೆದಿದ್ದು ಸಂಸ್ಕಾರ, ನಯ, ವಿನಯ ಮಾತಿನಲ್ಲಿ ಪ್ರೀತಿ ವಾತ್ಸಲ್ಯ, ಮಮತೆಯ ಕರುಣಾಮಯಿಯಾಗಿ ರೂಪಗೊಂಡಿರುವ ಅಪ್ಪಟ ಗಾಂಧಿವಾದಿ, ಕೆಲವಾರು ಸಂದರ್ಭದಲ್ಲಿ ವೂಡೇ ಪಿ. ಕೃಷ್ಣರವರು ತುಂಬು ಹೃದಯದಿಂದ ಅಂತರಾಳದಿಂದ ಮನದಾಳದಿಂದ ಹೇಳುವ ನೆನೆಯುವ ಮಾತೆಂದರೆ ಗಾಂಧೀಜಿಯವರು ನನ್ನ ಪಾಲಿನ ಆದರ್ಶ ವ್ಯಕ್ತಿ ಎನ್ನುವ ವೂಡೇ ಪಿ ರವರು, ಗಾಂಧೀಜಿಯವರ ಆದರ್ಶ, ಆಚಾರ ವಿಚಾರಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡಿದ್ದು ನಮ್ಮಂತಹವರಿಗೆ ಸ್ಫೂರ್ತಿಯಾಗಿದ್ದಾರೆ. ಮಹಾತ್ಮ ಗಾಂಧೀಜಿಯವರನ್ನು ಎತ್ತರವಾದ ಸ್ಥಾನದಲ್ಲಿ ಕಂಡರು. ಅವರ ಆದರ್ಶವನ್ನ ಜೀವನದಲ್ಲಿ ಅಳವಡಿಸಿಕೊಂಡಿದ್ದರೂ, ಗೌರವಾನ್ವಿತರಾದ ಐ.ಎನ್.ಎ. ರಾಮರಾವ್, ಪಾಟೀಲ್ ಪುಟ್ಟಪ್ಪ, ಹೆಚ್. ಎಸ್. ದೊರೆಸ್ವಾಮಿ, ಕೆ.ಎಸ್. ನಾರಾಯಣ ಸ್ವಾಮಿ, ಎಸ್. ವಿ. ಮಂಜುನಾಥ, ಡಾ. ಹೊ. ಶ್ರೀನಿವಾಸಯ್ಯ ಡಾ. ಎಂ. ಗುರುದಾಸ್, ದೊಡ್ಡಪ್ಪ ಡಬ್ಲ್ಯೂ. ಹೆಚ್. ಹನುಮಂತಪ್ಪ (ಜೂನಿಯರ್) ತಂದೆ ಡಬ್ಲ್ಯೂ. ಹೆಚ್. ಪುಟ್ಟಯ್ಯ, ಪ್ರೊ. ಹೆಚ್. ಆರ್. ದಾಸೇಗೌಡ, ಡಾ. ಜಿ. ಮಾದೇಗೌಡ ಹೀಗೆ ಸ್ವಾತಂತ್ರ್ಯದ ಹೋರಾಟಗಾರರು, ದೇಶಕ್ಕೆ ಹೋರಾಡಿದ ಮಹನೀಯರು, ಕನ್ನಡ ಬಾಷೆಗಾಗಿ ಹೋರಾಡಿದ ಕನ್ನಡದ ಮಹಾ ಸಾಧಕರು, ಸಾಹಿತಿಗಳು, ಬರಹಗಾರರು, ಪತ್ರಕರ್ತರು, ಚಲನಚಿತ್ರದಲ್ಲಿ ದುಡಿದಂತ ಹೆಸರಾಂತ ನಟ ನಟಿಯರು ಹೀಗೆ ದೇಶ, ನಾಡು ನುಡಿಗಾಗಿ ದುಡಿದಂತ, ದುಡಿಯುತ್ತಿರುವ ಮಹನೀಯರ ಬಗ್ಗೆ ಅಪಾರವಾದ ಗೌರವವನ್ನು ಹೊಂದಿರುತ್ತಾರೆ.

ಹಿರಿಯ ಕವಿ ಸಿದ್ದಯ್ಯ ಪುರಾಣಿಕ್‌ರವರು ಹೇಳಿರುವಂತೆ ಏನಾದರೂ ಆಗು ಮೊದಲು ಮಾನವನಾಗು ಎನ್ನುವಂತೆ ಅಕ್ಷರ ಸಹ ವೂಡೇ ಪಿ ಕೃಷ್ಣರವರು ಜೀವನದಲ್ಲಿ ಏನು ಬೇಕದರೂ ಆಗಬಹುದಿತ್ತು, ಸಾದಿಸಬಹುದಿತ್ತು. ಆದರೆ ಇವರ ನಡೆ, ನುಡಿ, ಗುರಿ, ಈ ನಶ್ವರವಾದ ಪ್ರಪಂಚದಲ್ಲಿ ಹುಟ್ಟಿದ ಮೇಲೆ ನಾವು ಏನನ್ನಾದರೂ ಮಾಡಬೇಕು, ಸಾಧಿಸಬೇಕು ನಿಜ, ಆದರೆ ನಾವು ಮೊದಲು ಒಳ್ಳೆಯ ಮನುಷ್ಯರಾದಾಗ ಮಾತ್ರ ನಾವು ಸಮಾಜಕ್ಕೆ ಏನಾದರೂ ಕೊಡಬಹುದು ಮಾಡಬಹುದು ಎಂಬ ಅರಿವಿನಲ್ಲಿ ವೂಡೇ ಪಿ ಕೃಷ್ಣರವರು ತಮ್ಮ ಜೀವನದ ಅಮೂಲ್ಯವಾದ ಕ್ಷಣಗಳನ್ನು ನೆಮ್ಮದಿಯಿಂದ ಕಳೆಯುತ್ತಿದ್ದಾರೆ. ಇದರ ಜೊತೆಗೆ ದಿನದ 24 ಗಂಟೆಯು ಏನನ್ನಾದರೂ ಮಾಡಬೇಕು, ಸಮಾಜದ ಕೆಲಸವನ್ನಾಗಲಿ, ದೀನ ದಲಿತರ ಕೆಲಸವನ್ನಾಗಲೀ, ರಾಷ್ಟ್ರ ಕಟ್ಟುವ ಕೆಲಸವಾಗಲೀ, ದೇಶಕಟ್ಟುವ ಕೆಲಸವಾಗಲೀ, ಕನ್ನಡ ಭಾಷೆಯ ಕೆಲಸವಾಗಲೀ ಬಹಳ ಉತ್ಸಾಹದಿಂದ ಶ್ರದ್ಧೆಯಿಂದ ಮಾಡುತ್ತಾ ತನ್ನನ್ನು ತಾನು ದೇಶ, ರಾಜ್ಯದ ಸೇವೆಗೆ ಮುಡುಪಾಗಿಟ್ಟಿದ್ದಾರೆ ಎಂಬುದು ನನ್ನಂತಹವನಿಗೆ ಸೂಕ್ಷ್ಮವಾಗಿ ಗೊತ್ತಾಗುತ್ತದೆ.

ಹೀಗೆ ಹತ್ತು ಹಲವು ರೀತಿಯಲ್ಲಿ ಸಮಾಜದಲ್ಲಿನ ಸರ್ವಜನರ ಅದರಲ್ಲೂ ದೀನದಲಿತರ ಶೋಷಿತರ, ಒಪ್ಪತ್ತಿನ ಊಟಕ್ಕೂ ನಿರಂತರವಾಗಿ ಕಷ್ಟಪಡುವವರ ಬಾಳಿಗೆ ಎಲೆಮರೆಯ ಕಾಯಿಯಂತೆ ಪರಿಪೂರ್ಣವಾದ ಸೇವೆಯನ್ನು ಎಲ್ಲೂ ತೋರಿಸಿಕೊಳ್ಳದಂತೆ ನಿರಂತರವಾಗಿ ಮಾಡುತ್ತಾ ಬರುತ್ತಿದ್ದಾರೆ. ಇಷ್ಟೆಲ್ಲದರ ಮಧ್ಯೆ 1923ರಲ್ಲಿ ಪ್ರಾರಂಭಗೊಂಡ ವಿಶೇಷವಾದ ಮತ್ತು ದೇಶದ ಸ್ವತಂತ್ರ ಪೂರ್ವದಲ್ಲಿ "ಹಿಂದೂಸ್ಥಾನಿ ಸೇವಾದಳ" ಸಂಸ್ಥೆಗೆ ಜವಾಹರಲಾಲ್ ನೆಹರುರವರು ಅಧ್ಯಕ್ಷರಾಗಿಯೂ, ಡಾ. ಎನ್. ಎಸ್. ಹರ್ಡಿಕರ್‌ರವರು ಕಾರ್ಯದರ್ಶಿಯಾಗಿಯೂ ಕಾರ್ಯ ನಿರ್ವಹಿಸಿದ್ದರು. ಈ ಸಂಸ್ಥೆಯು ಮುಂದೊಂದು ದಿನ "ಭಾರತ ಸೇವಾದಳ" ಸಂಸ್ಥೆಯಾಯಿತು. ಈ ಭಾರತ ಸೇವಾದಳ ಸಂಸ್ಥೆಯು ಯಾವುದೇ ರಾಜಕೀಯ ಪಕ್ಷಗಳ ಮರ್ಜಿಗೆ ಒಳಗಾಗದೆ ಸ್ವತಂತ್ರ ಸಂಸ್ಥೆಯಾಗಿ ದೇಶದ ಏಕತೆ ಮತ್ತು ಬಾವೈಕ್ಯತೆಗಾಗಿ ನಿರಂತರವಾಗಿ ಶ್ರಮಿಸುತ್ತಿರುವ ಒಂದು ಸಂಸ್ಥೆ ಎಂದರೆ ಅದು ಭಾರತ ಸೇವಾದಳದ ಸಂಸ್ಥೆ ಎಂದು ಹೇಳಬಹುದು. ಇಂತಹ ಒಂದು ಅಪರೂಪದ ಸಂಸ್ಥೆಗೆ ವೂಡೇ ಪಿ. ಕೃಷ್ಣರವರು ಇಷ್ಟಪಟ್ಟು ಹೇಗಾದರೂ ಮಾಡಿ ರಾಷ್ಟ್ರದ ಏಕತೆ ಮತ್ತು ಬಾವೈಕ್ಯತೆಗಾಗಿ ಅಲ್ಪ ಸ್ವಲ್ಪ ಸೇವೆ ಮಾಡಬೇಕೆಂದು ಅಂದು ಭಾರತ ಸೇವಾದಳ ಸಂಸ್ಥೆಗೆ ಸೇರ್ಪಡೆಯಾಗಿ ನಂತರ ಅವರು ಭಾರತ ಸೇವಾದಳದ ಕೇಂದ್ರ ಸಮಿತಿಯ ಗೌರವ ಖಜಾಂಚಿಯಾಗಿ ಕೆಲವಾರು ವರ್ಷಗಳ ಕಾಲ ಸೇವೆ ಸಲ್ಲಿಸಿರುವುದು ನಮ್ಮೆಲ್ಲರ ಹೆಮ್ಮೆ ಪಡುವ ಸಂಗತಿ. ಯಾವಾಗ ಭಾರತ ಸೇವಾದಳದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡರೋ, ಅಗಲೇ ಕರ್ನಾಟಕ ರಾಜ್ಯದಲ್ಲಿ ಭಾರತ ಸೇವಾದಳದ ಸಂಸ್ಥೆಯಿಂದ ಏನಾದರೂ ಸ್ವಲ್ಪ ಒಳ್ಳೆಯ ಕೆಲಸವನ್ನು ಮಾಡಬೇಕೆಂಬ ನಿಟ್ಟಿನಲ್ಲಿ ಕೆಲವೊಂದು ಹೊಸ ಹೊಸ ಕೆಲಸ ಕಾರ್ಯಗಳ ಯೋಜನೆಯ ಬಗ್ಗೆ ಚಿಂತಿಸಿ ಕರ್ನಾಟಕ ರಾಜ್ಯಾದ್ಯಂತ 14,000 (ಹದಿನಾಲ್ಕು) ಸಾವಿರ ಶಾಲೆಗಳಲ್ಲಿ ಸೇವಾದಳದ ಘಟಕಗಳನ್ನು ಸ್ಥಾಪಿಸಿ ಶಾಲೆಯ ಶಿಕ್ಷಕರಿಗಾಗಿಯೇ ಸಾವಿರಾರು ಸೇವಾದಳದ ತರಬೇತಿ ಶಿಬಿರಗಳನ್ನು ಏರ್ಪಡಿಸುವ, ತಾಲ್ಲೂಕು, ಜಿಲ್ಲೆ, ಮತ್ತು ರಾಜ್ಯ ಮಟ್ಟದಲ್ಲಿ ಶಾಲಾ ಮಕ್ಕಳಿಗಾಗಿಯೇ ರಾಷ್ಟ್ರೀಯ ಬಾವೈಕ್ಯತಾ ಶಿಬಿರಗಳನ್ನು ಸಂಘಟಸುವ, ಏರ್ಪಡಿಸುವ ಕೆಲಸಕಾರ್ಯಗಳ ಜೊತೆಗೆ ಡಾ. ಎಂ.ಸಿ. ಮೋದಿ ಸೇವಾದಳ ತರಬೇತಿ ಕೇಂದ್ರವನ್ನು ಪ್ರಾರಂಭಿಸುವ ಕಾರ್ಯಗಳಲ್ಲಿ ವೂಡೇ ಪಿ. ಕೃಷ್ಣರವರು ಅತ್ಯಂತ ಪರಿಪೂರ್ಣವಾದ ಮತ್ತು ಮಹತ್ವಪೂರ್ಣವಾದ ಸೇವೆಯನ್ನು ಮಾಡುವುದರ ಜೊತೆಗೆ ತನ್ನನ್ನು ತಾನು ಈ ನಿಸ್ವಾರ್ಥ ಸಂಸ್ಥೆಗೆ ಅರ್ಪಿಸಿಕೊಂಡಿದ್ದಾರೆ ಎಂದು ಹೇಳಬಹುದು.

ವೂಡೇ ಪಿ. ಕೃಷ್ಣರವರ ಅಂಕಣದಲ್ಲಿ ನಾನು ಈ ಮೊದಲೇ ಬರೆದಿರುವಂತೆ ವೂಡೇ ಪಿ ಯವರು ಮಹಾತ್ಮ ಗಾಂಧಿಜಿಯವರ ಆದರ್ಶ, ಅವರ ಜೀವನ ಬದುಕು, ನಡೆ ನುಡಿಗಳನ್ನು ತನ್ನ ಜೀವನದಲ್ಲಿ ಬಹಳ ಅರ್ಥಪೂರ್ಣವಾಗಿ ಅಳವಡಿಸಿಕೊಂಡು, ಅವರ ಚಿಂತನೆಯ ಹಾದಿಯಲ್ಲಿಯೇ ನಡೆಯುತ್ತಿದ್ದು ಇದರ ಅಡಿಯಲ್ಲಿ ಇಂದಿನ ಯುವ ಜನಾಂಗಕ್ಕಾಗಿ ಸಮಾಜದಲ್ಲಿ ಯುವಕರು ಎಲ್ಲಾ ಕ್ಷೇತ್ರಗಳಲ್ಲಿ ಸೇವೆ ಮಾಡಲಿ, ದುಡಿಯಲಿ ಎಂಬ ನಿಟ್ಟಿನಲ್ಲಿ ವಿವಿಧ ರೀತಿಯ ಯೋಜನೆಗಳನ್ನು ಹಮ್ಮಿಕೊಂಡಿದ್ದಾರೆ.

ಹಾಗೆಯೇ ಮಹಾತ್ಮ ಗಾಂಧೀಜಿಯವರ ಅನುಮತಿ ಹಸ್ತದಿಂದ ಸ್ಥಾಪಿತವಾದ "ಸರ್ವಸೇವಾ ಸಂಘದ" ಭಾಗವಾದ ಕರ್ನಾಟಕ ಸರ್ವೋದಯ ಮಂಡಲದ ಕಾರ್ಯಕಾರಿ ಸಮಿತಿಯ ಸದಸ್ಯರಾಗಿಯೂ ಸೇವೆ ಸಲ್ಲಿಸುತ್ತಿದ್ದಾರೆ. ಇದರ ಜೊತೆಗೆ ಪ್ರತಿಷ್ಠಿತ ಗಾಂಧಿ ಪ್ರಣೀತ ಸಂಸ್ಥೆಗಳಾದ ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಹಾಗೂ ಗಾಂಧೀ ಶಾಂತಿ ಪ್ರತಿಷ್ಠಾನ ಬೆಂಗಳೂರು ಕೇಂದ್ರದ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾದದ್ದು ಬಹಳ ವಿಶೇಷ, ಏಕೆಂದರೆ ಕೇಂದ್ರ ಗಾಂಧಿ ಶಾಂತಿ ಪ್ರತಿಷ್ಠಾನವನ್ನು ಸ್ಥಾಪಿಸಿದ್ದು ಮತ್ತು ಪ್ರಾರಂಭಿಸಿದವರು ಡಾ. ರಾಜೇಂದ್ರಪ್ರಸಾದ್‌ರವರು ಹಾಗೆಯೇ ಅದರ ಸಂಸ್ಥಾಪಕ ಅಧ್ಯಕ್ಷರಾಗಿ ಸರ್ವಾನುಮತದಿಂದ ಆಯ್ಕೆಯಾದದ್ದು ಬಹಳ ವಿಶೇಷ. ಏಕೆಂದರೆ ಕೇಂದ್ರ ಗಾಂಧಿ ಶಾಂತಿ ಪ್ರತಿಷ್ಠಾನವನ್ನು ಸ್ಥಾಪಿಸಿದ್ದ ಮತ್ತು ಪ್ರಾರಂಭಿಸಿದವರು ಡಾ. ರಾಜೇಂದ್ರ ಪ್ರಸಾದ್‌ರವರು, ಹಾಗೆಯೇ ಅವರ ಸಂಸ್ಥಾಪಕ ಅಧ್ಯಕ್ಷರಾಗಿದ್ದು ಬಹಳ ವಿಶೇಷ ಎಂದು ಇಲ್ಲಿ ಸ್ಮರಿಸಬಹುದು, ಮತ್ತು ಗಾಂಧಿ ತತ್ವ ಪ್ರಚಾರದ ವಿಂಗ್ ಹಿಂದೆ ಆರ್. ಆರ್. ದಿವಾಕರ್‌ರವರು ಇದರಲ್ಲಿದ್ದರು. ಇಲ್ಲಿನ ಖಾದಿ ಉಡುಪು ಒಂದು ಸಂಕೇತ, ಈ ಖಾದಿ ಉಡುಪುಗಳನ್ನು ತಮ್ಮ ಶಾಲಾ ಕಾಲೇಜುಗಳಲ್ಲಿ ವಾರಕ್ಕೆ ಒಂದು ದಿನ ಪ್ರತಿಯೊಬ್ಬ ವಿದ್ಯಾರ್ಥಿಗಳು ಹಾಕಿಕೊಳ್ಳಬೇಕು ಅಥವಾ ಧರಿಸಿಕೊಳ್ಳಬೇಕು ಎಂಬ ನಿಯಮವನ್ನು ಸಹ ಮಾಡಿರುತ್ತಾರೆ. ಹೀಗಾಗಿ ಖಾದಿಯ ಬಟ್ಟೆಯ ಬಗ್ಗೆ ಯುವಜನರಲ್ಲಿ ಪ್ರೀತಿ ವಿಶ್ವಾಸ ಮೂಡಿಸುವ ಕಾರ್ಯವನ್ನು ಮಾಡಿದ್ದಾರೆ ವೂಡೇ ಪಿ. ರವರು.

**ಜಾತ್ಯಾತೀತ ಸಮಾಜ ನಿರ್ಮಾಣದ ಗುರಿ ಹೊಂದಿರುವ ವೂಡೇಪಿ.**

ಸಮಾ ಸಮಾಜ ಭಾರತ ದೇಶದಲ್ಲಿ ವಾಸಿಸುವ ಪ್ರತಿಯೊಬ್ಬರು ಒಂದೇ ಜಾತಿಯವರು, ಒಂದೇ ಧರ್ಮದವರು, ನಾವೆಲ್ಲರೂ ಸಮಾನ ಮನಸ್ಕ ವರ್ಗದವರು, ನಾವೆಲ್ಲರೂ ದೇಶದ, ರಾಜ್ಯದ, ಸರ್ವತೋಮುಖ ಅಭಿವೃದ್ಧಿಗಾಗಿ ಶ್ರಮಿಸಬೇಕು, ನಮ್ಮಲ್ಲಿರುವ ಅವರ ಜಾತಿ, ಇವರ ಜಾತಿ, ಅವನು ಹಿಂದೂ, ಇವನು ಮುಸ್ಲಿಂ, ಅವನು ಹಿಂದುಳಿದ ಜಾತಿಯವನು, ಇವನು ಮುಂದುವರೆದ ಜಾತಿಯವನು ಎಂದು ನಮ್ಮ ನಮ್ಮಲ್ಲೆ ಇಂತಹ ಜಾತಿ ಮತ್ತು ಧರ್ಮದ ವಿಚಾರವಾಗಿ ನಾವು ಇಂದು ದೇಶದಲ್ಲಿ ರಾಜ್ಯದಲ್ಲಿ ಅಸ್ತಿತ್ವವನ್ನು ಕಳೆದುಕೊಳ್ಳಬಾರದು, ನಾವೆಲ್ಲರೂ ಸಮಾನ ಮನಸ್ಕರಾಗಿ ನಾವೆಲ್ಲರೂ ಒಂದೇ ಧರ್ಮದವರು, ಒಂದೇ ವರ್ಗದವರು, ಪ್ರತಿಯೊಬ್ಬ ಜನ ಸಾಮಾನ್ಯರಲ್ಲಿ ಜಾತಿ ಭೇದದ ವಿಷಜಂತು ಎಂಬ ಪದವನ್ನು ಹೋಗಲಾಡಿಸಬೇಕು. ನವ ಸಮಾಜದ ನಿರ್ಮಾಣವನ್ನು ನಾವೆಲ್ಲರೂ ಮಾಡಬೇಕು, ನಮ್ಮಲ್ಲಿರುವ ಜಾತಿ, ಧರ್ಮದ ಬಗ್ಗೆ ಸಂಕುಚಿತ ಮನೋಭಾವನೆಯನ್ನು ಮೊದಲು ನಮ್ಮ ನಮ್ಮ ಮನ ಮನಸ್ಸುಗಳಿಂದ ಕಿತ್ತು ಹಾಕಬೇಕು, ನಾವು ಎಲ್ಲಿ, ಯಾವ ಸ್ಥಳದಲ್ಲಿದ್ದೇವೆಯೋ ಅಲ್ಲಿ ಮಡಲು ಒಳ್ಳೆಯವಾತಾವರಣ, ಒಳ್ಳೆಯ ಮನಸ್ಸಿನ, ಮನುಷ್ಯರನ್ನು ನಿರ್ಮಾಣ ಮಾಡಿದರೆ, ಈ ಪದ್ಧತಿ ರಾಜ್ಯ, ರಾಷ್ಟ್ರ ಮಟ್ಟದಲ್ಲಿಯು ಸಹ ಒಂದಲ್ಲ ಒಂದು ದಿನ ನಾವು ಭಾರತ ಮತ್ತು ನಾವಿರುವ ಜಾಗವನ್ನು ಜಾತ್ಯಾತೀತ ಸಮಾಜವನ್ನು ಇಂದಲ್ಲ ನಾಳೆ ನಿರ್ಮಾಣ ಮಾಡಬಹುದು ಎಂದು ವೂಡೇ ಪಿ ಕೃಷ್ಣರವರು ಸದಾ ಚಿಂತಿಸಿರುತ್ತಾರೆ. ಈ ನಿಟ್ಟಿನಲ್ಲಿ ಜಾತ್ಯಾತೀತ ಸಮಾಜದ ನಿರ್ಮಾಣದ ಗುರಿ ಹೊಂದಿರುವ ವೂಡೇ ಪಿ. ಕೃಷ್ಣರವರು ಅಂತರಾಷ್ಟ್ರೀಯ ಧಾರ್ಮಿಕ ಸ್ವಾತಂತ್ರ್ಯ ಸಂಸ್ಥೆಯು ಬೆಂಗಳೂರು ಘಟಕದ ಅಧ್ಯಕ್ಷರಾಗಿ ಶಾಲಾ ಮಕ್ಕಳ ಹಾಗೂ ಯುವ ಜನತೆಯಲ್ಲಿ ಅಂತರ್ಜಾತೀಯ ಸೌಹಾರ್ದತೆ ಮತ್ತು ಏಕತೆಯ ಭಾವವನ್ನು ಮೂಡಿಸುವ ನಿಟ್ಟಿನಲ್ಲಿ ಹೆಚ್ಚು ಹೆಚ್ಚಾಗಿ ಶ್ರಮಿಸುತ್ತಿದ್ದಾರೆ.

ಹಿಂದಿನ ಸಮಾಜ ಮತ್ತು ಈಗಿನ ಸಮಾಜದ ವ್ಯವಸ್ಥೆಯನ್ನು ಸಮಾಜದಲ್ಲಿ ನಾವು ಹೇಗೆ ಜೀವಿಸುತ್ತಿದ್ದೇವೆ, ಹೇಗೆ ಸಮಾಜದಲ್ಲಿ ಅಂದಿನಿಂದ ಇವತ್ತಿನವರೆವಿಗೂ ಇದ್ದೇವೆ ಎಂಬುದು ಒಂದು ಕಡೆ ಮುಖ್ಯವಾದರೆ ಅಂದಿನ ಸಮಾಜದಲ್ಲಿ ಪ್ರತಿಯೊಬ್ಬರು ಸಮಾನ ಮನಸ್ಕರಾಗಿ ಪ್ರತಿ ವಿಚಾರದಲ್ಲಿಯೂ ಸಕಾರಾತ್ಮಕವಾಗಿ ಚಿಂತಿಸಿ ಸ್ಪಂದಿಸುತ್ತಾ ಜೀವಿಸುತ್ತಾ ಮತ್ತು ದೇಶ, ರಾಜ್ಯ ತಾವಿರುವ ಸ್ಥಳಗಳ ಬಗ್ಗೆ ಒಳ್ಳೆಯದನ್ನು ಯೋಚಿಸುತ್ತಿದ್ದ ಆಕಾರಣಕ್ಕೂ ಈ ಕಾಲದಲ್ಲಿ ನಾವಾಯಿತು, ನಮ್ಮ ಕುಟುಂಬ, ಹೆಂಡತಿ, ಮಕ್ಕಳು, ಬಂಧು ಬಳಗ ಎನ್ನುವ ಈಗಿನ ಸಮಾಜದಲ್ಲಿ ದೇಶಕ್ಕಾಗಿ ದೇಶದ ಅಭಿವೃದ್ಧಿಗಾಗಿ ದೀನ ದಲಿತ ಶ್ರೇಯೋಭಿವೃದ್ಧಿಗಾಗಿ ಅಕ್ಷರ ವಂಚಿತರನ್ನು ಗುರ್ತಿಸಿ ಅವರಿಗೆ ಅಕ್ಷರವನ್ನು ನೀಡಿ ನವ ಸಮಾಜವನ್ನು ಮತ್ತು ಜಾತ್ಯಾತೀತ ಸಮಾಜವನ್ನು ನಿರ್ಮಿಸಲು ಪಣತೊಟ್ಟು ನಿಂತಿರುವ ಅಪರೂಪದ ಸಾಲಿನಲ್ಲಿ ನಮ್ಮ ವೂಡೇ ಪಿ. ಕೃಷ್ಣರವರು ಎಲ್ಲರಿಗಿಂತ ಮೊದಲ ಸಾಲಿನಲ್ಲಿ ಬಹಳ ಎತ್ತರವಾಗಿ ನಿಲ್ಲುತ್ತಾರೆ. ಅದರಲ್ಲೂ ಈಗಿನ ಸಮಾಜವನ್ನು ಮತ್ತು ಹಿಂದಿನ ಸಮಾಜದ ಆಗುಹೋಗುಗಳ ಬಗ್ಗೆ ಒಮ್ಮೆ ಮೆಲುಕು ಹಾಕಿ ಹಿಂದಿರುಗಿ ನೋಡಿದಾಗ ನಮ್ಮ ಮುಂದೆ ಒಬ್ಬ ಸರಳ, ಸಜ್ಜನಿಕೆಯ ನಿಸ್ವಾರ್ಥ ವ್ಯಕ್ತಿ ಪ್ರತಿ ಕ್ಷೇತ್ರದಲ್ಲೂ ತಮ್ಮ ಕೈಲಾದ ಮಟ್ಟಿಗೆ, ಎಲೆ ಮರೆಯ ಕಾಯಿಯಂತೆ ಎಲ್ಲಿಯೂ ನಾನು ಮಾಡಿದೆ, ನಾನು ಮಾಡಿದೆ, ಎಲ್ಲವೂ ನನ್ನಿಂದಲೆ ಎಂದು ಎಲ್ಲಿಯೂ, ಯಾವ ಸಂದರ್ಭದಲ್ಲಿಯೂ ತೋರಿಸಿಕೊಳ್ಳದ ಹಂಚಿಕೊಳ್ಳದ ಒಬ್ಬ ಅಪರೂಪದ ಸಾಧಕ ನಮ್ಮ ವೂಡೇ ಪಿ. ಕೃಷ್ಣರವರು, ಹೀಗಾಗಿಯೇ ವೂಡೇ ಪಿ. ಕೃಷ್ಣರವರನ್ನು "ಆಡು ಮುಟ್ಟದ ಸೊಪ್ಪಿಲ್ಲ" ಕೃಷ್ಣ ಮುಟ್ಟದೇ ಇರುವ ಯಾವ ಕೆಲಸಗಳು ಸದ್ಯಕ್ಕೆ ಖಾಲಿ ಇಲ್ಲ" ಹೆಚ್ಚು ಕಮ್ಮಿ ಸಮಾಜದಲ್ಲಿನ ಎಲ್ಲ ರೀತಿಯ ಕೆಲಸವನ್ನು ದೀನ ದಲಿತರ ಕೆಲಸವನ್ನು ನಿರಂತರವಾಗಿ ಮಾಡುತ್ತಿದ್ದಾರೆ.

ಹೀಗಾಗಿಯೇ ಸರ್ವರಿಗೂ ಇಷ್ಟವಾಗುವ ಸರ್ವರೂ ಇಷ್ಟಪಡುವ ಹಾಗೂ ವೈಯಕ್ತಿಕವಾಗಿ ನಾನು ತುಂಬಾನೇ ಇಷ್ಟಪಡುವ ವ್ಯಕ್ತಿ ಸರ್ವರ ಆಸ್ತಿ ನಮ್ಮ ವೂಡೇ ಪಿ. ಕೃಷ್ಣಜೀರವರು.

– ಸಂ.

ಸಂಯುಕ್ತ ಕರ್ನಾಟಕ

ಗುರುವಾರ 11 ಜನವರಿ 2024
ಬೆಂಗಳೂರು I BENGALURU

# ಮಠಗಳಿಂದ ಬಸವಾದಿ ಪ್ರಮಥರ ಅನುಸರಣೆ

## ಸುತ್ತೂರಿನಲ್ಲಿ ಆದಿ ಜಗದ್ಗುರು ಶಿವರಾತ್ರೀಶ್ವರ ಶಿವಯೋಗಿಗಳ ಜಯಂತಿ ಮಹೋತ್ಸವ




ಸಂ.ಕ. ಸಮಾಚಾರ ನಂಜನಗೂಡು

ಕೇವಲ ಗುಡಿ ಗುಂಡಾರಗಳನ್ನು ತೆರೆಯದೆ ಬಸವಾದಿ ಪ್ರಮಥರು ಹಾಕಿಕೊಟ್ಟ ಮಾರ್ಗದರ್ಶನದಲ್ಲಿ ಮನುಷ್ಯತ್ವದ ಕೆಲಸಗಳನ್ನು ಮಾಡಿರುವ ಶ್ರೇಯಸ್ಸು ಇಲ್ಲಿನ ಲಿಂಗಾಯತ ಮಠಾಧೀಶರು ಮತ್ತು ಮಠಗಳಿಗೆ ಸಲ್ಲುತ್ತದೆ ಎಂದು ನಿಷ್ಕಲ ಮಂಟಪದ ನಿಜಗುಣಾನಂದ ಸ್ವಾಮೀಜಿ ತಿಳಿಸಿದರು.

ನಂಜನಗೂಡು ತಾಲೂಕಿನ ಸುತ್ತೂರಿನಲ್ಲಿ ಆದಿ ಜಗದ್ಗುರು ಶಿವರಾತ್ರೀಶ್ವರ ಶಿವಯೋಗಿಗಳ 1064ನೆಯ ಜಯಂತಿ ಮಹೋತ್ಸವದಲ್ಲಿ ಭಾಗವಹಿಸಿ ಮಾತನಾಡಿದರು.

ಅಂದಿನ ಸುತ್ತೂರು ಜಗದ್ಗುರು ತಮ್ಮ ಕೊರಳಿದ್ದ ಬಂಗಾರದ ಕರಡಿಗೆಯನ್ನು ಮಾರಿ ಅದರಲ್ಲಿ ಬಂದ ಹಣದಲ್ಲಿ ಪ್ರಸಾದದ ನಿಲಯಗಳನ್ನು ತೆರೆದು ಲಿಂಗಾಯತ ಧರ್ಮದ ತತ್ವವನ್ನು ಉಳಿಸಿರುವುದು ಜಗತ್ತಿನಲ್ಲಿ ಶ್ರೇಷ್ಠವಾದ ಕೆಲಸವಾಗಿದೆ ಎಂದು ನುಡಿದರು.

ಇದೇ ವೇಳೆ, ತಾವೊಬ್ಬ ನಾನೊಬ್ಬ ಸಂಚಾರಿ ಪ್ರವಚನ ಸ್ವಾಮೀಜಿ. ನಾನು ಉಳಿದುಕೊಂಡಿರುವುದು ಕುಗ್ರಾಮವಾಗಿದ್ದು, ಶಿಕ್ಷಣದ ಕೊರತೆ ಈ ಗ್ರಾಮದಲ್ಲಿ ಎದ್ದು ಕಾಣುತ್ತಿರುವ ಸಂದರ್ಭದಲ್ಲಿ ಅಲ್ಲಿ ಪ್ರವಚನ ಕೈಗೊಂಡೆ. ಈ ಊರಿನಲ್ಲಿ ಜನರಲ್ಲಿ ಭಾವೈಕ್ಯತೆ ಮತ್ತು ಮುಗ್ಧತೆಯಿತ್ತು. ನಾನು 11 ದಿನಗಳ ಕಾಲ ಈ ಊರಿನಲ್ಲಿ ಪ್ರವಚನಗಳ ಮೂಲಕ ಮೌಢ್ಯ ಹೋಗಲಾಡಿಸುವ ನಿಟ್ಟಿನಲ್ಲಿ ಜಾಗೃತಿ ಮೂಡಿಸಿ ಕಡೆಗೂ ಯಶಸ್ವಿಯಾದೆ ಎಂದು ಸ್ಮರಿಸಿದರು.

ಇದೇ ಸಂದರ್ಭದಲ್ಲಿ ಜ್ಯೋತಿಷ ಮಹಾ ಮಹೋಪಾಧ್ಯಾಯ ಡಾ.ಕೆ.ಜಿ. ಪುಟ್ಟಹೊನ್ನಯ್ಯ ಅವರು ಸಿದ್ಧಪಡಿಸಿ, ಭಾರತೀಯ ಜ್ಯೋತಿರ್ವಿಜ್ಞಾನ ಸಂಶೋಧನಾ ಕೇಂದ್ರದಿಂದ ಪ್ರಕಟಿಸಿರುವ ಶೋಭಕೃತು ನಾಮ ಸಂವತ್ಸರದ ಸುತ್ತೂರು ಶ್ರೀ ಶಿವರಾತ್ರೀಶ್ವರ ಪಂಚಾಂಗ ಹಾಗೂ ಶ್ರೀಮಠ ಮತ್ತು ಜೆಎಸ್‌ಎಸ್ ಮಹಾವಿದ್ಯಾಪೀಠದ ನೂತನ ವರ್ಷದ ಗೋಡೆ ಹಾಗೂ ಪಾಕೆಟ್ ಕನ್ನಡ ಮತ್ತು ಇಂಗ್ಲಿಷ್ ಕ್ಯಾಲೆಂಡರ್‌ಗಳನ್ನು ಬಿಡುಗಡೆಗೊಳಿಸಲಾಯಿತು.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ನಿಷ್ಕಲ ಮಂಟಪದ ನಿಜಗುಣಾನಂದ ಸ್ವಾಮೀಜಿ, ಬೆಂಗಳೂರಿನ ಮಿಥಿಕ್ ಸೊಸೈಟಿ, ಡಾ.ಸಿ. ರಾಮಚಂದ್ರ, ಕೆ.ಟಿ. ಚಂದ್ರು, ಪ್ರೊ.ಸಿ. ನಾಗಣ್ಣ, ಡಾ. ಕಬ್ಬಿನಾಲೆ ವಸಂತ ಭಾರದ್ವಾಜ್, ಪಿ. ಗಂಗಾಧರ ಸ್ವಾಮಿ, ಕೆಂಪಿಸಿದ್ದನಹುಂಡಿಯ ಕಂಸಾಳೆ ಮಹದೇವು, ಗೌರಯ್ಯ, ಜವರಪ್ಪ, ಗೌರವ ಡಾಕ್ಟರೇಟ್ ಪಡೆದ ಅರವಿಂದ ಜತ್ತಿ, ಜಾವಗಲ್ ಶ್ರೀನಾಥ್, ಕೆ.ಬಿ. ಗಣಪತಿ, ನಾಡೋಜ ವೂಡೇ ಪಿ. ಕೃಷ್ಣ, ನಾಡೋಜ ಪ್ರಶಸ್ತಿ ಪಡೆದ ಎಸ್. ಷಡಕ್ಷರಿ ಅವರನ್ನು ಸನ್ಮಾನಿಸಲಾಯಿತು.

ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಮಾಜಿ ಸಂಸದ ಕಾಗಲವಾಡಿ ಶಿವಣ್ಣ, ಪ್ರೊ. ಮೊರಬದ ಮಲ್ಲಿಕಾರ್ಜುನ, ಹಾಗೂ ವಿವಿಧ ಮಠಾಧೀಶರು, ರಾಜಕೀಯ ಮುಖಂಡರ ಇದ್ದರು.

ಪ್ರಜಾವಾಣಿ
ಗುರುವಾರ ○ ಜನವರಿ 11, 2024
4 ಮೈಸೂರು

# 'ಲಿಂಗಾಯತ ಮಠಗಳಿಂದ ಅಕ್ಷರ, ಅನ್ನ ದಾನ'

ನಂಜನಗೂಡು: 'ಲಿಂಗಾಯತ ಮಠಗಳು ಕೇವಲ ಗುಡಿ, ಮಂದಿರಗಳಿಗಷ್ಟೇ ಸೀಮಿತವಾಗಿರದೆ, ಮನುಕುಲದ ಉದ್ಧಾರಕ್ಕಾಗಿ ಶಾಲಾ ಕಾಲೇಜುಗಳನ್ನು ತೆರೆದು ಅನ್ನ ಹಾಗೂ ಅಕ್ಷರ ದಾನ ನಡೆಸುತ್ತಿವೆ' ಎಂದು ನಿಷ್ಕಲ ಮಠದ ನಿಜಗುಣಾನಂದ ಸ್ವಾಮೀಜಿ ಹೇಳಿದರು.

ತಾಲ್ಲೂಕಿನ ಸುತ್ತೂರು ಮಠದಲ್ಲಿ ಬುಧವಾರ ನಡೆದ ಶಿವರಾತ್ರೀಶ್ವರ ಶಿವಯೋಗಿಗಳ ಜಯಂತಿ ಮಹೋತ್ಸವದಲ್ಲಿ ಸನ್ಮಾನ ಸ್ವೀಕರಿಸಿ ಮಾತನಾಡಿದರು.

ನಿಜಗುಣಾನಂದ ಸ್ವಾಮೀಜಿ, ಅರವಿಂದ ಜತ್ತಿ, ಜಾವಗಲ್ ಶ್ರೀನಾಥ್, ಕೆ.ಬಿ.ಗಣಪತಿ, ವೂಡೇ ಕೃಷ್ಣ, ಎಸ್. ಷಡಕ್ಷರಿ ಅವರನ್ನು ಸನ್ಮಾನಿಸಲಾಯಿತು.

ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಕಬ್ಬಿನಾಲೆ ವಸಂತ ಭಾರದ್ವಾಜ್, ಪಿ.ಗಂಗಾಧರ ಸ್ವಾಮಿ, ಪ್ರೊ.ಸಿ.ನಾಗಣ್ಣ, ಡಾ.ಸಿ.ರಾಮಚಂದ್ರ, ಪ್ರೊ.ಕೃಷ್ಣೇಗೌಡ ಭಾಗವಹಿಸಿದ್ದರು.

ತಿಳಿಯುತ್ತಿವೆ. ನ್ಯಾಯಾಲಯದ ಕಲಾಪಗಳನ್ನು ವೀಕ್ಷಿಸುತ್ತಿದ್ದಾರೆ. ಕಾನೂನು ನೆರವಿನ ಬಗ್ಗೆ ಜಾಗೃತಿ ಮೂಡುತ್ತಿದೆ' ಎಂದರು.

'ತಾಲ್ಲೂಕು ಕೇಂದ್ರಗಳಲ್ಲೂ ಕಾನೂನು ಸೇವಾ ಪ್ರಾಧಿಕಾರವಿದೆ. ಪ್ರಾಧಿಕಾರದಲ್ಲಿ ಜಿಲ್ಲಾ ಸೆಷನ್ಸ್ ನ್ಯಾಯಾಧೀಶರಿರುತ್ತಾರೆ. ಜಿಲ್ಲಾಧಿಕಾರಿ, ಪೊಲೀಸ್ ಆಯುಕ್ತರು, ಜಿಪಂ ಸಿಇಒ ಮತ್ತು ವಿವಿಧ ಸಂಘ ಸಂಸ್ಥೆಗಳು ಪ್ರಾಧಿಕಾರದಲ್ಲಿ ಸದಸ್ಯರಾಗಿರುತ್ತಾರೆ' ಎಂದು ಮಾಹಿತಿ ನೀಡಿದರು.

ಪುಟ್ಟೇಗೌಡ ಹುಂಡಿಯ ಅಂಗವಿಕಲ ವ್ಯಕ್ತಿಗೆ ವ್ಹೀಲ್ ಚೇರ್ ವಿತರಿಸಲಾಯಿತು.

ಕರಾಟೆ ಪಟು ರ್‍ಯಾಂಬೋ ಕಿರಣ್, ವಕೀಲ ಪುಟ್ಟರಾಜು, ಕಟ್ಟಡ ಕಾರ್ಮಿಕರ ಸಂಘದ ಅಧ್ಯಕ್ಷ ರವಿ ಮಾವಿನಹಳ್ಳಿ, ವಿ.ಪಿ.ಸುಶೀಲಾ, ಎಂ.ಪುಟ್ಟರಾಜು, ವಿನೋದ್ ಪಾಲ್ಗೊಂಡಿದ್ದರು.



ನಂಜನಗೂಡು ತಾಲ್ಲೂಕಿನ ಸುತ್ತೂರು ಮಠದ ಆವರಣದಲ್ಲಿ ಬುಧವಾರ ನಡೆದ ಕಾರ್ಯಕ್ರಮದಲ್ಲಿ ಕೆ.ಬಿ.ಗಣಪತಿ, ಅರವಿಂದ ಜತ್ತಿ, ನಿಜಗುಣಾನಂದ ಸ್ವಾಮೀಜಿ, ವೂಡೇ ಕೃಷ್ಣ, ಎಸ್.ಷಡಕ್ಷರಿ ಅವರನ್ನು ಸನ್ಮಾನಿಸಲಾಯಿತು. ಕಬ್ಬಿನಾಲೆ ವಸಂತ ಭಾರದ್ವಾಜ್, ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಪಿ.ಗಂಗಾಧರ ಸ್ವಾಮಿ, ಪ್ರೊ. ಸಿ.ನಾಗಣ್ಣ, ಡಾ.ಸಿ.ರಾಮಚಂದ್ರ ಭಾಗವಹಿಸಿದ್ದರು

ಕನ್ನಡಪ್ರಭ ಸೋಮವಾರ 29.07.2024

# ತೇಜಸ್ವಿ ಪರಿಸರ ಪ್ರೇಮ, ಸರಳ ಜೀವನ ನಮಗೆ ಮಾದರಿ: ಅಶ್ವತ್ಥ

## ರವೀಂದ್ರ ಕಲಾ ಕ್ಷೇತ್ರದಲ್ಲಿ ತೇಜಸ್ವಿ ಎಂಬ ವಿಸ್ಮಯ ಸಾಕ್ಷ್ಯಚಿತ್ರ ಬಿಡುಗಡೆ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಏನು ಕೊಟ್ಟರೂ ಸಾಲುವುದಿಲ್ಲ ಎನ್ನುವ ಜನರ ಸಂಖ್ಯೆ ವರ್ತಮಾನದಲ್ಲಿ ಪ್ರಬಲವಾಗಿದೆ. ಆದರೆ, ಸಾಹಿತಿ ಪೂರ್ಣಚಂದ್ರ ತೇಜಸ್ವಿಯವರು ಕೃಷಿ, ಪರಿಸರ, ಅರಣ್ಯ, ಸಾಹಿತ್ಯ ಪ್ರೇಮದೊಂದಿಗೆ ನಡೆಸಿದ ಸರಳ ಜೀವನ ಮಾದರಿಯಾಗಿದೆ ಎಂದು ಮಾಜಿ ಡಿಸಿಎಂ ಹಾಗೂ ಶಾಸಕ ಡಾ.ಸಿ.ಎನ್. ಅಶ್ವತ್ಥನಾರಾಯಣ ಹೇಳಿದ್ದಾರೆ.

ಭಾನುವಾರ ರವೀಂದ್ರ ಕಲಾಕ್ಷೇತ್ರದಲ್ಲಿ ಮುನಿಸ್ವಾಮಿ ಆ್ಯಂಡ್ ಸನ್ಸ್, ಎಂ. ಚಂದ್ರಶೇಖರ ಪ್ರತಿಷ್ಠಾನ ಮತ್ತು ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆಗೊಳಿಸಿ ಅವರು ಮಾತನಾಡಿದರು.



ಸಾಕ್ಷ್ಯಚಿತ್ರ ಬಿಡುಗಡೆ ವೇಳೆ ಮಾಜಿ ಡಿಸಿಎಂ ಅಶ್ವತ್ಥನಾರಾಯಣ ಮತ್ತಿತರಿದ್ದರು.

ಮೇರು ಪ್ರತಿಭೆಯ ವ್ಯಕ್ತಿತ್ವವನ್ನು ಹೊಂದಿದವರು ಎಂದರೇ ಅದು ತೇಜಸ್ವಿಯವರು. ಈ ಹಿನ್ನೆಲೆಯಲ್ಲಿ ಹೊರ ತಂದಿರುವ ಸಾಕ್ಷ್ಯಚಿತ್ರ ಹೆಚ್ಚಿನವರನ್ನು ತಲುಪಲಿ ಎಂದರು.

ಸಾಹಿತಿ ಪ್ರೊ.ಎಸ್.ಜಿ. ಸಿದ್ದರಾಮಯ್ಯ ಮಾತನಾಡಿ, ಕನ್ನಡ ಓದುಗರನ್ನು ಹೆಚ್ಚು ಸೃಷ್ಟಿಸಿದ್ದು ಎಂದರೆ ಅದು ಅನಕೃ ಮತ್ತು ತ್ರಿವೇಣಿಯವರು. ಅದಾದ ಬಳಿಕ ತೇಜಸ್ವಿಯವರು ಎಂದರು.ಕಾರ್ಯಕ್ರಮ ದಲ್ಲಿ ಸಾಹಿತಿ ಪ್ರೊ. ಬಿ.ಎನ್. ಶ್ರೀರಾಮ್, ಎಂ.ಚಂದ್ರಶೇಖರ್‌ಪ್ರತಿಷ್ಠಾನದ ಸದಸ್ಯೆ ಸರೋಜ ಎಂ. ಚಂದ್ರಶೇಖರ್, ಕವಿ ಡಾ. ಕೆ.ಚಿದಾನಂದಗೌಡ, ಹಂಪಿ ಕನ್ನಡ ವಿವಿ ಕುಲಪತಿ ಡಾ.ಡಿ.ವಿ. ಪರಮ ಶಿವಮೂರ್ತಿ ಹಾಗೂ ನಾಡೋಜ ಡಾ. ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

ವಿಜಯ ಕರ್ನಾಟಕ

ಸೋಮವಾರ, 29 ಜುಲೈ 2024

# ಸರಳ ಭಾಷೆಯೇ ತೇಜಸ್ವಿ ಕೃತಿ ವಿಶೇಷತೆ

▪ **ವಿಕ ಸುದ್ದಿಲೋಕ** ಬೆಂಗಳೂರು

ಪೂರ್ಣಚಂದ್ರ ತೇಜಸ್ವಿ ಅವರ ಸಾಹಿತ್ಯ ಪ್ರಸಿದ್ಧಿಯಾಗಲು ಓದುಗರೊಂದಿಗೆ ಅವರಿಗೆ ಇರುವ ಸಂವಹನ ಕ್ರಿಯೆಯೇ ಕಾರಣ. ಅವರ ಕೃತಿಗಳನ್ನು ಓದುತ್ತಿದ್ದರೆ ಸ್ವತಃ ಅವರೇ ಕಥೆ ಹೇಳುತ್ತಿರುವಂತೆ ಭಾಸವಾಗುತ್ತದೆ ಎಂದು ಹಿರಿಯ ಸಾಹಿತಿ ಬಿ.ಎನ್. ಶ್ರೀರಾಮ್ ಹೇಳಿದರು.

ಮೆ.ಮೂನಿಸ್ವಾಮಿ ಅಂಡ್ ಸನ್ಸ್, ಎಂ.ಚಂದ್ರಶೇಖರ್ ಪ್ರತಿಷ್ಠಾನ ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ಸಂಯುಕ್ತಾಶ್ರಯದಲ್ಲಿ ರವೀಂದ್ರ ಕಲಾಕ್ಷೇತ್ರದಲ್ಲಿ ಭಾನುವಾರ ಆಯೋಜಿಸಿದ್ದ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು- 14 ಸಂಪುಟಗಳು ಮತ್ತು 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಬಿಡುಗಡೆ, ತೇಜಸ್ವಿ ಸಾಹಿತ್ಯ-ಸಾಂಸ್ಕೃತಿಕ ಹಬ್ಬ ರಾಷ್ಟ್ರೀಯ ವಿಚಾರಸಂಕಿರಣವನ್ನು ಉದ್ಘಾಟಿಸಿ ಅವರು ಮಾತನಾಡಿದರು.



ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರವನ್ನು ಶಾಸಕ ಸಿ.ಎನ್.ಅಶ್ವತ್ಥನಾರಾಯಣ ಬಿಡುಗಡೆ ಮಾಡಿದರು.

''ತೇಜಸ್ವಿ ಅವರು ಕಠಿಣ ವಿಷಯಗಳ ಬಗ್ಗೆಯೂ ಸುಲಭವಾಗಿ ಅರ್ಥವಾಗುವ ಹಾಗೆ ಬರೆಯುತ್ತಿದ್ದರು. ತೇಜಸ್ವಿ ಅವರ ನಿರ್ಗಮನದ ಬಳಿಕ 1,200 ಪುಟಗಳಷ್ಟು ಪ್ರತಿಕ್ರಿಯೆಗಳು ಓದುಗರಿಂದ ಬಂದಿದ್ದವು. ಅವುಗಳು ಪುಸ್ತಕ ರೂಪದಲ್ಲಿ ಬಂದರೆ ತೇಜಸ್ವಿ ಅವರ ಬೇರೆಯದೇ ಜಗತ್ತು ತೆರೆದುಕೊಳ್ಳಲಿದೆ,'' ಎಂದು ಹೇಳಿದರು.

ಪೂರ್ಣಚಂದ್ರ ತೇಜಸ್ವಿ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ನಿರ್ದೇಶಕ ಕೆ.ಸಿ. ಶಿವಾರೆಡ್ಡಿ ಮಾತನಾಡಿ, ''ತೇಜಸ್ವಿ ಅವರ ಸಾಹಿತ್ಯದ ಓದು ಆತ್ಮವಿಶ್ವಾಸ ಹೆಚ್ಚಳ ಮಾಡುವುದರ ಜತೆಗೆ ಗಂಭೀರ ಬದುಕಿಗೆ ಪ್ರೇರಣೆ ನೀಡುತ್ತದೆ. ಲಕ್ಷಾಂತರ ರೂಪಾಯಿ ವೇತನ ಪಡೆಯುತ್ತಿದ್ದ ಐಟಿ-ಬಿಟಿ ಉದ್ಯೋಗಿಗಳು ಅವರ ಪ್ರೇರಣೆಯಿಂದ ಗ್ರಾಮೀಣ ಪ್ರದೇಶಕ್ಕೆ ಹೋದ ಉದಾಹರಣೆಗಳಿವೆ,'' ಎಂದರು.

ಬಿಜೆಪಿ ಶಾಸಕ ಡಾ.ಸಿ.ಎನ್. ಅಶ್ವತ್ಥನಾರಾಯಣ 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಬಿಡುಗಡೆ ಮಾಡಿದರು. ನ್ಯಾಯಮೂರ್ತಿ ಎ.ಜೆ.ಸದಾಶಿವ, ಪ್ರೊ.ಜಿ.ಬಿ. ಶಿವರಾಜು, ಎನ್.ಆರ್. ವಿಶುಕುಮಾರ್, ಸರೋಜ ಎಂ. ಚಂದ್ರಶೇಖರ್, ಡಾ.ವೂಡೇ ಪಿ. ಕೃಷ್ಣ, ಸಾಹಿತಿ ಪ್ರೊ.ಎಸ್. ಜಿ. ಸಿದ್ದರಾಮಯ್ಯ, ಹಂಪಿ ವಿವಿ ಕುಲಪತಿ ಡಾ.ಡಿ. ವಿ.ಪರಮ ಶಿವಮೂರ್ತಿ, ವಿಶ್ರಾಂತ ಕುಲಪತಿ ಕೆ.ಚಿದಾನಂದಗೌಡ, ತಾರಿಣಿ ಚಿದಾನಂದ ಇದ್ದರು.

# ನಿಷ್ಕಳಂಕ ಬದುಕಿನ ಕಮಲಾ ಹಂಪನಾ

**ಬೆಂಗಳೂರು:** ಆತ್ಮವಂಚನೆ-ಅನ್ಯ ವಂಚನೆಯಿಲ್ಲದೇ ನಿಷ್ಕಳಂಕವಾಗಿ ಬದುಕು ಸಾಗಿಸಿದವರು ನಾಡೋಜ ಕಮಲ ಹಂಪನಾ ಎಂದು ಸಾಹಿತಿ ಬರಗೂರು ರಾಮಚಂದ್ರಪ್ಪ ಸ್ಮರಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ವಿವಿಧ ಸಂಘಟನೆಗಳೊಂದಿಗೆ ಹಮ್ಮಿಕೊಂಡಿದ್ದ ನಾಡೋಜ ಕಮಲ ಹಂಪನಾ ನುಡಿಗೌರವ ಕಾರ್ಯಕ್ರಮಕ್ಕೆ ಚಾಲನೆ ನೀಡಿ ಮಾತನಾಡಿದ ಅವರು, ಮನಸ್ಸಿನಲ್ಲಿ ಯಾವುದೇ ಮುಚ್ಚುಮರೆಯಲ್ಲದೇ, ಸತ್ಯ ನಿಷ್ಠರಾಗಿ ಸಮಾಜದೊಡನೆ ಉತ್ತಮ ಬಾಂಧವ್ಯ ಹೊಂದಿದವರಾಗಿದ್ದರು ಎಂದು ತಿಳಿಸಿದರು.

ಸುಮಾರು 60ಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಅವರು ಕನ್ನಡದ ಮೊಟ್ಟಮೊದಲ ಗ್ರಂಥ ಸಂಪಾದನಾ ಲೇಖಕಿಯಾಗಿದ್ದಾರೆ. ಜಾತಿ-ಧರ್ಮದ ಎಲ್ಲೆ ಮೀರಿ ಸಾಮಾಜಿಕ, ಸಾಹಿತಿಕ, ಸಾಂಸ್ಕೃತಿಕ ಕೊಡುಗೆ ನೀಡಿದ ಧೀಮಂತ ನಾಯಕಿಯಾಗಿದ್ದರು ಎಂದು ನುಡಿದರು.

ಸಹಕಾರ ಖಾತೆ ಸಚಿವ ಕೆ.ಎನ್.ರಾಜಣ್ಣ ಮಾತನಾಡಿ, ಹುಟ್ಟು-ಸಾವುಗಳ ಮಧ್ಯೆ ಇರುವ ದಿನಗಳಲ್ಲಿ ಒಳ್ಳೆಯವರಾಗಿ ಹೋದವರಲ್ಲಿ ಕಮಲ ಹಂಪನಾ ಒಬ್ಬರು. ಕಮಲ ಹಂಪನಾ ಅವರು ಬಾಲ್ಯದಿಂದ ಇಲ್ಲಿಯವರೆಗೂ ಎಲ್ಲರನ್ನೂ



ಕರ್ನಾಟಕ ಗಾಂಧಿ ಸ್ಮಾರಕ ನಿಧಿಯು ವಿವಿಧ ಸಂಘಟನೆಗಳೊಂದಿಗೆ ಹಮ್ಮಿಕೊಂಡಿದ್ದ ನಾಡೋಜ ಕಮಲ ಹಂಪನಾ ನುಡಿ ಗೌರವಕ್ಕೆ ಸಾಹಿತಿ ಬರಗೂರು ರಾಮಚಂದ್ರಪ್ಪ ಚಾಲನೆ ನೀಡಿದರು.

ಮಾತೃ ಹೃದಯದಿಂದ ಕಾಣುತ್ತಿದ್ದರು. ಸಮಾಜಕ್ಕೆ ಮಾದರಿಯಾಗಿದ್ದರು ಎಂದರು.

ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಎಚ್. ಎಲ್.ಪುಷ್ಪ ಮಾತನಾಡಿ, ಕಮಲ ಹಂಪನಾ ಅವರು ಸಾಹಿತಿಗಳಿಗೆ ವೇದಿಕೆ ಸಿಗಬೇಕು, ಪ್ರತಿಯೊಂದು ಜಿಲ್ಲೆಯಲ್ಲೂ ಕನ್ನಡ ಭವನ ನಿರ್ಮಾಣವಾಗಬೇಕೆಂದು ಕನಸು ಕಂಡಿದ್ದರು. ಯಾವುದೇ ಬೇಧ-ಭಾವವಿಲ್ಲದೇ ಲೇಖಕಿಯರ ಒಂದು ಕುಟುಂಬದ ಸದಸ್ಯರಾಗಿ ಕಾರ್ಯನಿರ್ವಹಿಸಿದವರು. ಕರ್ನಾಟಕ ಲೇಖಕಿಯರ ಸಂಘ ಸ್ಥಾಪಿಸಿದವರು ಎಂದು ತಿಳಿಸಿದರು.

ಗಾಂಧಿ ಸ್ಮಾರಕನಿಧಿಯ ಅಧ್ಯಕ್ಷ ವೂಡೇ ಪಿ.ಕೃಷ್ಣ, ಸಾಹಿತಿ ಹಂಪನಾ ಕುಟುಂಬಸ್ಥರು, ವಿಮರ್ಶಕರು, ಲೇಖಕರು ಸೇರಿದಂತೆ ವಿವಿಧ ಸಂಘಟನೆಗಳ ಮುಖಂಡರು ಉಪಸ್ಥಿತರಿದ್ದರು.

ಉದಯವಾಣಿ

ಗುರುವಾರ, ಜುಲೈ 4, 2024

# 'ಕಮಲಾ ಹಂಪನಾ ರಾಜ್ಯದ ಮೊದಲ ಸಂಶೋಧಕಿ'

## ಸಾಹಿತಿ ಕಮಲಾ ಹಂಪನಾ ನುಡಿ ಗೌರವ ಕಾರ್ಯಕ್ರಮದಲ್ಲಿ ಚಿಂತಕ ಬರಗೂರು ರಾಮಚಂದ್ರಪ್ಪ ಹೇಳಿಕೆ

■ ಉದಯವಾಣಿ ಸಮಾಚಾರ

**ಬೆಂಗಳೂರು:** ಕನ್ನಡ ನಾಡಿನಲ್ಲಿ ಮಹಿಳೆಯರ ಪೈಕಿ ಸಂಶೋಧನೆ ಮಾಡಿದ್ದವರಲ್ಲಿ ಕಮಲಾ ಹಂಪನಾ ಮೊದಲಿಗರು. ಅಷ್ಟೇ ಅಲ್ಲದೇ, ಕನ್ನಡದ ಮೊಟ್ಟ ಮೊದಲ ಗ್ರಂಥ ಸಂಪಾದನ ಲೇಖಕಿ ಎಂಬ ಕೀರ್ತಿ ಇವರಿಗೆ ಸಲ್ಲುತ್ತದೆ ಎಂದು ಹಿರಿಯ ಸಾಹಿತಿ ಡಾ| ಬರಗೂರು ರಾಮಚಂದ್ರಪ್ಪ ತಿಳಿಸಿದರು.

ನಗರದ ಕುಮಾರ ಕೃಪಾ ರಸ್ತೆಯಲ್ಲಿನ ಗಾಂಧಿ ಭವನದಲ್ಲಿ ಕರ್ನಾಟಕ ಲೇಖಕಿಯರ ಸಂಘ, ಬಹುರೂಪಿ, ಅಖಿಲ ಕರ್ನಾಟಕ ಮಹಮದೀಯರ ಕನ್ನಡ ವೇದಿಕೆ ಸೇರಿದಂತೆ ವಿವಿಧ ಸಂಘಗಳು ಬುಧವಾರ ಆಯೋಜಿಸಿದ್ದ 'ನಾಡೋಜ ಕಮಲಾ ಹಂಪನಾ ನುಡಿ ಗೌರವ' ಕಾರ್ಯಕ್ರಮದಲ್ಲಿ ಮಾತನಾಡಿದರು. ಕಮಲಾ ಹಂಪನಾ ಅವರು ಕನ್ನಡ ಸಾಹಿತ್ಯಲೋಕಕ್ಕೆ ಸಣ್ಣ ಕತೆ, ಕಾದಂಬರಿ, ವೈಚಾರಿಕ ಕೃತಿ, ಸಂಶೋಧನೆ, ವಿಮರ್ಶೆ ಹೀಗೆ ವಿವಿಧ ಪ್ರಕಾರಗಳ ರಚನೆಗಳನ್ನು ನೀಡಿದ್ದಾರೆ. ಸ್ತ್ರೀ ಮತ್ತು ತಳ ಸಮುದಾಯಗಳಿಗೆ ಅನ್ಯಾಯವಾದಾಗ ಅವರು ಸುಮ್ಮನೆ ಇರುತ್ತಿರಲಿಲ್ಲ, ಧ್ವನಿ ಎತ್ತಿ ಮಾತನಾಡುತ್ತಿದ್ದರು ಎಂದು ಹೇಳಿದರು.



ಕಾರ್ಯಕ್ರಮದಲ್ಲಿ ಕಮಲಾ ಹಂಪನಾ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಲಾಯಿತು.

ಸರ್ಕಾರವು ದಾನ ಚಿಂತಾಮಣಿ ಅತ್ತಿಮಬ್ಬೆ ಹೆಸರಿನಲ್ಲಿ ಲೇಖಕಿಯರಿಗೆ ದೊಡ್ಡ ಪ್ರಶಸ್ತಿ ನೀಡಲಾಗುತ್ತಿದೆ. ಇದಕ್ಕೆ ಮೂಲ ಕಾರಣ ಹಂಪನಾ ಅವರು. ಕಮಲಾ ಅವರದ್ದು ಮುಚ್ಚುಮರೆಯಿಲ್ಲದ ವ್ಯಕ್ತಿತ್ವ ಎಂದು ಶ್ಲಾಘಿಸಿದರು.

ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಎಚ್.ಎಲ್. ಪುಷ್ಪಾ ಮಾತನಾಡಿ, ಕಮಲಾ ಹಂಪನಾ ಎಲ್ಲರಿಗೂ ಒಂದಲ್ಲ ಒಂದು ರೀತಿ ಬೇಕಾದವರು. ಒಂದು ಕುಟುಂಬದಲ್ಲಿ ಹಿರಿಯ ಜೀವಿ ಹೇಗೆ ಇರುತ್ತಾರೋ, ಹಾಗೆಯೇ ನಮ್ಮ ಲೇಖಕಿಯರ ಬಳಗದಲ್ಲಿ ಹಿರಿಯ ವ್ಯಕ್ತಿಯಂತೆ ಇದ್ದರು. ಕಮಲ ಹಂಪನಾ ಹಿರಿತನದ ವ್ಯಕ್ತಿತ್ವವುಳ್ಳವರಾಗಿದ್ದರು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಸಚಿವ ಕೆ.ಎನ್. ರಾಜಣ್ಣ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ. ಕೃಷ್ಣ ಸೇರಿದಂತೆ ಮತ್ತಿತರರು ಇದ್ದರು.

ವಿಜಯ ಕರ್ನಾಟಕ VK ಗುರುವಾರ, 4 ಜುಲೈ 2024

# ಸಾಹಿತ್ಯಕ್ಕೆ ಕಮಲಾ ಹಂಪನಾ ಕೊಡುಗೆ ಅಪಾರ

■ ವಿಕ ಸುದ್ದಿಲೋಕ ಬೆಂಗಳೂರು

ಕಮಲಾ ಹಂಪನಾ, ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕವಾಗಿ ಬಹುದೊಡ್ಡ ಕೊಡುಗೆ ನೀಡಿದ ಲೇಖಕಿ ಎಂದು ಸಾಹಿತಿ ಬರಗೂರು ರಾಮಚಂದ್ರಪ್ಪ ಅಭಿಪ್ರಾಯಪಟ್ಟರು.

ಬಂಡಾಯ ಸಾಹಿತ್ಯ ಸಂಘಟನೆಯು ವಿವಿಧ ಸಂಘ-ಸಂಸ್ಥೆಗಳ ಸಹಯೋಗದಲ್ಲಿ ನಗರದಲ್ಲಿ ಬುಧವಾರ ಆಯೋಜಿಸಿದ್ದ 'ಕಮಲಾ ಹಂಪನಾ ನುಡಿ ಗೌರವ' ಕಾರ್ಯಕ್ರಮಕ್ಕೆ ಚಾಲನೆ ನೀಡಿ ಅವರು ಮಾತನಾಡಿದರು.

''ಕಮಲಾ ಅವರು ಮಹಿಳೆಯರು, ತಳ ಸಮುದಾಯದವರಿಗೆ ಅನ್ಯಾಯವಾದಾಗ ಅವರ ಪರ ದನಿ ಎತ್ತುತ್ತಿದ್ದರು. ಅವರ ಒತ್ತಾಯದಿಂದಲೇ ಸರಕಾರ ದಾನಚಿಂತಾಮಣಿ ಅತ್ತಿಮಬ್ಬೆ ಹೆಸರಲ್ಲಿ ಲೇಖಕಿಯರಿಗಾಗಿ ಪ್ರಶಸ್ತಿ ಸ್ಥಾಪಿಸಿತು. ನಮ್ಮ ಕಾಲದಲ್ಲಿಯೂ ಪ್ರಸ್ತುತವಾಗುವಂತಹ ಆದರ್ಶವನ್ನು ಕಮಲಾ ಹಂಪನಾ ಕಟ್ಟಿಕೊಟ್ಟಿದ್ದರು. ಈ ದಂಪತಿ ಧರ್ಮ, ಜಾತಿಯ ಸಂಕೋಲೆಗಳನ್ನು ದಾಟಿ ಅನ್ಯೋನ್ಯವಾಗಿ ಬದುಕಿ ತೋರಿಸಿದರು,'' ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.




ಕಮಲಾ ಹಂಪನಾ ಅವರ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಲಾಯಿತು.

ಸಹಕಾರ ಸಚಿವ ಕೆ.ಎನ್.ರಾಜಣ್ಣ ಮಾತನಾಡಿ, ''ಕಮಲಮ್ಮ ನಮ್ಮೂರಿನ ಮೊದಲ ಪದವೀಧರೆ. ಕಮಲಾ-ಹಂಪನಾ ಅವರದ್ದು ಆದರ್ಶದ ದಾಂಪತ್ಯ. ಅವರ ಸಂಸಾರದಲ್ಲಿ ಸಾಮರಸ್ಯ ಇತ್ತು,'' ಎಂದು ನೆನಪಿಸಿಕೊಂಡರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, ''ಕಮಲಾ ಹಂಪನಾ ಅವರು ಅಧ್ಯಾಪನ, ಅಧ್ಯಯನ ಮತ್ತು ಬರವಣಿಗೆಗಳ ತ್ರಿವೇಣಿ ಸಂಗಮವಾಗಿದ್ದರು. ಕನ್ನಡ ಮೇಷ್ಟ್ರುಗಳಿಗೆ ಸ್ಫೂರ್ತಿಯಾಗಿದ್ದ ಅವರು, ಬಹುದೊಡ್ಡ ಶಿಷ್ಯ ಬಳಗವನ್ನೇ ಹೊಂದಿದ್ದರು,'' ಎಂದು ಸ್ಮರಿಸಿದರು.

ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಎಚ್.ಎಲ್. ಪುಷ್ಪ ಮಾತನಾಡಿ, ''ಕಮಲಾ ಅವರು ಸೌಲಭ್ಯಗಳಿಲ್ಲದ ಕಾಲದಲ್ಲಿ ಶಾಸನ, ಇತಿಹಾಸ ಕುರಿತು ಗ್ರಂಥ ಸಂಪಾದನೆ ಮಾಡಿದ್ದರು,'' ಎಂದು ಹೇಳಿದರು.

ಕನ್ನಡಪ್ರಭ

ಗುರುವಾರ 4.07.2024

# ಕಮಲಾ ಹಂಪನಾರ ಸಂದೇಶ ಸಮಾಜಕ್ಕೆ ಅತ್ಯಗತ್ಯ: ಬರಗೂರು

## ಗಾಂಧಿ ಭವನದಲ್ಲಿ ಕಮಲ ಹಂಪನಾ ಅವರಿಗೆ ನುಡಿಗೌರವ ಕಾರ್ಯಕ್ರಮ



ಗಾಂಧಿ ಭವನದಲ್ಲಿ ನಡೆದ ಸಾಹಿತಿ ಕಮಲಾ ಹಂಪನಾ ನುಡಿನಮನ ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಅಧ್ಯಕ್ಷೆ ಎಚ್.ಎಲ್. ಪುಷ್ಪಾ, ಸಾಹಿತಿ ಹಂಪ ನಾಗರಾಜಯ್ಯ, ಸಹಕಾರ ಸಚಿವ ಕೆ.ಎನ್. ರಾಜಣ್ಣ, ಕನ್ನಡ ಜನಶಕ್ತಿ ಕೇಂದ್ರ ಅಧ್ಯಕ್ಷ ಸಿ.ಕೆ. ರಾಮೇಗೌಡ, ಲೇಖಕಿ ಸುಕನ್ಯಾ-ಮಾರುತಿ ಉಪಸ್ಥಿತರಿದ್ದರು.

**ಕಮಲಾ ಹಂಪನಾ ನುಡಿ ನಮನ**

• ಕನ್ನಡಪ್ರಭ ವಾರ್ತೆ ಬೆಂಗಳೂರು

ಹಿರಿಯ ಸಾಹಿತಿ ಕಮಲಾ ಹಂಪನಾ ಅವರ ಸರ್ವಧರ್ಮ ಸಾಮರಸ್ಯದ ಸಂದೇಶ ಆಧುನಿಕ ಸಮಾಜಕ್ಕೆ ಅತ್ಯಗತ್ಯವಾಗಿದೆ ಎಂದು ನಾಡೋಜ ಪ್ರೊ. ಬರಗೂರು ರಾಮಚಂದ್ರಪ್ಪ ಅವರು ಅಭಿಪ್ರಾಯಪಟ್ಟಿದ್ದಾರೆ.

ನಗರದ ಗಾಂಧಿ ಭವನದಲ್ಲಿ ಬಂಡಾಯ ಸಾಹಿತ್ಯ ಸಂಘಟನೆ, ಕರ್ನಾಟಕ ಲೇಖಕಿಯರ ಸಂಘ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಹಾಗೂ ಇತರೆ ಸಂಘ-ಸಂಸ್ಥೆಗಳ ಸಹಯೋಗದಲ್ಲಿ ನಡೆದ ನಾಡೋಜ ದಿ. ಕಮಲ ಹಂಪನಾ ಅವರಿಗೆ ನುಡಿಗೌರವ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು, ಪ್ರತಿಯೊಬ್ಬರು ಅವರವರ ಭಾಷೆ, ಧರ್ಮ, ಜಾತಿ ಪ್ರೀತಿಸುವ ಜೊತೆಯಲ್ಲಿ, ಬೇರೆ ಭಾಷೆ, ಧರ್ಮ ಹಾಗೂ ಜಾತಿಯನ್ನು ಗೌರವಿಸಬೇಕು ಎಂದು ಕಮಲ ಹಂಪನಾ ಪ್ರತಿಪಾದಿಸುತ್ತಿದ್ದರು. ಅವರ ಈ ಸಂದೇಶ ಇಂದಿನ ಸಮಾಜಕ್ಕೆ ಜರೂರಾಗಿದೆ ಎಂದರು. ಕಮಲಾ ಹಂಪನಾ ಅವರು ಕನ್ನಡ ಸಾಹಿತ್ಯಲೋಕಕ್ಕೆ ಸಣ್ಣ ಕತೆ, ಕಾದಂಬರಿ, ವೈಚಾರಿಕ ಕೃತಿ, ಸಂಶೋಧನೆ, ವಿಮರ್ಶೆ ಹೀಗೆ ವಿವಿಧ ಪ್ರಕಾರಗಳ ರಚನೆಗಳನ್ನು ನೀಡಿದ್ದಾರೆ.

**ಕನ್ನಡದ ಮೊಟ್ಟ ಮೊದಲ ಗ್ರಂಥ ಸಂಪಾದನ ಲೇಖಕಿ**

ಕನ್ನಡದ ಮೊಟ್ಟ ಮೊದಲ ಗ್ರಂಥ ಸಂಪಾದನ ಲೇಖಕಿ ಎಂಬ ಕೀರ್ತಿಯೂ ಇವರಿಗೆ ಸಲ್ಲುತ್ತದೆ. ಸರ್ಕಾರ ದಾನ ಚಿಂತಾಮಣಿ ಅತ್ತಿಮಬ್ಬೆ ಹೆಸರಿನಲ್ಲಿ ಲೇಖಕಿಯರಿಗೆ ಕೊಡುವ ಪ್ರಶಸ್ತಿ ಘೋಷಣೆಗೆ ಮೂಲ ಕಾರಣವೇ ಕಮಲ ಹಂಪನಾ ಅವರು. ಮಹಿಳೆಯರಿಗೆ, ತಳಸಮು ದಾಯದವರಿಗೆ ಅನ್ಯಾಯವಾದಾಗ ಯಾವುದೇ ರಿಯಾಯಿತಿ ನೀಡದೆ ಅವರ ಪರವಾಗಿ ಧ್ವನಿ ಎರಿಸುತ್ತಿದ್ದರು ಎಂದು ಅವರ ಜೀವನ ಸಾಧನೆ ಸ್ಮರಿಸಿದರು.

ಈ ವೇಳೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಎಚ್.ಎಲ್. ಪುಷ್ಪಾ, ಸಾಹಿತಿ ಹಂ.ಪ. ನಾಗರಾಜಯ್ಯ, ಸಹಕಾರ ಸಚಿವ ಕೆ.ಎನ್. ರಾಜಣ್ಣ, ಕನ್ನಡ ಜನಶಕ್ತಿ ಕೇಂದ್ರ ಅಧ್ಯಕ್ಷ ಸಿ.ಕೆ. ರಾಮೇಗೌಡ, ಲೇಖಕಿ ಸುಕನ್ಯಾ ಮಾರುತಿ ಇತರರು ಇದ್ದರು.

ಪ್ರಜಾವಾಣಿ

ಗುರುವಾರ • ಜುಲೈ 4, 2024

ಅಗಲಿದ ಲೇಖಕಿಯ ಕೊಡುಗೆ ಸ್ಮರಿಸಿದ ಬರಗೂರು

# ಕಮಲಾ ಹಂಪನಾ ನೆನಪಿನ ರಂಗವಲ್ಲಿ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಕಮಲಾ ಹಂಪನಾ, ಸಾಹಿತ್ಯಿಕ, ಸಾಂಸ್ಕೃತಿಕ ಹಾಗೂ ಸಾಮಾಜಿಕವಾಗಿ ಬಹುದೊಡ್ಡ ಕೊಡುಗೆ ನೀಡಿದ ಲೇಖಕಿ' ಎಂದು ಸಾಹಿತಿ ಬರಗೂರು ರಾಮಚಂದ್ರಪ್ಪ ಅಭಿಪ್ರಾಯಪಟ್ಟರು.

ಬಂಡಾಯ ಸಾಹಿತ್ಯ ಸಂಘಟನೆಯು ವಿವಿಧ ಸಂಘ-ಸಂಸ್ಥೆಗಳ ಸಹಯೋಗ ದಲ್ಲಿ ನಗರದಲ್ಲಿ ಬುಧವಾರ ಆಯೋಜಿಸಿದ್ದ 'ಕಮಲಾ ಹಂಪನಾ ನುಡಿ ಗೌರವ' ಕಾರ್ಯಕ್ರಮಕ್ಕೆ ಚಾಲನೆ ನೀಡಿ, ಅವರು ಮಾತನಾಡಿದರು.

'ಕಮಲಾ ಅವರು ಮಹಿಳೆಯರು, ತಳ ಸಮುದಾಯದವರಿಗೆ ಅನ್ಯಾಯ ವಾದಾಗ, ಅವರ ಪರ ದನಿ ಎತ್ತು-ತ್ತಿದ್ದರು. ಅವರ ಒತ್ತಾಯದಿಂದಲೇ ಸರ್ಕಾರ ದಾನಚಿಂತಾಮಣಿ ಅತ್ತಿಮಬ್ಬೆ ಹೆಸರಲ್ಲಿ ಲೇಖಕಿ ಯರಿಗಾಗಿ ಪ್ರಶಸ್ತಿ ಸ್ಥಾಪಿಸಿತು. ನಮ್ಮ ಕಾಲದಲ್ಲಿಯೂ ಪ್ರಸ್ತುತ ವಾಗುವಂತಹ ಆದರ್ಶವನ್ನು ಕಮಲಾ ಹಂಪನಾ ಕಟ್ಟಿಕೊಟ್ಟಿದ್ದರು. ಈ ದಂಪತಿ ಧರ್ಮ, ಜಾತಿಯ ಸಂಕೋಲೆಗಳನ್ನು ದಾಟಿ ಅನ್ಯೋನ್ಯವಾಗಿ ಬದುಕಿ ತೋರಿಸಿದರು' ಎಂದು ಬರಗೂರು ರಾಮಚಂದ್ರಪ್ಪ ಮೆಚ್ಚುಗೆ ವ್ಯಕ್ತಪಡಿಸಿದರು.



ನುಡಿ ಗೌರವ

ಬೆಂಗಳೂರಿನಲ್ಲಿ ಬುಧವಾರ ನಡೆದ 'ಕಮಲಾ ಹಂಪನಾ ಗೌರವ ನುಡಿ ನಮನ' ಕಾರ್ಯಕ್ರಮದಲ್ಲಿ ಕಮಲಾ ಹಂಪನಾ ಅವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಲಾಯಿತು. ಸಹಕಾರ ಸಚಿವ ಕೆ.ಎನ್. ರಾಜಣ್ಣ, ಕಮಲಾ ಅವರ ಪತಿ ಹಂಪ ನಾಗರಾಜಯ್ಯ, ಪುತ್ರಿಯರಾದ ಎಚ್.ಎನ್.ರಾಜ್ಯಶ್ರೀ ,ಎಚ್.ಎನ್.ಆರತಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ, ಸಾಹಿತಿ ಬರಗೂರು ರಾಮಚಂದ್ರಪ್ಪ ಭಾಗವಹಿಸಿದ್ದರು – ಪ್ರಜಾವಾಣಿ ಚಿತ್ರ

ಸಹಕಾರ ಸಚಿವ ಕೆ.ಎನ್.ರಾಜಣ್ಣ ಮಾತನಾಡಿ, 'ಕಮಲಮ್ಮ ನಮ್ಮೂರಿನ ಮೊದಲ ಪದವೀಧರೆ. ಕಮಲಾ-ಹಂಪನಾ ಅವರದ್ದು ಆದರ್ಶದ ದಾಂಪತ್ಯ. ಅವರ ಸಂಸಾರದಲ್ಲಿ ಸಾಮರಸ್ಯ ಇತ್ತು' ಎಂದು ನೆನಪಿಸಿಕೊಂಡರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, 'ಕಮಲಾ ಹಂಪನಾ ಅವರು, ಅಧ್ಯಾಪನ, ಅಧ್ಯಯನ ಮತ್ತು ಬರವಣಿಗೆಗಳ ತ್ರಿವೇಣಿ ಸಂಗಮ ವಾಗಿದ್ದರು. ಕನ್ನಡ ಮೇಷ್ಟ್ರುಗಳಿಗೆ ಸ್ಫೂರ್ತಿಯಾಗಿದ್ದ ಅವರು, ಬಹುದೊಡ್ಡ ಶಿಷ್ಯ ಬಳಗವನ್ನೇ ಹೊಂದಿದ್ದರು' ಎಂದು ಸ್ಮರಿಸಿದರು.

ಕರ್ನಾಟಕ ಲೇಖಕಿಯರ ಸಂಘದ ಅಧ್ಯಕ್ಷೆ ಎಚ್.ಎಲ್. ಪುಷ್ಪ ಮಾತನಾಡಿ, 'ಅಧ್ಯಾಪನ, ಲೇಖನ, ಸಂಶೋಧನೆ ಸೇರಿ ಹಲವು ಕ್ಷೇತ್ರಗಳಲ್ಲಿ ತೊಡಗಿಸಿಕೊಂಡ ಕಮಲಾ ಅವರು, ಸೌಲಭ್ಯಗಳಿಲ್ಲದ ಕಾಲದಲ್ಲಿ ಶಾಸನ, ಇತಿಹಾಸ ಕುರಿತು ಗ್ರಂಥ ಸಂಪಾದನೆ ಮಾಡಿದ್ದರು' ಎಂದು ಹೇಳಿದರು.

# ಶೇಷಾದ್ರಿಪುರಂ ಕಾಲೇಜಿಗೆ ಪ್ರಥಮ ರ್‍ಯಾಂಕ್ ಆನರ್ಸ್

## ದೇಶದ 500 ಕಾಲೇಜುಗಳ ಪೈಕಿ ಶೇಷಾದ್ರಿಪುರಂ ಕಾಲೇಜಿಗೆ 44ನೇ ಸ್ಥಾನ


ಸಾಧ್ವಿಕಾ
5ನೇ ರ್‍ಯಾಂಕ್, ಬಿಬಿಎ


ದಿವ್ಯ ವಿ.ಎಸ್.
6ನೇ ರ್‍ಯಾಂಕ್ ಬಿ.ಕಾಂ


ಲಾವಣ್ಯ ಜೆ.ಎಂ
1ನೇ ರ್‍ಯಾಂಕ್ ಬಿ.ಕಾಂ (ಆನರ್ಸ್)


ಮಾಧುರ್ಯ ಸಾರಥಿ
3ನೇ ರ್‍ಯಾಂಕ್ ಬಿ.ಕಾಂ (ಆನರ್ಸ್)


ಸಂಜಯ್ ಬಿ.ಎನ್.
4ನೇ ರ್‍ಯಾಂಕ್ ಬಿ.ಕಾಂ (ಆನರ್ಸ್)


ಸರವಣ ಕುಮಾರ್ ಬಿ.
5ನೇ ರ್‍ಯಾಂಕ್ ಬಿ.ಕಾಂ (ಆನರ್ಸ್)


ಶಂಕರ್ ಎಸ್.ಪಿ.
7ನೇ ರ್‍ಯಾಂಕ್ ಬಿ.ಕಾಂ (ಆನರ್ಸ್)


ಮಂಜುನಾಥ್ ಎಂ.ಚೌಟಿ
8ನೇ ರ್‍ಯಾಂಕ್ ಬಿ.ಕಾಂ (ಆನರ್ಸ್)


ಮಧುಶ್ರೀ ಬಿ.ಆರ್.
9ನೇ ರ್‍ಯಾಂಕ್ ಬಿ.ಕಾಂ. (ಆನರ್ಸ್)


ಜಂಜನಾ ಎಚ್.ಕೆ.
10ನೇ ರ್‍ಯಾಂಕ್ ಬಿ.ಕಾಂ (ಆನರ್ಸ್)

"ಆಗದು ಎಂದು ಕೈಲಾಗದು ಎಂದು ಕೈಕಟ್ಟಿ ಕುಳಿತರೆ ಸಾಗದು ಕೆಲಸವು ಮುಂದೆ"..

ಈ ಸಾಲುಗಳಲ್ಲಿ ವ್ಯಕ್ತವಾಗುವ ಸಾರದಂತೆ ನಗರದ ಶೇಷಾದ್ರಿಪುರಂ ಕಾಲೇಜಿನ ವಿದ್ಯಾರ್ಥಿನಿ ಎಂ.ಜೆ.ಲಾವಣ್ಯ ಅವರು ಸಾಧಿಸಿಯೇ ಸಾಧಿಸುತ್ತೇನೆ ಎಂಬ ದೃಢ ನಿಶ್ಚಯದೊಂದಿಗೆ ಬೆಂಗಳೂರು ನಗರ ವಿಶ್ವವಿದ್ಯಾನಿಲಯ ಬಿ.ಕಾಂ. ಆನರ್ಸ್ ವಿಭಾಗದಲ್ಲಿ ಅತಿ ಹೆಚ್ಚು ಅಂಕ ಗಳಿಸುವ ಮೂಲಕ ಪ್ರಥಮ ರ್‍ಯಾಂಕ್ ಗಳಿಸಿ ಮೆಚ್ಚುಗೆಗೆ ಪಾತ್ರವಾಗಿದ್ದಾರೆ.

'ಇಂಡಿಯಾ ಟುಡೆ' ನಡೆಸಿದ ಸಮೀಕ್ಷೆಯಲ್ಲಿ ದೇಶದ 500 ಪ್ರಮುಖ ಅತ್ಯುತ್ತಮ ಪದವಿ ಕಾಲೇಜುಗಳಲ್ಲಿ ನಗರದ ಶೇಷಾದ್ರಿಪುರಂ ಕಾಲೇಜು 44ನೇ ಸ್ಥಾನ ಪಡೆದು ಹೆಗ್ಗಳಿಕೆ ಪಡೆದುಕೊಂಡಿದೆ. ಜೊತೆಗೆ ಕಾಲೇಜಿನ ಗುಣಮಟ್ಟದ ಶಿಕ್ಷಣ ಸೇರಿ ಹಲವು ಮಾನದಂಡಗಳನ್ನು ಪರಿಶೀಲಿಸಿ ಕೊಡಮಾಡುವ ಮಾನ್ಯತೆ ಎ++ ಗ್ರೇಡ್ ಅನ್ನು ಸಹ ನ್ಯಾಕ್ ಸಂಸ್ಥೆಯಿಂದ ಪಡೆದಿದೆ.

ಬೆಂಗಳೂರು ನಗರ ವಿವಿಯ ಬಿ.ಕಾಂ ಆನರ್ಸ್, ಬಿ.ಕಾಂ ಹಾಗೂ ಬಿಬಿಎಯಿಂದ ಒಟ್ಟು ಹತ್ತು ವಿದ್ಯಾರ್ಥಿಗಳು ಅತಿ ಹೆಚ್ಚಿನ ಅಂಕಗಳಿಸಿ ರ್‍ಯಾಂಕ್ ಪಡೆಯುವಲ್ಲಿ ಯಶಸ್ವಿಯಾಗಿದ್ದಾರೆ.

ಇವರು ಮೂರು ವರ್ಷಗಳ ಅಧ್ಯಯನ ಸಂದರ್ಭದಲ್ಲಿ ತೊಡಗಿಸಿಕೊಂಡ ಬಗೆಯನ್ನು ತಮ್ಮದೇ ಮಾತುಗಳಲ್ಲಿ ವ್ಯಕ್ತಪಡಿಸಿದ್ದಾರೆ.

### ಮನಸ್ಸು ಮಾಡಿದರೆ ಯಾವುದೂ ಅಸಾಧ್ಯವಲ್ಲ

ಮನಸು ಮಾಡಿದರೆ ಯಾವುದೂ ಅಸಾಧ್ಯವಲ್ಲ. ಹಠ ತೊಟ್ಟು ಒಳ್ಳೆಯ ಅಂಕ ಪಡೆದೇ ಪಡೆಯುತ್ತೇನೆ ಎಂದು ಮೊದಲೇ ನಿರ್ಧರಿಸಿಕೊಂಡೆ. ಜೊತೆಗೆ ಕಾಲೇಜಿನಲ್ಲಿ ಪಠ್ಯ ವಿಷಯದ ಜೊತೆಗೆ ಪಠ್ಯ ಸಂಬಂಧಿತ ವಿಶೇಷವಾದ ಕ್ರಿಯಾಶೀಲ ಚಟುವಟಿಕೆಗಳಲ್ಲಿ ಆಸಕ್ತಿಯಿಂದ ತೊಡಗಿಸಿಕೊಂಡಿದ್ದೆ. ಈ ನಡುವೆ ಪಠ್ಯ ವಿಷಯವನ್ನು ಚೆನ್ನಾಗಿ ಅರ್ಥೈಸಿಕೊಂಡು ಪರೀಕ್ಷೆಗಳನ್ನು ಎದುರಿಸಿದೆ. ಪರಿಣಾಮ ಹೆಚ್ಚಿನ ಅಂಕಗಳನ್ನು ಪಡೆಯಲು ಸಾಧ್ಯವಾಯಿತು ಎಂಬುದನ್ನು ಎಂ.ಜೆ.ಲಾವಣ್ಯ ಹೇಳುತ್ತಾರೆ.

ಬಿ.ಕಾಂ ಆನರ್ಸ್‌ನಲ್ಲಿ 4ನೇ ರ್‍ಯಾಂಕ್ ಪಡೆದಿರುವ ಬಿ.ಎನ್.ಸಂಜಯ್ ವ್ಯಕ್ತಪಡಿಸುವ ಅಭಿಪ್ರಾಯವೇನೆಂದರೆ, ಕಾಲೇಜಿನಲ್ಲಿರುವ ಸೌಲಭ್ಯಗಳನ್ನು ಬಳಸಿಕೊಂಡು ಅಧ್ಯಯನದಲ್ಲಿ ತೊಡಗಿಸಿಕೊಂಡೆ. ಬೋಧನಾ ಶೈಲಿಯು ಕೂಡ ಅಷ್ಟೇ ಪರಿಣಾಮಕಾರಿಯಾಗಿತ್ತು. ಇದರ ಜೊತೆ ಜೊತೆಗೆ ಪ್ರಚಲಿತ ವಿದ್ಯಮಾನಗಳ ಬಗ್ಗೆ ಬೋಧಕ ವರ್ಗದ ಜೊತೆಗೆ ಚರ್ಚೆ ಮಾಡುತ್ತಿದ್ದೆ. ಪರೀಕ್ಷೆಗಳನ್ನು ಯಾವುದೇ ಆತಂಕವಿಲ್ಲದೇ ಎದುರಿಸುತ್ತಿದ್ದೆ. ಹಾಗಾಗಿ ಉತ್ತಮ ಅಂಕಗಳಿಸಿ 4ನೇ ರ್‍ಯಾಂಕ್ ಗಳಿಸಲು ಸಾಧ್ಯವಾಯಿತು.

ಪ್ರತಿಯೊಂದು ಪಠ್ಯ ವಿಷಯಗಳನ್ನು ಬೋಧನಾ ಸಂದರ್ಭದಲ್ಲಿ ಪ್ರಾಧ್ಯಾಪಕ ವರ್ಗ ಉದಾಹರಣೆ ಸಹಿತವಾಗಿ ವಿವರಣೆ ಕೊಡುತ್ತಿದ್ದರು. ಹಾರ್ಡ್ ವರ್ಕ್‌ಗಿಂತ ಸ್ಮಾರ್ಟ್ ವರ್ಕ್ ಮಾಡುತ್ತಾ ಹೆಚ್ಚು ಗಮನವಹಿಸಿದೆ. ಇದರ ನಡುವೆ ಪಠ್ಯ ವಿಷಯವನ್ನು ಅರ್ಥ ಮಾಡಿಕೊಂಡು ನನ್ನದೇ ಶೈಲಿಯಲ್ಲಿ ಉತ್ತರ ಬರೆದಾಗ ಒಳ್ಳೆಯ ಅಂಕಗಳಿಸಿ ಬಿಬಿಎನಲ್ಲಿ 5ನೇ ರ್‍ಯಾಂಕ್ ಬರಲು ಅನುಕೂಲವಾಯಿತು ಎಂಬುದು ವಿ.ಎಸ್.ದಿವ್ಯ ಅವರ ನುಡಿಗಳಾಗಿವೆ. ಬಿ.ಕಾಂ ಆನರ್ಸ್‌ನಲ್ಲಿ 7ನೇ ರ್‍ಯಾಂಕ್ ಗಳಿಸಿರುವ ಎಸ್.ಪಿ.ಶಂಕರ್ ಹೇಳುವ ಪ್ರಕಾರ, ಪ್ರತಿ ತರಗತಿಗಳಿಗೂ ತಪ್ಪದೇ ಹಾಜರಾಗಿ ಬೋಧಕರ ಪಾಠಗಳನ್ನು ಆಸಕ್ತಿಯಿಂದ ಕೇಳಿ ಅದನ್ನು ಅಂದೇ ಮನದಟ್ಟು ಮಾಡಿಕೊಳ್ಳುತ್ತಿದ್ದೆ. ಹಾಗಾಗಿ ಒಳ್ಳೆಯ ಅಂಕಗಳಿಸಲು ಸಾಧ್ಯವಾಯಿತು ಎನ್ನುತ್ತಾರೆ. ಕಾಮರ್ಸ್ ಆಂಡ್ ಮ್ಯಾನೇಜ್‌ಮೆಂಟ್‌ಗೆ ಸಂಬಂಧಿಸಿದ ಫೋರಮ್, ವೇದಿಕೆಗಳಲ್ಲಿನ ಚಟುವಟಿಕೆಗಳು ವ್ಯಾಸಂಗದಲ್ಲಿ ಹೆಚ್ಚು ತೊಡಗಿಕೊಳ್ಳುವಂತೆ ಮಾಡಿದ್ದವು. ಈ ಪರಿಣಾಮವಾಗಿ ಹೆಚ್ಚಿನ ಅಂಕಗಳಿಸಲು ಸಾಧ್ಯವಾಯಿತು ಎನ್ನುತ್ತಾರೆ ಬಿ.ಕಾಂ ಆನರ್ಸ್‌ನಲ್ಲಿ 8ನೇ ರ್‍ಯಾಂಕ್ ಪಡೆದ ಮಂಜುನಾಥ್.

### ಗುಣಮಟ್ಟ ಕಾಯ್ದುಕೊಳ್ಳುವಿಕೆ

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಮೂಲ ಶಕ್ತಿ ಶಿಕ್ಷಕರು ಮತ್ತು ವಿದ್ಯಾರ್ಥಿಗಳು. ಪ್ರತಿ ಹಂತದಲ್ಲಿಯೂ ನಮ್ಮ ಕಾಲೇಜು ಒಳ್ಳೆಯ ಹಲವು ಭಾಗಗಳಲ್ಲಿ ಗುಣಮಟ್ಟ ಕಾಯ್ದುಕೊಂಡು ಬರುತ್ತಿದೆ.



* ಡಾ.ವೂಡೇ ಪಿ.ಕೃಷ್ಣ, ಅಧ್ಯಕ್ಷ, ಶೇಷಾದ್ರಿಪುರಂ ದತ್ತಿ ಶಿಕ್ಷಣ ಸಂಸ್ಥೆ




### ಪರಿಣಾಮಕಾರಿ ಬೋಧನೆ

ನಮ್ಮ ಕಾಲೇಜಿಗೆ ನ್ಯಾಕ್‌ನಿಂದ ಎ++ ಗ್ರೇಡ್ ಸಿಕ್ಕಿದ್ದು ಹೆಮ್ಮೆಯ ಸಂಗತಿ. ಈ ದೆಸೆಯಿಂದ ಇನ್ನು ಪರಿಣಾಮಕಾರಿ ಪಠ್ಯ ವಿಷಯಗಳ ಬೋಧನೆಗೆ ಹೆಚ್ಚಿನ ಮಹತ್ವ ನೀಡುತ್ತಿದ್ದೇವೆ.



* ಭಾಸ್ಕರ್, ಪ್ರಾಂಶುಪಾಲರು, ಶೇಷಾದ್ರಿಪುರಂ ಕಾಲೇಜು

## ನಾಡೋಜ ಡಾ. ವೂಡೇ ಪಿ ಕೃಷ್ಣರವರಿಗೆ ಕೇಂಪೇಗೌಡ ಅಂತರರಾಷ್ಟ್ರೀಯ ಪ್ರಶಸ್ತಿ



ಪ್ರಗತಿಪರ ಚಿಂತಕರು, ವಿಚಾರವಂತರು, ಆದಿಜಾಂಬವ ಜಾಗೃತಿ ಪತ್ರಿಕೆಯ ಪೋಷಕರು, ಅಭಿಮಾನಿಗಳು ಆದ ನಾಡೋಜ ಡಾ. ವೂಡೇ ಪಿ ಕೃಷ್ಣರವರಿಗೆ ಕರ್ನಾಟಕ ಸರ್ಕಾರವು “ಕೆಂಪೇಗೌಡ ಅಂತರರಾಷ್ಟ್ರೀಯ ಪ್ರಶಸ್ತಿ ನೀಡಿ ಗೌರವಿಸಲಾಗಿದೆ.

ಆದಿಜಾಂಬವ ಜಾಗೃತಿ ಪತ್ರಿಕೆಯ ಬಳಗವು ವೂಡೇಪಿ ಕೃಷ್ಣರವರಿಗೆ ಅಭಿನಂದಿಸುತ್ತದೆ.

- ಸಂ

ಪ್ರಜಾ ಪ್ರಗತಿ

# ವಿದ್ಯಾರ್ಥಿಗಳು ವಿವೇಕವಂತರಾಗಿ: ನಾಡೋಜ ಡಾ. ವೂಡೇ ಪಿ. ಕೃಷ್ಣ

ಬೆಂಗಳೂರು, ಜೂ,29; ಆಧುನಿಕ ಬದುಕಿಗೆ ಶಿಕ್ಷಣ ಅತ್ಯಂತ ಮಹತ್ವದ್ದಾಗಿದ್ದು, ವಿದ್ಯಾರ್ಥಿಗಳು ಅಕ್ಷರಸ್ಥರಾಗುವ ಜೊತೆಗೆ ವಿವೇಕವಂತರಾಗಬೇಕು ಎಂದು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ, ನಾಡೋಜ ಡಾ.ವೂಡೇ ಪಿ.ಕೃಷ್ಣ ಹೇಳಿದ್ದಾರೆ.

ಶೇಷಾದ್ರಿಪುರಂ ಸಂಜೆ ಕಾಲೇಜು ವಾರ್ಷಿಕೋತ್ಸವದ ಸಮಾರಂಭ ಉದ್ಘಾಟಿಸಿ ಮಾತನಾಡಿದ ಅವರು, ವಿದ್ಯಾರ್ಥಿಗಳು ಬುದಕಿನಲ್ಲಿ ಉತ್ತಮ ಅಭ್ಯಾಸಗಳನ್ನು ರೂಢಿಸಿಕೊಂಡು ಮುನ್ನಡೆಬೇಕು ಎಂದು ಹೇಳಿದರು.

ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಯಾಗಿ ಚಿತ್ರನಟ ಚೇತನ್ ಕುಮಾರ್ ಅವರು ಭಾಗವಹಿಸಿದ್ದರು, ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷರಾದ ಪಿ. ಸಿ. ನಾರಾಯಣ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷರಾದ ಹೆಂಜಾರಪ್ಪರವರು ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಜಂಟಿ ಕಾರ್ಯದರ್ಶಿಗಳಾದ ಎಂ. ಎಸ್ ನಟರಾಜ್, ಧರ್ಮದರ್ಶಿ ಮೃತ್ಯುಂಜಯ, ಪ್ರಾಚಾರ್ಯರಾದ ಡಾ. ಎನ್. ಎಸ್ ಸತೀಶ್, ಸಂಚಾಲಕರುಗಳಾದ ಸಂಧ್ಯಾ ಕಲರವದ ಸಂತೋಷ್ ಜೆ. ವಿ , ಲೀಲಾವತಿ ಎಂ, ನಾಗಸುಧ ಆರ್ ಮತ್ತಿತರರು ಪಾಲ್ಗೊಂಡಿದ್ದರು.

ಈ ಸಂಜೆ



ಶೇಷಾದ್ರಿಪುರಂ ಸಂಜೆ ಕಾಲೇಜು ವಾರ್ಷಿಕೋತ್ಸವ ಸಮಾರಂಭವನ್ನು ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ.ಕೃಷ್ಣ ಉದ್ಘಾಟಿಸಿದರು. ಮುಖ್ಯ ಅತಿಥಿಗಳಾಗಿ ನಟ ಚೇತನ್ ಕುಮಾರ್, ಕಾಲೇಜಿನ ಪದಾಧಿಕಾರಿಗಳಾದ ಪಿ.ಸಿ.ನಾರಾಯಣ, ಹೆಂಜಾರಪ್ಪ, ಎಂ. ಎಸ್.ನಟರಾಜ್, ಮೃತ್ಯುಂಜಯ, ಡಾ.ಎನ್.ಎಸ್.ಸತೀಶ್, ಸಂಧ್ಯಾ ಕಲರವದ ಸಂಚಾಲಕರಾದ ಸಂತೋಷ್ ಜೆ.ವಿ., ಲೀಲಾವತಿ ಎಂ. ಹಾಗೂ ಆಂತರಿಕ ಗುಣಮಟ್ಟದ ಭರವಸೆ ಕೋಶದ ಸಂಯೋಜಕರಾದ ನಾಗಸುಧ ಆರ್. ಪಾಲ್ಗೊಂಡಿದ್ದರು.

Bengaluru Edition Jun 29, 2024 Page No. 11

Sanjevani, Bangalore I ಬೆಂಗಳೂರು
Saturday 29 June 2024 I ಶನಿವಾರ 29 ಜೂನ್ 2024



ಶೇಷಾದ್ರಿಪುರಂ ಸಂಜೆ ಕಾಲೇಜು ವಾರ್ಷಿಕೋತ್ಸವದ ಸಮಾರಂಭವನ್ನು ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ.ವೂಡೇ ಪಿ.ಕೃಷ್ಣರವರು ಕಾರ್ಯಕ್ರಮವನ್ನು ಉದ್ಘಾಟಿಸಿದರು, ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಹೆಸರಾಂತ ನಟರಾದ ಚೇತನ್ ಕುಮಾರ್ ಅವರು ಭಾಗವಹಿಸಿದ್ದರು, ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷರಾದ ಪಿ. ಸಿ. ನಾರಾಯಣ ರವರು ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷರಾದ ಹೆಂಜಾರಪ್ಪರವರು ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಜಂಟಿ ಕಾರ್ಯದರ್ಶಿಗಳಾದ ಎಂ. ಎಸ್ ನಟರಾಜ್ ರವರು ಹಾಗೂ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಧರ್ಮದರ್ಶಿಗಳಾದ ಮೃತ್ಯುಂಜಯ ರವರು ಹಾಗೂ ಕಾಲೇಜಿನ ಪ್ರಾಚಾರ್ಯರಾದ ಡಾ. ಎನ್. ಎಸ್ ಸತೀಶ್ ರವರು, ಹಾಗೂ ಸಂಧ್ಯಾ ಕಲರವದ ಸಂಚಾಲಕರುಗಳಾದ ಸಂತೋಷ್ ಜೆ. ವಿ , ಲೀಲಾವತಿ ಎಂ ಹಾಗೂ ಆಂತರಿಕ ಗುಣಮಟ್ಟದ ಭರವಸೆ ಕೋಶದ ಸಂಯೋಜಕರಾದ ನಾಗಸುಧ ಆರ್. ಕಾರ್ಯಕ್ರಮದಲ್ಲಿ ಪಾಲ್ಗೊಂಡಿದ್ದರು.

Present Politics, Dt.29/06/24

# ಶೇಷಾದ್ರಿಪುರಂ ಕಾಲೇಜಿನಿಂದ "ತರಂಗ 2024" ವಾರ್ಷಿಕೋತ್ಸವ ಕಾರ್ಯಕ್ರಮ



ಬೆಂಗಳೂರು: ಶೇಷಾದ್ರಿಪುರಂ ಎಜುಕೇಶನ್ ಟ್ರಸ್ಟ್ ನ ಶೇಷಾದ್ರಿಪುರಂ ಕಾಲೇಜು ವತಿಯಿಂದ "ತರಂಗ 2024" ವಾರ್ಷಿಕೋತ್ಸವ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ತರಂಗ 2024 ಕಾರ್ಯಕ್ರಮಕ್ಕೆ ನಟ, ಪತ್ರಕರ್ತ ಇಂದ್ರಜಿತ್ ಲಂಕೇಶ್, ಡಬಲ್ ಒಲಿಂಪಿಯನ್ ಏಷಿಯನ್ ಗೇಮ್ಸ್ ಪದಕ ವಿಜೇತೆ ಪ್ರಮೀಳಾ ಅಯ್ಯಪ್ಪ ಚಾಲನೆ ನೀಡಿದರು.

ತರಂಗ 2024 ವಾರ್ಷಿಕ ಕಾರ್ಯಕ್ರಮದಲ್ಲಿ ಕಾಲೇಜು ವಿದ್ಯಾರ್ಥಿಗಳು ಕನ್ನಡ, ಹಿಂದಿ, ತೆಲುಗು ಸೇರಿದಂತೆ ವಿವಿಧ ಭಾಷೆಗಳ ಚಿತ್ರಗಳ ಹಾಡುಗಳಿಗೆ ನೃತ್ಯ ಮಾಡುವ ಮೂಲಕ ನೆರದಿದ್ದ ನೂರಾರು ಕಾಲೇಜು ವಿದ್ಯಾರ್ಥಿಗಳನ್ನು ರಂಜಿಸಿದರು. ಸಿನಿಮಾ ನಟರಾದ ಸಮರ್ ಜಿತ್ ಲಂಕೇಶ್, ಸಾನ್ಯ ಅಯ್ಯರ್, ಕಾಲೇಜು ಆಡಳಿತ ಸಲಹಾ ಮಂಡಳಿ ಅಧ್ಯಕ್ಷ ಗೌರವ ಸಹಾಯಕ ಕಾರ್ಯದರ್ಶಿ ಎಂ.ಎಸ್.ನಟರಾಜ್,ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ.ಕೃಷ್ಣ, ಪ್ರಾಂಶುಪಾಲರಾದ ಡಾ.ಬಿ.ಜಿ.ಭಾಸ್ಕರ, ಪ್ರೋ ವಿನುತ ಬಿ ಮತ್ತಿತರರು ಭಾಗವಹಿಸಿದ್ದರು

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

ಶನಿವಾರ 29 ಜೂನ್ 2024
VIJAYAVANI » 29 JUNE 2024

# ಸಾಧನೆಗೆ ಮಾದರಿ ಡಾ. ಬಿ.ಆರ್. ಮಮತಾ



ವಿಜಯವಾಣಿ ಚಿತ್ರ

ಗಾಂಧಿ ಭವನದಲ್ಲಿ ಆಯೋಜಿಸಿದ್ದ ಡಾ. ಮಮತಾ ಅಭಿನಂದನಾ ಸಮಾರಂಭದಲ್ಲಿ ನಿವೃತ್ತ ಅಧಿಕಾರಿಗಳಾದ ಶ್ರೀನಿವಾಸಮೂರ್ತಿ, ಎನ್.ಆರ್.ವಿಶುಕುಮಾರ್, ಹಿರಿಯ ಪತ್ರಕರ್ತೆ ನಾಹೀದ್ ಅತಾವುಲ್ಲಾ, ಶಿಕ್ಷಣ ತಜ್ಞ ಡಾ.ವೂಡೇ ಪಿ. ಕೃಷ್ಣ ಮತ್ತಿತರರಿದ್ದರು.

**ಬೆಂಗಳೂರು:** ಡಾ. ಬಿ.ಆರ್. ಮಮತಾ ಅವರು ಸರ್ಕಾರಿ ಸೇವೆಗೆ ಸೇರಿದ ನಂತರವೂ ಶಿಕ್ಷಣವನ್ನು ಮುಂದುವರಿಸಿದ್ದಲ್ಲದೆ ದೇಶ- ವಿದೇಶಗಳನ್ನು ಸುತ್ತಿ ಅನುಭವ ಸಂಪಾದಿಸುವ ಮೂಲಕ ಮಾದರಿಯಾಗಿದ್ದಾರೆ ಎಂದು ನಿವೃತ್ತ ಐಎಎಸ್ ಅಧಿಕಾರಿ ಎಂ.ಆರ್. ಶ್ರೀನಿವಾಸಮೂರ್ತಿ ಶ್ಲಾಘಿಸಿದ್ದಾರೆ.

ಗಾಂಧಿ ಭವನದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ನೋಂದಣಿ-ಮುದ್ರಾಂಕ ಇಲಾಖೆ ಮಹಾ ನಿರೀಕ್ಷಕಿ ಡಾ. ಮಮತಾಗೆ ಅಭಿನಂದನೆ ಸಲ್ಲಿಸಿ ಮಾತನಾಡಿದರು. ಕಾನೂನು ಮೀರಿ ಅದರ ಆಂತರ್ಯ ಅರ್ಥ ಮಾಡಿಕೊಂಡು ಜನರಿಗೆ ಉಪಯೋಗವಾಗುವಂತೆನಡೆದುಕೊಂಡವರುಮಮತಾ. ಸರ್ಕಾರಿವ್ಯವಸ್ಥೆಯಕೊರತೆಗಳನಡುವೆ ಅತ್ಯುತ್ತಮವಾಗಿ ಕಾರ್ಯ ನಿರ್ವಹಿಸಬಹುದು ಎಂದು ನಿರೂಪಿಸಿದ್ದಾರೆ ಎಂದರು.

ಐಎಎಸ್ ನಿವೃತ್ತ ಅಧಿಕಾರಿ ಎಂ.ಕೆ. ಶಂಕರಲಿಂಗೇಗೌಡ ಮಾತನಾಡಿ, ವಾರ್ತಾ ಇಲಾಖೆಯಲ್ಲಿ ಮಮತಾ ಅವರು ತಂತ್ರಜ್ಞಾನದ ಬಗ್ಗೆ ಹೆಚ್ಚಿನ ಜ್ಞಾನ ಹೊಂದಿದ್ದರು. ಮುಖ್ಯಮಂತ್ರಿಗಳ ಕಚೇರಿಯಲ್ಲಿ ಐಟಿ ವಿಭಾಗದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ತಂತ್ರಜ್ಞಾನ ಆಗಷ್ಟೇ ಬೆಳೆಯುತ್ತಿದ್ದ ಸಂದರ್ಭದಲ್ಲಿ ಸರ್ಕಾರದ ಕಣ್ಣು ಮತ್ತು ಕಿವಿಯಂತೆ ಸಾರ್ವಜನಿಕರೊಂದಿಗೆ ಸಂಪರ್ಕ ಸಾಧಿಸಿದ್ದರು ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

# ಶಿಕ್ಷಣದ ಜತೆ ಮಾನವೀಯ ಮೌಲ್ಯ ಗಳಿಸಿ

**ಸ್ವಾಮಿ ಶ್ರೀ ಜಪಾನಂದಜಿ ಕಿವಿಮಾತು**

**ಯಶವಂತಪುರ:** ವಿದ್ಯಾರ್ಥಿಗಳು ಜೀವನದಲ್ಲಿ ಉತ್ತಮ ಶಿಕ್ಷಣದ ಜತೆಗೆ ಮಾನವೀಯ ಮೌಲ್ಯಗಳನ್ನು ಅಳವಡಿಸಿಕೊಳ್ಳಬೇಕು ಎಂದು ಪಾವಗಡದ ಶ್ರೀ ರಾಮಕೃಷ್ಣ ಸೇವಾಶ್ರಮದ ಅಧ್ಯಕ್ಷ ಸ್ವಾಮಿ ಶ್ರೀ ಜಪಾನಂದಜಿ ಹೇಳಿದ್ದಾರೆ. ಕೆಂಗೇರಿ ಉಪನಗರದ ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಜಿನೆಸ್ ಸ್ಟಡೀಸ್ ಕಾಲೇಜಿನಲ್ಲಿ ಆಯೋಜಿಸಿದ್ದ 18ನೇ ವಾರ್ಷಿಕೋತ್ಸವ ಉದ್ಘಾಟಿಸಿ ಮಾತನಾಡಿದರು.

ಶಿಕ್ಷಣ ಎನ್ನುವುದು ಅಂಕ ಗಳಿಕೆಗಷ್ಟೇ ಸೀಮಿತವಲ್ಲ. ಸಮಾಜದ ಸರ್ವತೋಮುಖ ಅಭಿವೃದ್ಧಿಯತ್ತ ತೊಡಗಿಸಿಕೊಳ್ಳುವಂತಾಗಬೇಕು. ಉತ್ತಮ ಸಂಸ್ಕಾರದಿಂದ ಸಮಾಜದಲ್ಲಿ ನೀವು ಗಳಿಸಿದ ಕೀರ್ತಿ ನಿಮ್ಮ ತಂದೆ-ತಾಯಿ, ಗುರು- ಹಿರಿಯರಿಗೆ ಗೌರವ ಸಲ್ಲುತ್ತದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್. ಪಂಡಿತಾರಾಧ್ಯ ಮಾತನಾಡಿ, ನಮ್ಮ ನಾಡಿನ ಸಂಸ್ಕೃತಿ, ಸಂಸ್ಕಾರವನ್ನು ಪರಿಪಾಲಿಸಿದರೆ ನಾವು ಯಶಸ್ಸಿನ ದಾರಿಯಲ್ಲಿ ಸುಗಮವಾಗಿ ಸಾಗಬಹುದು. ಇದಕ್ಕೆ ಬದ್ಧತೆ ಅತ್ಯಗತ್ಯ ಎಂದು ಹೇಳಿದರು. ಕಾಲೇಜಿನ ವಾರ್ಷಿಕ ಕ್ರೀಡಾಕೂಟ ಹಾಗೂ ಸಾಂಸ್ಕೃತಿಕ ಸ್ಪರ್ಧೆಗಳಲ್ಲಿ ವಿಜೇತರಾದವರಿಗೆ ಬಹುಮಾನ ವಿತರಿಸಲಾಯಿತು. ಅತಿಹೆಚ್ಚು ಅಂಕ ಪಡೆದ ವಿದ್ಯಾರ್ಥಿಗಳಿಗೆ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ.ಕೃಷ್ಣ, ಗೌರವ ಖಜಾಂಚಿ ಬಿ.ಎಂ. ಪಾರ್ಥಸಾರಥಿ, ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ. ಜಯರಾಮು, ಪದವಿಪೂರ್ವ ಕಾಲೇಜಿನ ಪ್ರಾಂಶುಪಾಲ ಡಾ. ಆರ್.ಮಂಜುನಾಥ್, ಪೊಲೀಸ್ ಸಬ್ ಇನ್‌ಸ್ಪೆಕ್ಟರ್ ಕೆ.ಬಿ. ಆಶಾ, ಸಾಂಸ್ಕೃತಿಕ ಸಮಿತಿ ಸಂಚಾಲಕಿ ವಿ. ಮಾನಸಾ ಇತರರಿದ್ದರು.

ವಿಜಯವಾಣಿ ಚಿತ್ರ




ಕೆಂಗೇರಿ ಉಪನಗರದ ಶೇಷಾದ್ರಿಪುರಂ ಅಕಾಡೆಮಿ ಆಫ್ ಬಿಜಿನೆಸ್ ಸ್ಟಡೀಸ್ ಕಾಲೇಜಿನ 18ನೇ ವಾರ್ಷಿಕೋತ್ಸವ ಉದ್ಘಾಟನೆ ವೇಳೆ ಸ್ವಾಮಿ ಶ್ರೀ ಜಪಾನಂದಜಿ, ಎನ್.ಆರ್. ಪಂಡಿತಾರಾಧ್ಯ, ಡಾ. ವೂಡೇ ಪಿ. ಕೃಷ್ಣ, ಬಿ.ಎಂ. ಪಾರ್ಥಸಾರಥಿ, ಕೆ.ಬಿ.ಆಶಾ, ವಿ. ಮಾನಸಾ ಮತ್ತಿತರರಿದ್ದರು.

ಕನ್ನಡಪ್ರಭ ಶುಕ್ರವಾರ 28.06.2024

# 3 ಸಂಸ್ಥೆಗಳಿಗೆ ಕೆಂಪೇಗೌಡ ಪ್ರಶಸ್ತಿ



ಕೆಂಪೇಗೌಡ ಜಯಂತಿ ಕಾರ್ಯಕ್ರಮದಲ್ಲಿ ಬೆಂಗಳೂರು ಸೈನ್ಸ್ ಫೋರಂ, ಗಾಂಧೀ ಭವನ ಮತ್ತು ಸುಮಂಗಲಿ ಸೇವಾಶ್ರಮ ಸಂಸ್ಥೆಗಳಿಗೆ ಈ ಬಾರಿಯ ಕೆಂಪೇಗೌಡ ಅಂತಾರಾಷ್ಟ್ರೀಯ ಪ್ರಶಸ್ತಿ ಪ್ರದಾನ ಮಾಡಲಾಯಿತು.

ಕಾರ್ಯಕ್ರಮದಲ್ಲಿ ಸಮಾಜಮುಖಿ ಕಾರ್ಯದಲ್ಲಿ ತೊಡಗಿರುವ ನ್ಯಾಷನಲ್ ಎಜುಕೇಷನ್ ಸೊಸೈಟಿಯ ಅಂಗ ಸಂಸ್ಥೆ ಬೆಂಗಳೂರು ಸೈನ್ಸ್ ಫೋರಂ, ಗಾಂಧೀ ಭವನ ಮತ್ತು ಸುಮಂಗಲಿ ಸೇವಾಶ್ರಮ ಸಂಸ್ಥೆಗಳಿಗೆ ನಾಡಪ್ರಭು ಕೆಂಪೇಗೌಡ ಅಂತಾರಾಷ್ಟ್ರೀಯ ಪ್ರಶಸ್ತಿ ಪ್ರದಾನ ಮಾಡಲಾಯಿತು. ನ್ಯಾಷನಲ್ ಎಜುಕೇಷನ್ ಸೊಸೈಟಿ ಅಧ್ಯಕ್ಷ ಸುಬ್ರಹ್ಮಣ್ಯ ಮತ್ತು ಕಾರ್ಯದರ್ಶಿ ವೆಂಕಟಶಿವಾರೆಡ್ಡಿ, ಗಾಂಧಿ ಭವನ ಅಧ್ಯಕ್ಷ ವೂಡೇ ಪಿ.ಕೃಷ್ಣ, ಸುಮಂಗಲಿ ಸೇವಾಶ್ರಮದ ಸುಶೀಲಮ್ಮ ಹಾಗೂ ಶಾಂತಮ್ಮ ಪ್ರಶಸ್ತಿ ಸ್ವೀಕರಿಸಿದರು. ₹5 ಲಕ್ಷ ನಗದು, ಸ್ಮರಣಿಕೆ ಒಳಗೊಂಡ ಪ್ರಶಸ್ತಿ ನೀಡಿ, ಸನ್ಮಾನಿಸಿ ಮುಖ್ಯಮಂತ್ರಿಗಳು ಗೌರವಿಸಿದರು.

ಅನೇಕ ಸಂಘ ಸಂಸ್ಥೆಗಳೂ ಕೂಡ ಬೆಂಗಳೂರಿನ ಆಧಾರ ಸ್ತಂಭಗಳಾಗಿವೆ. ಹಾಗಾಗಿ ಈ ಬಾರಿ ವ್ಯಕ್ತಿ ಬದಲು ಸಂಘ, ಸಂಸ್ಥೆಗಳಿಗೆ ಪ್ರಶಸ್ತಿ ನೀಡಲು ಬಿ.ಎಲ್.ಶಂಕರ್ ಅವರ ನೇತೃತ್ವದ ಪ್ರಶಸ್ತಿ ಆಯ್ಕೆ ಸಮಿತಿ ತೀರ್ಮಾನದಂತೆ ಮೂರು ಸಂಸ್ಥೆಗಳಿಗೆ ಪ್ರಶಸ್ತಿ ನೀಡಲಾಗಿದೆ ಎಂದು ಉಪಮುಖ್ಯಮಂತ್ರಿ ಡಿ.ಕೆ.ಶಿವಕುಮಾರ್ ತಿಳಿಸಿದರು.

### 515ನೇ ಜಯಂತಿ ಕಾರ್ಯಕ್ರಮದಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯ ಅಭಿಮತ

# ಕೆಂಪೇಗೌಡರ ಜಾತ್ಯತೀತ ತತ್ವ ಮಾದರಿ

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಒಂದು ಜಾತಿಗೆ ಸೀಮಿತವಾಗದೇ ಎಲ್ಲ ಸಮುದಾಯಗಳ ಅಭಿವೃದ್ಧಿಗೆ ಕೆಂಪೇಗೌಡರು ಶ್ರಮಿಸಿದ್ದರು. ಅಂಥ ಜಾತ್ಯತೀತ ತತ್ವದಲ್ಲಿ ಜನರು ಬದುಕುವ ಮೂಲಕ ಕೆಂಪೇಗೌಡರನ್ನು ಸ್ಮರಿಸಬೇಕು' ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ತಿಳಿಸಿದರು.

ನಾಡಪ್ರಭು ಕೆಂಪೇಗೌಡ ಪಾರಂಪರಿಕ ತಾಣ ಅಭಿವೃದ್ಧಿ ಪ್ರಾಧಿಕಾರ, ಬಿಬಿಎಂಪಿ ಹಾಗೂ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ವತಿಯಿಂದ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ಆಯೋಜಿಸಿದ್ದ ನಾಡಪ್ರಭು ಕೆಂಪೇಗೌಡರ 515ನೇ ಜಯಂತಿ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ನದಿಗಳಿಲ್ಲದ ಬೆಂಗಳೂರಿನ ಸುತ್ತಮುತ್ತ ಕೆರೆಗಳನ್ನು ಕಟ್ಟಿಸಿದರು. ಎಲ್ಲ ವಿಧದ ವ್ಯಾಪಾರ ನಡೆಯಬೇಕು ಎಂದು ಪೇಟೆಗಳನ್ನು ನಿರ್ಮಿಸಿದರು. ಅವರ ಆಡಳಿತ ನೋಡಿದರೆ ಜಾತಿ, ಧರ್ಮಕ್ಕೆ ಸೀಮಿತವಾಗದೇ ಸಮಾಜಮುಖಿ ಆಗಿರುವುದು ಗೊತ್ತಾಗುತ್ತದೆ ಎಂದು ವಿವರಿಸಿದರು.

ಡಿಸಿಎಂ ಡಿ.ಕೆ. ಶಿವಕುಮಾರ್ ಮಾತನಾಡಿ, 'ಕೆಂಪೇಗೌಡರನ್ನು ಜಾತಿಗೆ ಸೀಮಿತ ಮಾಡಬಾರದು. ವಿಶ್ವಮಾನ್ಯ ಬೆಂಗಳೂರನ್ನು ಕಟ್ಟಿದ ಅವರು ಎಲ್ಲ ಜಾತಿ, ಧರ್ಮಕ್ಕೂ ನಾಡಪ್ರಭು' ಎಂದು ಬಣ್ಣಿಸಿದರು.

ಕೆಂಪೇಗೌಡರ ಬಗ್ಗೆ ಮಕ್ಕಳೂ ತಿಳಿದುಕೊಳ್ಳಬೇಕು ಎಂಬ ಕಾರಣಕ್ಕೆ ಬಿಬಿಎಂಪಿ ವ್ಯಾಪ್ತಿಯ ಎಲ್ಲ ಶಾಲೆಗಳಲ್ಲಿ ಚರ್ಚಾಸ್ಪರ್ಧೆ ಏರ್ಪಡಿಸಲು ಅನುದಾನ ನೀಡಲಾಗಿದೆ. ಸರ್ಕಾರವು 25ಕ್ಕೂ ಅಧಿಕ ಮಹನೀಯರ ಜಯಂತಿ ಆಚರಿಸುತ್ತಿದೆ. ಅದಕ್ಕೆ ನೀಡುತ್ತಿರುವ ಹಣ ಕಡಿಮೆ ಇದೆ. ಹಣದ ಕೊರತೆ ತಪ್ಪಿಸಲು ಬಿಬಿಎಂಪಿ ವ್ಯಾಪ್ತಿಯ ಪ್ರತಿ ತಾಲ್ಲೂಕಿಗೆ ₹ 1 ಲಕ್ಷ ಅನುದಾನ ನೀಡಲಾಗುತ್ತಿದೆ' ಎಂದು ವಿವರಿಸಿದರು.

ಸುಮನಹಳ್ಳಿ ರಸ್ತೆ ಬಳಿಯ 5 ಎಕರೆ ಜಾಗದಲ್ಲಿ ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದ ಕಚೇರಿಯನ್ನು ಅತ್ಯುತ್ತಮ ಸ್ವರೂಪದಲ್ಲಿ ನಿರ್ಮಾಣ ಮಾಡಲಾಗುವುದು. ಆವತಿಯಲ್ಲಿ 10 ಎಕರೆ ವಿಸ್ತೀರ್ಣದ ಜಾಗದಲ್ಲಿ ಅಧ್ಯಯನ ಕೇಂದ್ರ ಸ್ಥಾಪಿಸಲಾಗುವುದು ಎಂದು ಹೇಳಿದರು.

ಬೆಂಗಳೂರು ಒಡೆಯಬೇಡಿ: 'ಬೆಂಗಳೂರು ನಗರವನ್ನು ಭಾಗ ಮಾಡುವ ಪ್ರಯತ್ನ ಹಿಂದೆ ನಡೆದಿತ್ತು. ಹೋರಾಟದ ಮೂಲಕ ಆಗ ತಡೆಯಲಾಗಿತ್ತು. ಈಗ ಮತ್ತೆ ಭಾಗ ಮಾಡುವ ಕೂಗು ಎದ್ದಿದೆ. ಬೆಂಗಳೂರನ್ನು ಭಾಗ ಮಾಡಲು ಯಾರೂ ಮುಂದಾಗಬಾರದು. ನಗರ ಒಂದಾಗಿ ಉಳಿಯಬೇಕು' ಎಂದು ವಿಶ್ವ ಒಕ್ಕಲಿಗರ ಸಂಸ್ಥಾನದ ಚಂದ್ರಶೇಖರ ಸ್ವಾಮೀಜಿ ಆಗ್ರಹಿಸಿದರು.

ಇಬ್ಭಾಗ ಮಾಡಬೇಕು ಎಂದಿದ್ದರೆ ಉತ್ತರ ಕರ್ನಾಟಕ, ದಕ್ಷಿಣ ಕರ್ನಾಟಕ ಎಂದು ಮಾಡಿ. ಆಗ ಉತ್ತರ ಕರ್ನಾಟಕ ಅಭಿವೃದ್ಧಿ ಆಗುತ್ತದೆ. ಈಗ ಉತ್ತರ ಕರ್ನಾಟಕದವರು ಬೆಂಗಳೂರು ಸೇರಿರುವುದರಿಂದ ಆ ಭಾಗದಲ್ಲಿ ಅಭಿವೃದ್ಧಿ ಆಗಿಲ್ಲ ಎಂದು ತಿಳಿಸಿದರು.




ನಗರದಲ್ಲಿ ಆಯೋಜಿಸಿದ್ದ ನಾಡಪ್ರಭು ಕೆಂಪೇಗೌಡರ 515ನೇ ಜಯಂತ್ಯುತ್ಸವದಲ್ಲಿ ನಾಡಪ್ರಭು ಕೆಂಪೇಗೌಡ ಪ್ರಶಸ್ತಿಯನ್ನು ಗಾಂಧಿಭವನದ ಪರವಾಗಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಉಪಾಧ್ಯಕ್ಷ ಎನ್‌.ಆರ್‌. ವಿಶುಕುಮಾರ್‌, ಅಧ್ಯಕ್ಷ ವೂಡೇ ಪಿ. ಕೃಷ್ಣ, ಬೆಂಗಳೂರು ಸೈನ್ಸ್‌ ಫೋರಂ ಪರವಾಗಿ ಕಾರ್ಯದರ್ಶಿ ವಿ. ವೆಂಕಟಶಿವಾರೆಡ್ಡಿ, ಅಧ್ಯಕ್ಷ ಎಚ್‌.ಎನ್‌. ಸುಬ್ರಹ್ಮಣ್ಯ ಮತ್ತು ಸುಮಂಗಲಿ ಸೇವಾ ಆಶ್ರಮದ ಪರವಾಗಿ ಅಧ್ಯಕ್ಷೆ ಎಸ್‌.ಜಿ. ಸುಶೀಲಮ್ಮ, ಕಾರ್ಯದರ್ಶಿ ಎಂ. ಕಾಂತಮ್ಮ ಸ್ವೀಕರಿಸಿದರು. ಪ್ರಶಸ್ತಿ ಮೊತ್ತ ₹5 ಲಕ್ಷ. ಸಚಿವರಾದ ಕೃಷ್ಣ ಬೈರೇಗೌಡ, ಶಿವರಾಜ್‌ ತಂಗಡಗಿ, ಶಾಸಕ ಸಲೀಮ್‌ ಅಹ್ಮದ್‌, ವಿಶ್ವ ಒಕ್ಕಲಿಗ ಸಂಸ್ಥಾನದ ಚಂದ್ರಶೇಖರ ಸ್ವಾಮೀಜಿ, ಸ್ಫಟಿಕಪುರಿ ಮಠದ ನಂಜಾವಧೂತ ಸ್ವಾಮೀಜಿ, ಮುಖ್ಯಮಂತ್ರಿ ಸಿದ್ದರಾಮಯ್ಯ, ಆದಿಚುಂಚನಗಿರಿ ನಿರ್ಮಲಾನಂದನಾಥ ಸ್ವಾಮೀಜಿ, ಉಪಮುಖ್ಯಮಂತ್ರಿ ಡಿ.ಕೆ. ಶಿವಕುಮಾರ್‌, ಮುಖ್ಯಮಂತ್ರಿ ರಾಜಕೀಯ ಕಾರ್ಯದರ್ಶಿ ಕೆ. ಗೋವಿಂದರಾಜ್‌, ಶಾಸಕರಾದ ರಿಜ್ವಾನ್‌ ಅರ್ಷದ್‌, ಎಸ್‌.ಆರ್‌.ವಿಶ್ವನಾಥ್‌ ಪಾಲ್ಗೊಂಡಿದ್ದರು —ಪ್ರಜಾವಾಣಿ ಚಿತ್ರ

## ಮುಂದಿನ ಬಾರಿ ಹೆಸರು ಬಿಡಲ್ಲ; ಡಿ.ಕೆ.ಶಿವಕುಮಾರ್ ಭರವಸೆ

ನಾಡಪ್ರಭು ಕೆಂಪೇಗೌಡರ ಜಯಂತ್ಯುತ್ಸವದ ಆಹ್ವಾನ ಪತ್ರಿಕೆಯಲ್ಲಿ ಕೆಲವರ ಹೆಸರು ಬಿಟ್ಟುಹೋಗಿದೆ. ಇದು ಉದ್ದೇಶಪೂರ್ವಕವಾಗಿ ಆಗಿರುವುದಲ್ಲ. ಅವರ ಹೆಸರನ್ನು ಮುಂದಿನ ಬಾರಿ ಸೇರಿಸಲಾಗುವುದು ಎಂದು ಕಂದಾಯ ಸಚಿವ ಕೃಷ್ಣ ಬೈರೇಗೌಡ ಸ್ಪಷ್ಟನೆ ನೀಡಿದರು.

ಕೇಂದ್ರ ಸಚಿವರಾದ ನಿರ್ಮಲಾ ಸೀತಾರಾಮನ್, ಶೋಭಾ ಕರಂದ್ಲಾಜೆ, ವಿ. ಸೋಮಣ್ಣ ಹೆಸರಿದ್ದರೂ ಎಚ್.ಡಿ. ಕುಮಾರಸ್ವಾಮಿ ಹೆಸರು ಹಾಕಿರಲಿಲ್ಲ. ಅಲ್ಲದೇ ಒಕ್ಕಲಿಗ ಸಮಾಜದ ಹಿರಿಯರಾದ ದೇವೇಗೌಡರ ಹೆಸರೂ ಇಲ್ಲ ಎಂದು ಒಕ್ಕಲಿಗರ ಸಮಾಜದ ಕೆಲವರು ಬುಧವಾರ ಆಕ್ಷೇಪ ವ್ಯಕ್ತಪಡಿಸಿದ್ದರು.

ಲೋಪ: 'ಅಧಿಕಾರಿಗಳು ಶಿಷ್ಟಾಚಾರ ಅನುಸರಿಸಿದ್ದಾರೆ. ದೇವೇಗೌಡರು ಹಾಸನ ಜಿಲ್ಲೆ ವ್ಯಾಪ್ತಿಗೆ ಸೇರಿದವರು. ಕುಮಾರಸ್ವಾಮಿ ಮಂಡ್ಯ ಸಂಸದರು. ನಿರ್ಮಲಾ ಸೀತಾರಾಮನ್ ಬೆಂಗಳೂರಿನಿಂದ ಆಯ್ಕೆ ಆಗಿರುವುದರಿಂದ ಅವರ ಹೆಸರು ಸೇರಿಸಲಾಗಿದೆ. ನಾವು ಯಾರಿಗೂ ಅಗೌರವ ತೋರಿಲ್ಲ. ದೇವೇಗೌಡ–ಕುಮಾರಸ್ವಾಮಿ ಹೆಸರು ಹಾಕಬೇಕಿತ್ತು, ಲೋಪವಾಗಿದೆ, ಮುಂದೆ ಸರಿಪಡಿಸುತ್ತೇವೆ' ಎಂದು ಡಿ.ಕೆ. ಶಿವಕುಮಾರ್ ಪ್ರತಿಕ್ರಿಯಿಸಿದರು.

## 'ಬಿಜಿನೆಸ್ ಕಾರಿಡಾರ್'

ಪೆರಿಫೆರಲ್ ರಿಂಗ್ ರಸ್ತೆ (ಪಿಆರ್‌ಆರ್) ಕಾರ್ಯರೂಪಕ್ಕೆ ಬಾರದೆ ನಿಂತುಹೋಗಿತ್ತು. ಎಳೆಂಟು ಬಾರಿ ಟೆಂಡರ್ ಕರೆದರೂ ಯಾರೂ ಭಾಗವಹಿಸಿರಲಿಲ್ಲ. ಈಗ ಬಿಡಿಎ ಮೂಲಕ ಇದಕ್ಕೆ ಹೊಸ ರೂಪ ನೀಡಲಾಗಿದೆ ಎಂದು ಡಿ.ಕೆ. ಶಿವಕುಮಾರ್ ತಿಳಿಸಿದರು.

'ಇದನ್ನು ಕ್ಯಾಬಿನೆಟ್ ಮುಂದೆ ಇಟ್ಟು ಬಿಜಿನೆಸ್ ಕಾರಿಡಾರ್ ಎಂದು ಪರಿವರ್ತನೆ ಮಾಡಲಾಗುವುದು. ಸಂಚಾರ ದಟ್ಟಣೆ ನಿವಾರಣೆಗೆ 150 ಕಿ.ಮೀ.ನಷ್ಟು ಮೇಲ್ಸೇತುವೆಗಳನ್ನು ನಿರ್ಮಿಸಿ ಸಿಗ್ನಲ್ ಫ್ರೀ ಕಾರಿಡಾರ್ ಮಾಡಲಾಗುವುದು. ಸುರಂಗ ಮಾರ್ಗಗಳನ್ನು ನಿರ್ಮಿಸುವ ಯೋಜನೆ ಕೂಡ ಇದೆ' ಎಂದು ವಿವರಿಸಿದರು.

## ಬೆಳ್ಳಿ ರಥದಲ್ಲಿ ಮೆರವಣಿಗೆ

ಯಲಹಂಕ: ನಾಡಪ್ರಭು ಕೆಂಪೇಗೌಡರ ಜಯಂತಿ ಪ್ರಯುಕ್ತ ಮಿನಿ ವಿಧಾನಸೌಧದ ಮುಂಭಾಗದಲ್ಲಿರುವ ಕೆಂಪೇಗೌಡರ ಪ್ರತಿಮೆಗೆ ಶಾಸಕ ಎಸ್.ಆರ್. ವಿಶ್ವನಾಥ್ ಮಾಲಾರ್ಪಣೆ ಮಾಡಿದರು.

'ಬೆಂಗಳೂರಿನ ಹೆಸರಿನಲ್ಲಿ ಇಂದು ನಾವು ನಮ್ಮ ಕುಟುಂಬಗಳನ್ನು ಪೋಷಣೆ ಮಾಡಿಕೊಂಡು ವ್ಯಾಪಾರ ಮತ್ತು ವ್ಯವಹಾರಗಳನ್ನು ಮಾಡುತ್ತಿರುವುದಕ್ಕೆ ನಾಡಪ್ರಭು ಕೆಂಪೇಗೌಡರು ಮೂಲ ಕಾರಣಕರ್ತರು' ಎಂದು ಶಾಸಕರು ಸ್ಮರಿಸಿದರು.

ಕೆಂಪೇಗೌಡರ ಪ್ರತಿಮೆಯನ್ನು ಬೆಳ್ಳಿರಥದಲ್ಲಿ ಇಟ್ಟು, ಮಿನಿವಿಧಾನ ಸೌಧದಿಂದ ಪೊಲೀಸ್ ಠಾಣೆ ವೃತ್ತ, ಸಂತೆ ವೃತ್ತದ ಮೂಲಕ ಕೋಗಿಲು ವೃತ್ತದವರೆಗೆ ಮೆರವಣಿಗೆ ಮಾಡಲಾಯಿತು.

ವಿಜಯ ಕರ್ನಾಟಕ

ಶುಕ್ರವಾರ, 28 ಜೂನ್ 2024

## ನಾಡಪ್ರಭು ಕೆಂಪೇಗೌಡರ 515ನೇ ಜಯಂತಿಯಲ್ಲಿ ಮುಖ್ಯಮಂತ್ರಿ ಸಿದ್ದರಾಮಯ್ಯ

# ಕೆಂಪೇಗೌಡರು ಜಾತಿ ಸೀಮಿತ ದೊರೆಯಲ್ಲ

■ ವಿಕ ಸುದ್ದಿಲೋಕ ಬೆಂಗಳೂರು

ಕೆಂಪೇಗೌಡರು ಯಾವುದೇ ಜಾತಿಗೆ ಸೀಮಿತವಾದವರಲ್ಲ, ಜಾತ್ಯತೀತರಾಗಿ ಬದುಕಿದ್ದ ಅವರು ಎಲ್ಲ ಜಾತಿ, ಜನಾಂಗದವರ ಬೆಳವಣಿಗೆಗೆ ಪ್ರಯತ್ನಿಸಿದ್ದರು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಅಭಿಪ್ರಾಯಪಟ್ಟರು.

ನಾಡಪ್ರಭು ಕೆಂಪೇಗೌಡ ಪಾರಂಪರಿಕ ತಾಣ ಅಭಿವೃದ್ಧಿ ಪ್ರಾಧಿಕಾರ, ಬಿಬಿಎಂಪಿ ಹಾಗೂ ಕನ್ನಡ ಸಂಸ್ಕೃತಿ ಇಲಾಖೆ ಸಹಯೋಗದಲ್ಲಿ ಗುರುವಾರ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ಹಮ್ಮಿಕೊಂಡಿದ್ದ ನಾಡಪ್ರಭು ಕೆಂಪೇಗೌಡರ 515ನೇ ಜಯಂತಿ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

"ಕೆಂಪೇಗೌಡರು ನಮ್ಮೆಲ್ಲರಿಗೂ ಪ್ರೇರಣೆಯಾಗಿದ್ದಾರೆ. ಅವರು ಈ ನಾಡಿನ ದೊರೆಯಾಗಿ ಮಾದರಿ ಆಡಳಿತ ನೀಡಿದ್ದರು. ಕೃಷಿ ಸಮುದಾಯದಲ್ಲಿ ಜನಿಸಿದ್ದರೂ ಅವರ ಆಡಳಿತದ ಅವಧಿಯಲ್ಲಿ ಜಾತಿ, ಧರ್ಮ ಎಂದು ಭಾಗ ಮಾಡಲಿಲ್ಲ. ಅವರು ಕೈಗೊಂಡ ಅಭಿವೃದ್ಧಿ ಕೆಲಸ ಗಮನಿಸಿದರೆ ಅವರೊಬ್ಬ ಜಾತ್ಯತೀತ ವ್ಯಕ್ತಿಯಾಗಿದ್ದರು. ನಾಡಿನ ಜನತೆ ಜಯಂತಿ ಆಚರಿಸಿ ಸಂಭ್ರಮಿಸುವುದಲ್ಲದೆ, ಕೆಂಪೇಗೌಡರಂತೆ ಸಮಾಜಮುಖಿಯಾಗಿ ಕೆಲಸ ಮಾಡಿ ವಿಶ್ವ ಮಾನವರಾಗಲು ಪ್ರಾಮಾಣಿಕ ಪ್ರಯತ್ನಿಸಬೇಕು," ಎಂದು ಕರೆ ನೀಡಿದರು.

**ಸ್ಮರಣೆಯಿಂದ ಪ್ರೇರಣೆ:** "ಕೆಂಪೇಗೌಡರು ದೂರದೃಷ್ಟಿ ಇಟ್ಟುಕೊಂಡು ಬೆಳವಣಿಗೆ ಯಾವ ರೀತಿಯಾಗಬೇಕೆಂದು ಅರಿತು, ಎಲ್ಲರಿಗೂ ಆರ್ಥಿಕ, ಸಾಮಾಜಿಕ ಶಕ್ತಿ ತುಂಬುವ ಪ್ರಯತ್ನ ಮಾಡಿದವರು. ನಗರವನ್ನು ಆರ್ಥಿಕವಾಗಿ ಬೆಳೆಸಲು ನಗರದಲ್ಲಿ ಕೆರೆಗಳು, ದೇವಾಲಯಗಳು, ಪೇಟೆಗಳನ್ನು ನಿರ್ಮಿಸಿದರು. ಬೆಂಗಳೂರು ಈ ಮಟ್ಟಕ್ಕೆ ಬೆಳೆಯಲು ಅವರೇ ಕಾರಣ. ಅಂಥ ವ್ಯಕ್ತಿಯನ್ನು ಸ್ಮರಿಸುವುದು ಪ್ರತಿಯೊಬ್ಬರ ಕರ್ತವ್ಯ. ಸಮಾಜಮುಖಿಯಾಗಿ ಕೆಲಸ ಮಾಡಿರುವವರನ್ನು ಸ್ಮರಿಸುವುದರಿಂದ ಪ್ರೇರಣೆ ಹಾಗೂ ಸ್ಫೂರ್ತಿ ಪಡೆಯಬೇಕು," ಎಂದರು.

ಉಪ ಮುಖ್ಯಮಂತ್ರಿ ಡಿ.ಕೆ. ಶಿವಕುಮಾರ್ ಮಾತನಾಡಿ, "ವಿಶ್ವಮಾನ್ಯ ಬೆಂಗಳೂರನ್ನು ಕಟ್ಟಿದ ಕೆಂಪೇಗೌಡರು ಎಲ್ಲ ಜಾತಿ, ಧರ್ಮಗಳಿಗೂ ನಾಡಪ್ರಭುಗಳಾಗಿದ್ದಾರೆ. ಅವರ ಹೆಸರನ್ನು ಉಳಿಸಿ, ಬೆಳೆಸುವ ಜವಾಬ್ದಾರಿ ನಮ್ಮ ಮೇಲಿದೆ," ಎಂದರು.

"ಸರಕಾರದಿಂದ ಸುಮಾರು 25ಕ್ಕೂ ಹೆಚ್ಚು ಜಯಂತಿಗಳನ್ನು ಆಚರಿಸಲಾಗುತ್ತದೆ. ಈಗ ನೀಡುತ್ತಿರುವ ಹಣ ಕಡಿಮೆಯಾಗುತ್ತಿರುವ ಕಾರಣಕ್ಕೆ ಪ್ರತಿ ತಾಲೂಕಿಗೆ 1 ಲಕ್ಷ ರೂ. ನೀಡುವಂತೆ ಸೂಚಿಸಲಾಗಿದೆ. ಇದರಿಂದ ರಾಜ್ಯದ ಎಲ್ಲ ಶಾಲೆಗಳಲ್ಲಿ ಶಿಕ್ಷಣ ಇಲಾಖೆಯಿಂದ ಕೆಂಪೇಗೌಡರ ಬಗ್ಗೆ ಚರ್ಚಾ ಸ್ಪರ್ಧೆ ಹಾಗೂ ಶಿಕ್ಷಣಕ್ಕೆ ನೀಡಲು ಪ್ರತಿ ತಾಲೂಕಿಗೆ ತಲಾ 1 ಲಕ್ಷ ಹಣ ಬಿಡುಗಡೆ ಮಾಡಲಾಗುವುದು," ಎಂದು ತಿಳಿಸಿದರು.

"ಕಾರ್ಯರೂಪಕ್ಕೆ ಬರದೇ ನಿಂತು ಹೋಗಿದ್ದ ಪೆರಿಫೆರಲ್ ರಿಂಗ್ ರಸ್ತೆಗೀಗ ಬಿಡಿಎ ಮೂಲಕ ಹೊಸ ರೂಪ ನೀಡಲಾಗಿದೆ. ಶೀಘ್ರವೇ ಸಚಿವ ಸಂಪುಟದ ಮುಂದೆ ವಿಷಯ ಪ್ರಸ್ತಾಪಿಸಿ, ಬಿಜಿನೆಸ್ ಕಾರಿಡಾರ್ ಎಂದು ಮರುನಾಮಕರಣ ಮಾಡಲಾಗುವುದು. ಸಂಚಾರ ದಟ್ಟಣೆ ನಿವಾರಣೆಗೆ 150 ಕಿ.ಮೀ.ನಷ್ಟು ಮೇಲ್ಸೇತುವೆಗಳ ನಿರ್ಮಾಣ ಹಾಗೂ ಸಿಗ್ನಲ್ ಫ್ರೀ ಕಾರಿಡಾರ್, ಟನಲ್ ರಸ್ತೆ ನಿರ್ಮಾಣಕ್ಕೆ ಮಾಡುವ ಮೂಲಕ ರಾಜಧಾನಿಗೆ ಹೊಸ ದಿಕ್ಕು ನೀಡಲಾಗುವುದು," ಎಂದರು.

ಇದೇ ವೇಳೆ 'ಬೆಂಗಳೂರು ಸೈನ್ಸ್ ಫೋರಂ', 'ಗಾಂಧಿ ಭವನ', 'ಸುಮಂಗಲಿ ಸೇವಾ ಸಂಸ್ಥೆ'ಗಳಿಗೆ ಪ್ರಸಕ್ತ ಸಾಲಿನ ನಾಡಪ್ರಭು ಕೆಂಪೇಗೌಡ ಅಂತಾರಾಷ್ಟ್ರೀಯ ಪ್ರಶಸ್ತಿ ನೀಡಿ ಗೌರವಿಸಲಾಯಿತು.

ಆದಿಚುಂಚನಗಿರಿ ಮಹಾಸಂಸ್ಥಾನದ ಮಠದ ನಿರ್ಮಲಾನಂದನಾಥ ಸ್ವಾಮೀಜಿ, ವಿಶ್ವ ಒಕ್ಕಲಿಗರ ಮಹಾಸಂಸ್ಥಾನದ ಚಂದ್ರಶೇಖರ ಸ್ವಾಮೀಜಿ, ಪಟ್ಟನಾಯಕನಹಳ್ಳಿ ಸ್ಫಟಿಕಪುರಿ ಮಹಾಸಂಸ್ಥಾನ ಮಠದ ಪೀಠಾಧ್ಯಕ್ಷ ಡಾ. ನಂಜಾವಧೂತ ಸ್ವಾಮೀಜಿ, ಸಚಿವರಾದ ಶಿವರಾಜ್ ತಂಗಡಗಿ, ಕೆ.ಎಚ್. ಮುನಿಯಪ್ಪ, ಕೃಷ್ಣಬೈರೇಗೌಡ, ಶಾಸಕ ರಿಜ್ವಾನ್ ಅರ್ಷದ್, ಮೇಲ್ಮನೆ ಸದಸ್ಯರಾದ ಸಲೀಂ ಅಹ್ಮದ್, ರಾಮೋಜಿಗೌಡ, ಪುಟ್ಟಣ್ಣ, ಸಿಎಂ ರಾಜಕೀಯ ಕಾರ್ಯದರ್ಶಿ ಗೋವಿಂದರಾಜು, ಶಾಸಕ ವಿಶ್ವನಾಥ್, ಒಕ್ಕಲಿಗರ ಸಂಘದ ಅಧ್ಯಕ್ಷ ಹನುಮಂತಯ್ಯ ಇದ್ದರು.




ಬಿಬಿಎಂಪಿ ಹಾಗೂ ಕನ್ನಡ ಸಂಸ್ಕೃತಿ ಇಲಾಖೆ ವತಿಯಿಂದ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ಗುರುವಾರ ನಡೆದ ನಾಡಪ್ರಭು ಕೆಂಪೇಗೌಡರ 515 ನೇ ಜಯಂತಿ ಕಾರ್ಯಕ್ರಮವನ್ನು ಮುಖ್ಯಮಂತ್ರಿ ಸಿದ್ದರಾಮಯ್ಯ ಉದ್ಘಾಟಿಸಿದರು. ಡಿಸಿಎಂ ಡಿ.ಕೆ. ಶಿವಕುಮಾರ್, ನಿರ್ಮಲಾನಂದನಾಥ ಸ್ವಾಮೀಜಿ ಇದ್ದರು.



ನಾಡಪ್ರಭು ಕೆಂಪೇಗೌಡ ಪ್ರಶಸ್ತಿಗೆ ಭಾಜನವಾದ ಬೆಂಗಳೂರು ಸೈನ್ಸ್ ಫೋರಂ, ಗಾಂಧಿ ಸ್ಮಾರಕ ನಿಧಿ ಹಾಗೂ ಸುಮಂಗಲಿ ಸೇವಾಸಂಸ್ಥೆಗಳ ಪ್ರತಿನಿಧಿಗಳಿಗೆ ಪ್ರಶಸ್ತಿ ಪ್ರದಾನ ಮಾಡಲಾಯಿತು.

### ಕೆಂಪೇಗೌಡರ ಸ್ಮಾರಕ

"ಮುಂದಿನ ವರ್ಷದಿಂದ ಕೆಂಪೇಗೌಡ ಜಯಂತಿಗೆ ವಿಶೇಷ ಸ್ವರೂಪ ನೀಡಿ ಆಚರಿಸಲಾಗುವುದು. ಸುಮನಹಳ್ಳಿ ರಸ್ತೆ ಬಳಿಯ 5 ಎಕರೆ ಜಾಗದಲ್ಲಿ ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದ ಕಚೇರಿ ನಿರ್ಮಾಣವಾಗಲಿದೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಆವತಿಯಲ್ಲಿ 10 ಎಕರೆ ವಿಸ್ತೀರ್ಣದ ಜಾಗದಲ್ಲಿ ಕೆಂಪೇಗೌಡರ ಸ್ಮಾರಕ ನಿರ್ಮಾಣಕ್ಕೆ ಸರಕಾರ ಸಿದ್ಧತೆ ಮಾಡಿಕೊಂಡಿದೆ," ಎಂದು ಉಪಮುಖ್ಯಮಂತ್ರಿ ಡಿ. ಕೆ. ಶಿವಕುಮಾರ್ ತಿಳಿಸಿದರು.

# ಜಾತಿ-ಧರ್ಮಗಳ ವಿಂಗಡಿಸದ ಕೆಂಪೇಗೌಡ

## ನಾಡಪ್ರಭು ಕೆಂಪೇಗೌಡರ 515ನೇ ಜಯಂತಿ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಕೆಂಪೇಗೌಡರು ಎಲ್ಲ ಜನಾಂಗ, ಜಾತಿಯನ್ನು ಅಭಿವೃದ್ಧಿಗೊಳಿಸಲು ಪ್ರಯತ್ನಿಸುವ ಮೂಲಕ ಜಾತ್ಯತೀತವಾಗಿದ್ದರು ಮತ್ತು ಮಾದರಿ ಆಡಳಿತ ನೀಡಿದ್ದರು ಎಂದು ಮುಖ್ಯಮಂತ್ರಿ ಸಿದ್ದರಾಮಯ್ಯ ಹೇಳಿದ್ದಾರೆ.

ನಾಡಪ್ರಭು ಕೆಂಪೇಗೌಡ ಪಾರಂಪರಿಕ ತಾಣ ಅಭಿವೃದ್ಧಿ ಪ್ರಾಧಿಕಾರ, ಬಿಬಿಎಂಪಿ ಹಾಗೂ ಕನ್ನಡ ಸಂಸ್ಕೃತಿ ಇಲಾಖೆ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ಗುರುವಾರ ಆಯೋಜಿಸಿದ್ದ ಕೆಂಪೇಗೌಡರ 515ನೇ ಜಯಂತಿ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದರು.



ಕೆಂಪೇಗೌಡರಂತೆ ಎಲ್ಲರೂ ಸಮಾಜಮುಖಿಯಾಗಿ ಕೆಲಸ ಮಾಡಲು ಪ್ರಾಮಾಣಿಕವಾಗಿ ಪ್ರಯತ್ನಿಸಬೇಕೆಂಬ ಉದ್ದೇಶದಿಂದ ಕೆಂಪೇಗೌಡರ ಜಯಂತಿ ಆಚರಿಸಲಾಗುತ್ತಿದೆ. ರೈತ ಸಮುದಾಯದಲ್ಲಿ ಜನಿಸಿದ್ದರೂ ತಮ್ಮ ಆಡಳಿತದ ಅವಧಿಯಲ್ಲಿ ಜಾತಿ, ಧರ್ಮ ಎಂದು ವಿಂಗಡಣೆ ಮಾಡಲಿಲ್ಲ. ಅವರೊಬ್ಬ ಜಾತ್ಯತೀತ ವ್ಯಕ್ತಿಯಾಗಿದ್ದರು ಎಂದು ತಿಳಿಯುತ್ತದೆ ಎಂದರು.

ಬೆಂಗಳೂರು ಈ ಮಟ್ಟಕ್ಕೆ ಬೆಳೆದಿದ್ದರೆ ಅದಕ್ಕೆ ಕೆಂಪೇಗೌಡರು ಕಾರಣ. ದೂರದೃಷ್ಟಿ ಇಟ್ಟುಕೊಂಡು ಆರ್ಥಿಕ, ಸಾಮಾಜಿಕ ಬೆಳವಣಿಗೆ ಯಾವ ರೀತಿಯಾಗಬೇಕೆಂದು ಅರಿತು, ಎಲ್ಲರಿಗೂ ಆರ್ಥಿಕ ಸಾಮಾಜಿಕ ಶಕ್ತಿಯನ್ನು ತುಂಬಲು ಪ್ರಯತ್ನಿಸಿದ್ದರು. ಬೆಂಗಳೂರಿನಲ್ಲಿ ಯಾವುದೇ ಪ್ರಮುಖ ನದಿಗಳಿಲ್ಲದಿರುವುದನ್ನು ಮನಗಂಡು ಅನೇಕ ಕೆರೆಗಳನ್ನು ನಿರ್ಮಿಸಿದರು. ಆರ್ಥಿಕವಾಗಿ ಬೆಂಗಳೂರು ಬೆಳೆಯಬೇಕೆಂಬ ಸದಾಶಯದಿಂದ ದೇವಾಲಯ, ಪೇಟೆಗಳನ್ನು ನಿರ್ಮಾಣ ಮಾಡಿದರು ಎಂದು ಸ್ಮರಿಸಿದರು.

ಉಪ ಮುಖ್ಯಮಂತ್ರಿ ಡಿ.ಕೆ. ಶಿವಕುಮಾರ್, ಆದಿಚುಂಚನಗಿರಿ ಮಹಾಸಂಸ್ಥಾನದ ಮಠದ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ, ವಿಶ್ವ ಒಕ್ಕಲಿಗರ ಮಹಾಸಂಸ್ಥಾನದ ಶ್ರೀ ಚಂದ್ರಶೇಖರನಾಥ ಸ್ವಾಮೀಜಿ, ಗುರುಗುಂಡ ಬ್ರಹ್ಮೇಶ್ವರಸ್ವಾಮಿ ಮಹಾಸಂಸ್ಥಾನ ಮಠದ ಡಾ. ನಂಜಾವಧೂತ ಸ್ವಾಮೀಜಿ, ಸಚಿವರಾದ ಶಿವರಾಜ ತಂಗಡಗಿ, ಕೆ.ಎಚ್. ಮುನಿಯಪ್ಪ, ಶಾಸಕ ರಿಜ್ವಾನ್ ಅರ್ಷದ್ ಹಾಗೂ ಒಕ್ಕಲಿಗರ ಸಂಘದ ಅಧ್ಯಕ್ಷ ಹನುಮಂತಯ್ಯ ಮತ್ತಿತರರಿದ್ದರು.

ಕಂಠೀರವ ಕ್ರೀಡಾಂಗಣದಲ್ಲಿ ಗುರುವಾರ ನಡೆದ ಕೆಂಪೇಗೌಡರ ಜಯಂತಿಯಲ್ಲಿ ನಾಡಪ್ರಭು ಪ್ರತಿಮೆಗೆ ಮುಖ್ಯಮಂತ್ರಿ ಸಿದ್ದರಾಮಯ್ಯ ಪುಷ್ಪಾರ್ಚನೆ ಮಾಡಿದರು. ಡಿಸಿಎಂ ಡಿ.ಕೆ. ಶಿವಕುಮಾರ್ ಮತ್ತಿತರರು ಹಾಜರಿದ್ದರು.



ಕಂಠೀರವ ಕ್ರೀಡಾಂಗಣದಲ್ಲಿ ಗಮನ ಸೆಳೆದ ಹಾಡಿ ಮಹಿಳೆಯರ ನೃತ್ಯ.

### 3 ಸಂಸ್ಥೆಗಳಿಗೆ ಪ್ರಶಸ್ತಿ

ಬೆಂಗಳೂರಿನ ಸೈನ್ಸ್ ಫೋರಂ, ಗಾಂಧಿ ಭವನ ಮತ್ತು ಸುಮಂಗಲಿ ಸೇವಾಶ್ರಮಕ್ಕೆ ಕೆಂಪೇಗೌಡ – ಅಂತಾರಾಷ್ಟ್ರೀಯ ಪ್ರಶಸ್ತಿ ನೀಡಿ ಗೌರವಿಸಲಾಯಿತು. ಪ್ರಶಸ್ತಿಯು 5 ಲಕ್ಷ ರೂ. ನಗದು ಮತ್ತು ಸ್ಮರಣಿಕೆ ಒಳಗೊಂಡಿದೆ. ನ್ಯಾಷನಲ್ ಎಜುಕೇಷನ್ ಸೊಸೈಟಿ ಅಧ್ಯಕ್ಷ ಸುಬ್ರಮಣ್ಯ ಮತ್ತು ಕಾರ್ಯದರ್ಶಿ ವೆಂಕಟಶಿವಾರೆಡ್ಡಿ, ಗಾಂಧಿಭವನ ಅಧ್ಯಕ್ಷ ವೂಡೇ ಪಿ. ಕೃಷ್ಣ, ಸುಮಂಗಲಿ ಸೇವಾಶ್ರಮದ ಸುಶೀಲಮ್ಮ ಹಾಗೂ ಶಾಂತಮ್ಮ ಪ್ರಶಸ್ತಿ ಸ್ವೀಕರಿಸಿದರು.

6 ಶಿಷ್ಟಾಚಾರದ ಪ್ರಕಾರ ಆಹ್ವಾನ ಪತ್ರಿಕೆಯಲ್ಲಿ ಹೆಸರನ್ನು ಪ್ರಕಟಿಸಲಾಗಿದೆ. ಸಮುದಾಯದ ಕೆಲವರ ಹೆಸರನ್ನು ಉದ್ದೇಶಪೂರ್ವಕವಾಗಿ ಕೈಬಿಡಲಾಗಿದೆ ಎಂಬ ಮಾತು ಸತ್ಯಕ್ಕೆ ದೂರವಾದುದು. ಯಾರನ್ನೂ ಕೈಬಿಡುವ ಉದ್ದೇಶ ನಮಗಿಲ್ಲ. ಮುಂದಿನ ವರ್ಷ ಎಲ್ಲರನ್ನೂ ಸೇರಿಸಿ ಕಾರ್ಯಕ್ರಮ ನಡೆಸಲಾಗುತ್ತದೆ.

| ಕೃಷ್ಣ ಬೈರೇಗೌಡ ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷ

### 150 ಕಿ.ಮೀ. ಮೇಲ್ಸೇತುವೆ ನಿರ್ಮಾಣಕ್ಕೆ ಚಾಲನೆ

ಪೆರಿಫೆರಲ್ ರಿಂಗ್ ರಸ್ತೆ ಕಾರ್ಯರೂಪಕ್ಕೆ ಬರದೆ ನಿಂತುಹೋಗಿತ್ತು. ಎಂಟು ಬಾರಿ ಯಾರೂ ಟೆಂಡರ್‌ನಲ್ಲಿ ಭಾಗವಹಿಸಿರಲಿಲ್ಲ. ಈಗ ಬಿಡಿಎ ಮೂಲಕ ಇದಕ್ಕೆ ಹೊಸ ರೂಪ ನೀಡಲಾಗಿದೆ. ಸದ್ಯದಲ್ಲೇ ಸಂಪುಟದ ಮುಂದೆ ಇಟ್ಟು ಬಿಜಿನೆಸ್ ಕಾರಿಡಾರ್ ಎಂದು ಪರಿವರ್ತನೆ ಮಾಡಲಾಗುವುದು. ಸಂಚಾರದಟ್ಟಣೆ ನಿವಾರಣೆಗೆ 150 ಕಿಮೀ ಮೇಲ್ಸೇತುವೆಗಳ ನಿರ್ಮಾಣ ಹಾಗೂ ಸಿಗ್ನಲ್ ಫ್ರೀ ಕಾರಿಡಾರ್‌ಗಳನ್ನು ನಿರ್ಮಾಣ ಮಾಡಲು ಸರ್ಕಾರ ಮುಂದಾಗಿದೆ. ಟನಲ್ ರಸ್ತೆ ನಿರ್ಮಾಣಕ್ಕೆ ಮುಂದಾಗಿದ್ದು, ಹೊಸ ರೀತಿಯನ್ನು ರಾಜಧಾನಿಯನ್ನು ನಿರ್ಮಾಣ ಮಾಡಲು ಬದ್ಧವಾಗಿದೆ ಎಂದು ಡಿ.ಕೆ. ಶಿವಕುಮಾರ್ ತಿಳಿಸಿದರು. ಕೆಂಪೇಗೌಡ ಜಯಂತಿಗೆ ಮುಂದಿನ ವರ್ಷದಿಂದ ವಿಶೇಷ ಸ್ವರೂಪ ನೀಡಲಾಗುವುದು. ಸುಮ್ಮನಹಳ್ಳಿ ಬಳಿಯ 5 ಎಕರೆ ಜಾಗದಲ್ಲಿ ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದ ಕಚೇರಿಯನ್ನು ಅತ್ಯುತ್ತಮ ರೂಪದಲ್ಲಿ ನಿರ್ಮಿಸಲಾಗುವುದು. ಆಹಾರ ಸಚಿವ ಕೆ.ಎಚ್. ಮುನಿಯಪ್ಪ ಅವರು 10 ಎಕರೆ ವಿಸ್ತೀರ್ಣದ ಜಾಗದಲ್ಲಿ ಸ್ಮಾರಕ ನಿರ್ಮಾಣಕ್ಕೆ ಮುಖ್ಯಮಂತ್ರಿಗಳ ಮೇಲೆ ಒತ್ತಡ ಹಾಕಿ ಯಶಸ್ವಿಯಾಗಿದ್ದಾರೆ ಎಂದು ಶಿವಕುಮಾರ್ ಹೇಳಿದರು.

ಕಂಠೀರವ ಕ್ರೀಡಾಂಗಣದಲ್ಲಿ ಕೆಂಪೇಗೌಡ ಜಯಂತಿ ಅಂಗವಾಗಿ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮ ಆಯೋಜನೆ ಮಾಡಲಾಗಿತ್ತು.



ನಗರದ ಪ್ರಮುಖ ರಸ್ತೆಗಳಲ್ಲಿ ಮೆರವಣಿಗೆ ನಡೆಸಿದ ಕೆಂಪೇಗೌಡರ ಪುರಜ್ಯೋತಿಯನ್ನು ಕಂಠೀರವ ಕ್ರೀಡಾಂಗಣಕ್ಕೆ ತರಲಾಯಿತು.

# ಕೆಂಪೇಗೌಡರ ಆಚಾರ-ವಿಚಾರ ಪ್ರಚಾರಕ್ಕೆ ಹೆಚ್ಚಿನ ಅನುದಾನ

» ಡಿಸಿಎಂ ಡಿ.ಕೆ. ಶಿವಕುಮಾರ್ ಹೇಳಿಕೆ

» ನಾಡಪ್ರಭುಗೆ ಪುಷ್ಪನಮನ

ಬೆಂಗಳೂರು: ನಾಡಪ್ರಭು ಕೆಂಪೇಗೌಡರ ಆಚಾರ- ವಿಚಾರಗಳ ಪ್ರಚಾರಕ್ಕೆ ಶಾಲೆ- ಕಾಲೇಜುಗಳಲ್ಲಿ ಅಧ್ಯಯನ, ವಿಚಾರ ಸಂಕಿರಣ ಹಾಗೂ ಚರ್ಚಾ ಸ್ಪರ್ಧೆ ನಡೆಸಲು 1 ಲಕ್ಷ ರೂ. ಬಿಡುಗಡೆ ಮಾಡಲಾಗುವುದು ಎಂದು ಡಿಸಿಎಂ ಡಿ.ಕೆ. ಶಿವಕುಮಾರ್ ತಿಳಿಸಿದ್ದಾರೆ.

ಕೆಂಪೇಗೌಡರ ಜಯಂತಿ ಅಂಗವಾಗಿ ವಿಧಾನಸೌಧ ಮುಂಭಾಗದ ಪ್ರತಿಮೆಗೆ ಪುಷ್ಪನಮನ ಸಲ್ಲಿಸಿದ ಬಳಿಕ ಸುದ್ದಿಗಾರರೊಂದಿಗೆ ಮಾತನಾಡಿದರು.

ನಾಡಪ್ರಭು ಜಯಂತಿ ಆಚರಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯಿಂದ 25 ಸಾವಿರ ರೂ., ಬಿಬಿಎಂಪಿಯಿಂದ ಹೆಚ್ಚುವರಿಯಾಗಿ 1 ಲಕ್ಷ ರೂ. ನೀಡಲಾಗುತ್ತಿದೆ. ಕೆಂಪೇಗೌಡರು ಒಂದು ಜಾತಿಗೆ ಸೀಮಿತವಾದವರಲ್ಲ. ಅವರು ನಿರ್ಮಿಸಿದ ಬೆಂಗಳೂರಿನಲ್ಲಿ ಇಂದು ಎಲ್ಲ ಜಾತಿಯವರೂ ಇದ್ದಾರೆ ಎಂದರು. ದೇವನಹಳ್ಳಿಯಲ್ಲಿ 10 ಎಕರೆ, ಮಾಗಡಿ ರಸ್ತೆಯಲ್ಲಿ 5 ಎಕರೆ ಸ್ಥಳ ನಿಗದಿ ಮಾಡಲಾಗಿದ್ದು, ಬೆಂಗಳೂರು ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದಿಂದ ಭವ್ಯ ಕಟ್ಟಡಗಳನ್ನು ನಿರ್ಮಿಸಲಾಗುವುದು ಎಂದರು.

ಕೆಂಪೇಗೌಡರ ಜಯಂತಿಗೆ ಬೇರೆ ಸಮುದಾಯದ ಸ್ವಾಮೀಜಿಗಳನ್ನು ಕರೆಯಲು ಸೂಚನೆ ನೀಡಿದ್ದೇವೆ.

### ತಪ್ಪು ಸರಿಪಡಿಸುತ್ತೇವೆ...

ಕೆಂಪೇಗೌಡರ ಜಯಂತಿ ಕಾರ್ಯಕ್ರಮಕ್ಕೆ ಆಹ್ವಾನಿಸದೆ ಮಾಜಿ ಪ್ರಧಾನಿ ಎಚ್.ಡಿ. ದೇವೇಗೌಡರು ಹಾಗೂ ಕೇಂದ್ರ ಸಚಿವ ಎಚ್.ಡಿ. ಕುಮಾರಸ್ವಾಮಿ ಅವರಿಗೆ ಅಪಮಾನ ಮಾಡಲಾಗಿದೆ ಎಂಬ ಟೀಕೆಗೆ ಪ್ರತಿಕ್ರಿಯಿಸಿದ ಡಿ.ಕೆ. ಶಿವಕುಮಾರ್, ರಾಜಕಾರಣ ಮಾಡುವವರು ಮಾಡಲಿ. ನಾವು ಯಾರನ್ನೂ ಅಗೌರವಿಸುವುದಿಲ್ಲ ಎಂದು ಸ್ಪಷ್ಟಪಡಿಸಿದರು. ಮಾಜಿ ಮುಖ್ಯಮಂತ್ರಿಗಳ ಪೈಕಿ ಎಸ್.ಎಂ. ಕೃಷ್ಣ, ಸದಾನಂದಗೌಡ, ದೇವೇಗೌಡ, ಕುಮಾರಸ್ವಾಮಿ ಇದ್ದಾರೆ. ಆ ಸಮಾಜದವರನ್ನು ಕಾರ್ಯಕ್ರಮಕ್ಕೆ ಆಹ್ವಾನಿಸುವುದು ಶಿಷ್ಟಾಚಾರ. ನಾನು ಸ್ವಲ್ಪ ಕಾರ್ಯಒತ್ತಡದಲ್ಲಿದ್ದೆ. ಅಧಿಕಾರಿಗಳು ಶಿಷ್ಟಾಚಾರವನ್ನು ಪಾಲಿಸಿಲ್ಲ. ಮುಂದಿನ ಬಾರಿ ತಪ್ಪನ್ನು ಸರಿಪಡಿಸಲಾಗುವುದು ಎಂದು ಹೇಳಿದರು.

ಕೆಂಪೇಗೌಡರು ಒಕ್ಕಲಿಗರಿಗೆ ಮಾತ್ರ ಆಸ್ತಿಯಲ್ಲ. ಅವರು ನಿರ್ಮಿಸಿದ ಬೆಂಗಳೂರು ಎಲ್ಲರಿಗೂ ಸೇರಿದೆ ಎಂದು ಡಿ.ಕೆ. ಶಿವಕುಮಾರ್ ಹೇಳಿದರು.

ವಿಧಾನಸೌಧ ಮುಂಭಾಗ ಗುರುವಾರ ಆಯೋಜಿಸಿದ್ದ ಕೆಂಪೇಗೌಡ ಜಯಂತ್ಯುತ್ಸವ ಕಾರ್ಯಕ್ರಮದಲ್ಲಿ ನಾಡಪ್ರಭು ಪ್ರತಿಮೆಗೆ ಡಿಸಿಎಂ ಡಿ.ಕೆ. ಶಿವಕುಮಾರ್ ಪುಷ್ಪ ನಮನ ಸಲ್ಲಿಸಿದರು.



# ಕೆಂಪೇಗೌಡರ ದೂರದೃಷ್ಟಿ ಮಾದರಿ

ಬೆಂಗಳೂರು: ಬೆಂಗಳೂರು ನಗರ ನಿರ್ಮಿಸಿದ ನಾಡಪ್ರಭು ಕೆಂಪೇಗೌಡರು ಕೆರೆಗಳು ಮತ್ತು ಸಾಲುಮರಗಳಿಂದ ತಂಪಾದ ಹವೆ ಉಂಟಾಗುವಂತೆ ಮಾದರಿಯಾಗಿ ನಗರವನ್ನು ನಿರ್ಮಿಸಿದ್ದಾರೆ ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ನಾಡೋಜ ಡಾ. ಮಹೇಶ ಜೋಶಿ ಅಭಿಪ್ರಾಯಪಟ್ಟಿದ್ದಾರೆ.

ಕಸಾಪ ಕಚೇರಿಯಲ್ಲಿ ಗುರುವಾರ ಆಯೋಜಿಸಿದ್ದ ಕೆಂಪೇಗೌಡ ಜಯಂತಿ ವೇಳೆ ನಾಡಪ್ರಭುಗಳ ಭಾವಚಿತ್ರಕ್ಕೆ ಪುಷ್ಪನಮನ ಸಲ್ಲಿಸಿ ಮಾತನಾಡಿದರು. ಸಾಮಂತ ದೊರೆಗಳಾಗಿದ್ದರೂ ವಿಜಯನಗರದ ರಾಜಧಾನಿ ಹಂಪಿ ಮಾದರಿಯನ್ನಾಧರಿಸಿ 1537ರಲ್ಲಿ ಬೆಂಗಳೂರು ನಗರವನ್ನು ಕೆಂಪೇಗೌಡರು ನಿರ್ಮಿಸಿದರು. ಅವರು ರೂಪಿಸಿದ ಕಾವಲು ಗೋಪುರಗಳು ನಗರಕ್ಕೆ ಇರಬೇಕಾದ ಮಿತಿಯನ್ನು ಸೂಚಿಸುತ್ತಿದ್ದವು. ಈ ಮಿತಿಯೊಳಗಿದ್ದರೆ ನಗರಕ್ಕೆ ಬೇಕಾದ ನೀರು, ಆಹಾರದ ವ್ಯವಸ್ಥೆ ಒದಗಿಸಲು ಸಾಧ್ಯವೆಂದು ಅರಿತಿದ್ದರು. ಈ ಮಿತಿಯನ್ನು ಮೀರಿದ ಪರಿಣಾಮವನ್ನು ನಾವಿಂದು ಸಮಸ್ಯೆಯನ್ನು ಎದುರಿಸುತ್ತಿದ್ದೇವೆ ಎಂದರು.

ಕೆಂಪೇಗೌಡರು ಕಲೆ, ಸಾಹಿತ್ಯದ ಪೋಷಕರಾಗಿದ್ದರು. ಮುಖ್ಯವಾಗಿ ಕನ್ನಡ ಭಾಷೆಯ ಪ್ರೇಮಿಗಳಾಗಿದ್ದರು. ಈ ಕಾರಣದಿಂದಲೇ ಮುಂದೆ ಬೆಂಗಳೂರಿನಲ್ಲಿ ಕಲೆ, ಸಂಸ್ಕೃತಿ, ಶಿಕ್ಷಣ ಸಂಸ್ಥೆಗಳು ಬೆಳೆಯಲು ಸಾಧ್ಯವಾಯಿತು. ಇಂದಿಗೂ ಹೊಸ ನಗರವನ್ನು ನಿರ್ಮಿಸುವಾಗ ಬೆಂಗಳೂರನ್ನು ಮಾದರಿಯಾಗಿ ನೋಡುತ್ತಾರೆ ಎನ್ನುವುದು ನಮಗೆಲ್ಲರಿಗೂ ಹೆಮ್ಮೆಯ ವಿಷಯ ಎಂದು ಡಾ. ಮಹೇಶ ಜೋಶಿ ತಿಳಿಸಿದರು.

ಕಾರ್ಯಕ್ರಮದಲ್ಲಿ ಕಸಾಪ ಪದಾಧಿಕಾರಿಗಳು ಹಾಜರಿದ್ದರು.



ನಾಡಪ್ರಭು ಕೆಂಪೇಗೌಡರ ಭಾವಚಿತ್ರಕ್ಕೆ ಕಸಾಪ ಅಧ್ಯಕ್ಷ ಡಾ. ಮಹೇಶ ಜೋಶಿ ಪುಷ್ಪನಮನ ಸಲ್ಲಿಸಿದರು.



ನಗರದ ಗಾಂಧಿ ಭವನದಲ್ಲಿ ಗುರುವಾರ ನಡೆದ ಬಿ.ಆರ್. ಮಮತಾ–60' ಅಭಿನಂದನಾ ಕಾರ್ಯಕ್ರಮದಲ್ಲಿ ಐಎಎಸ್ ಅಧಿಕಾರಿ ಬಿ.ಆರ್. ಮಮತಾ ಅವರನ್ನು ಅಭಿನಂದಿಸಲಾಯಿತು. ಕರ್ನಾಟಕ ಸರ್ಕಾರದ ನಿವೃತ್ತ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಎಂ.ಆರ್. ಶ್ರೀನಿವಾಸಮೂರ್ತಿ, ವಾರ್ತಾ ಇಲಾಖೆಯ ನಿವೃತ್ತ ಜಂಟಿ ನಿರ್ದೇಶಕ ಎಚ್.ಬಿ.ದಿನೇಶ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ, ನಿವೃತ್ತ ಪ್ರಧಾನ ಕಾರ್ಯದರ್ಶಿ ಎಂ.ಕೆ. ಶಂಕರಲಿಂಗೇಗೌಡ ಭಾಗವಹಿಸಿದ್ದರು

–ಪ್ರಜಾವಾಣಿ ಚಿತ್ರ

ಸಂಯುಕ್ತ ಕರ್ನಾಟಕ
ಶುಕ್ರವಾರ 28 ಜೂನ್ 2024
ಬೆಂಗಳೂರು । BENGALURU

# ಪ್ರಾಮಾಣಿಕ ಸೇವೆಗೆ ಶ್ಲಾಘನೆ

ಬೆಂಗಳೂರು: ಸರ್ಕಾರಿ ಸೇವೆಯಲ್ಲಿ ಸೇರಿ ಪ್ರಾಮಾಣಿಕವಾಗಿ ಕೆಲಸ ಮಾಡುವ ಅಧಿಕಾರಿಗೆ ಎಲ್ಲ ಕಡೆಯೂ ಮನ್ನಣೆ ಸಿಗುತ್ತದೆ. ಅಂತಹ ಕೆಲಸವನ್ನು ನೋಂದಣಿ ಮತ್ತು ಮುದ್ರಾಂಕ ಇಲಾಖೆ ಮಹಾ ನಿರೀಕ್ಷಕರಾದ ಡಾ.ಬಿ.ಆರ್.ಮಮತಾ ಮಾಡಿದ್ದಾರೆಂದು ನಿವೃತ್ತ ಐಎಎಸ್ ಅಧಿಕಾರಿಗಳು ಬಣ್ಣಿಸಿದರು.

ಜೂ.30ರಂದು ನಿವೃತ್ತರಾಗುತ್ತಿರುವ ಮಮತಾ ಅವರಿಗೆ ಗಾಂಧಿಭವನದಲ್ಲಿ ಆಯೋಜಿಸಿದ್ದ ಅಭಿನಂದನಾ ಸಮಾರಂಭದಲ್ಲಿ ನಿವೃತ್ತ ಅಧಿಕಾರಿಗಳು, ಗಣ್ಯರಾದ ಎಂ.ಆರ್. ಶ್ರೀನಿವಾಸಮೂರ್ತಿ, ಎಂ.ಕೆ. ಶಂಕರಲಿಂಗೇಗೌಡ, ಎಸ್. ಆರ್. ವಿಶುಕುಮಾರ್, ಪತ್ರಕರ್ತೆ ನಾಹೀದ್ ಅತಾವುಲ್ಲಾ, ಗಾಂಧಿಭವನದ ಅಧ್ಯಕ್ಷ ವೂಡೆ ಪಿ. ಕೃಷ್ಣ ಮತ್ತಿತರರು ಮಮತಾ ಅವರು ಸರ್ಕಾರಿ ಅಧಿಕಾರಿಯಾಗಿ ಸದಾ ಕ್ರಿಯಾಶೀಲತೆಯಿಂದ ಜನರ ಕೆಲಸಗಳನ್ನು ಮಾಡಿಕೊಡುತ್ತಿದ್ದ ಪರಿಯನ್ನು ವಿವರಿಸಿ ಮೆಚ್ಚುಗೆ ವ್ಯಕ್ತಪಡಿಸಿದರು.

ಅಭಿನಂದನೆ ಸ್ವೀಕರಿಸಿದ ಡಾ. ಬಿ.ಆರ್. ಮಮತಾ ಮಾತನಾಡಿ, ತಾವು ಸೇವೆ ಸಲ್ಲಿಸಿರುವ ಸ್ಥಳಗಳಲ್ಲಿ ಜನರ ಸ್ನೇಹ ದೊಡ್ಡದು. ಇದರಿಂದ ನನಗೆ ಧನ್ಯತಾ ಭಾವ ಮೂಡಿದೆ. ನಾನು ಹೆಜ್ಜೆ ಇಟ್ಟಲ್ಲೆಲ್ಲಾ ಜನರು ಅಭಿಮಾನ ತೋರಿಸಿದ್ದಾರೆಂದು ತಾವು ನಡೆದು ಬಂದ ದಾರಿಯನ್ನು ವಿವರಿಸಿದರು. ವಾರ್ತಾ ಇಲಾಖೆ ನಿವೃತ್ತ ಜಂಟಿ ನಿರ್ದೇಶಕ ಎಚ್. ಬಿ.ದಿನೇಶ್ ಮತ್ತಿತರರಿದ್ದರು.

ಸರ್ಕಾರದ ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ ಎಂ.ಆರ್.ಶ್ರೀನಿವಾಸಮೂರ್ತಿ ಮಾತನಾಡಿ, ದೇಶ ವಿದೇಶಗಳನ್ನು ಸುತ್ತಿ ತಮ್ಮ ಜ್ಞಾನವನ್ನು ಬೆಳೆಸಿಕೊಂಡರು. ಕಾನೂನು ಮೀರಿ ಅದರ ಅಂತರ್ಯ ಅರ್ಥಮಾಡಿಕೊಂಡು ಜನರಿಗೆ ಉಪಯೋಗವಾಗುವಂತೆ ನಡೆದುಕೊಂಡವರು ಮಮತಾ ಎಂದು ಮೆಚ್ಚುಗೆ ವ್ಯಕ್ತಪಡಿಸಿದರು.

ಸರ್ಕಾರದ ನಿವೃತ್ತ ಪ್ರಧಾನ ಕಾರ್ಯದರ್ಶಿ ಎಂ.ಕೆ. ಶಂಕರಲಿಂಗೇಗೌಡರು ಮಾತನಾಡಿ, ವಾರ್ತಾಧಿಕಾರಿ ಮಮತಾ ಅವರು ಗುರಿಯನ್ನು ಸಾಧಿಸುವ ಛಾತಿವುಳ್ಳವರಾಗಿದ್ದರು. ಕಳಂಕರಹಿತರಾಗಿ, ಪ್ರಾಮಾಣಿಕತೆ, ಸರಳತೆಯಿಂದ ಕೆಲಸ ನಿರ್ವಹಿಸಿದವರು ಎಂದರು. ಎಸ್.ಆರ್. ವಿಶುಕುಮಾರ್, ಹಿರಿಯ ಪತ್ರಕರ್ತೆ ನಾಹೀದ್ ಅತಾವುಲ್ಲಾ, ಗಾಂಧಿಭವನದ ಅಧ್ಯಕ್ಷ ವೂಡೆ.ಪಿ.ಕೃಷ್ಣ ಮತ್ತಿತರರಿದ್ದರು.



ಐಎಎಸ್ ಅಧಿಕಾರಿ ಡಾ. ಬಿ.ಆರ್.ಮಮತಾ ಅವರಿಗೆ ಏರ್ಪಡಿಸಿದ್ದ ಅಭಿನಂದನಾ ಸಮಾರಂಭದಲ್ಲಿ ನಿವೃತ್ತ ಐಎಎಸ್ ಅಧಿಕಾರಿಗಳಾದ ಎಂ.ಆರ್. ಶ್ರೀನಿವಾಸಮೂರ್ತಿ, ಎಂ.ಕೆ.ಶಂಕರಲಿಂಗೇಗೌಡ, ಎಸ್.ಆರ್. ವಿಶುಕುಮಾರ್, ಗಾಂಧಿಭವನದ ವೂಡೆ ಪಿ. ಕೃಷ್ಣ, ಪತ್ರಕರ್ತೆ ನಾಹೀದ್ ಅತಾವುಲ್ಲಾ, ವಾರ್ತಾ ಇಲಾಖೆ ನಿವೃತ್ತ ಅಧಿಕಾರಿ ಎಚ್.ಬಿ. ದಿನೇಶ್ ಮತ್ತಿತರರಿದ್ದರು.

ವಿಜಯ ಕರ್ನಾಟಕ | ಶುಕ್ರವಾರ, 28 ಜೂನ್ 2024, ಬೆಂಗಳೂರು

# ಡಾ.ಬಿ.ಆರ್. ಮಮತಾಗೆ ಆತ್ಮೀಯ ಅಭಿನಂದನೆ



ಡಾ.ಮಮತಾ ಅವರನ್ನು ಸನ್ಮಾನಿಸಿ, ಗೌರವಿಸಲಾಯಿತು.

**■ ವಿಕ ಸುದ್ದಿಲೋಕ** ಬೆಂಗಳೂರು

ಹಲವು ಐಎಎಸ್, ಕೆಎಎಸ್ ಅಧಿಕಾರಿಗಳು ಇಲಾಖೆ ಸೇರಿ ಕೆಲಸ ಆರಂಭಿಸುತ್ತಿದ್ದಂತೆ ನಾವು ಕಲಿಯುವುದೇನಿಲ್ಲ, ನಮಗೆ ಎಲ್ಲವೂ ಗೊತ್ತಿದೆ ಎಂಬ ಭ್ರಮೆಯಲ್ಲಿ ಇರುತ್ತಾರೆ. ಈ ಭ್ರಮೆಯನ್ನು ತೊರೆದು ನಿರಂತರ ಕಲಿಕೆಯ ಮನೋಭಾವವನ್ನು ಬೆಳೆಸಿಕೊಳ್ಳಬೇಕು ಎಂದು ರಾಜ್ಯ ಸರಕಾರದ ನಿವೃತ್ತ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಎಂ.ಆರ್. ಶ್ರೀನಿವಾಸಮೂರ್ತಿ ಹೇಳಿದರು.

ಡಾ.ಮಮತಾ ಸ್ನೇಹ ಬಳಗದ ವತಿಯಿಂದ ಇದೇ ತಿಂಗಳ ಅಂತ್ಯಕ್ಕೆ ನಿವೃತ್ತರಾಗುವ ಐಎಎಸ್ ಅಧಿಕಾರಿ ಡಾ.ಬಿ. ಆರ್. ಮಮತಾ ಅವರನ್ನು ಅಭಿನಂದಿಸಲು ಗಾಂಧಿ ಭವನದಲ್ಲಿ ಆಯೋಜಿಸಿದ್ದ ಅಭಿನಂದನಾ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಅವರು ಮಾತನಾಡಿದರು.

''ಕೆಎಎಸ್ ಮಾಡಿ ಬರುವವರು ಯಾರೂ ಕೂಡ ವಾರ್ತಾ ಮತ್ತು ಸಂಪರ್ಕ ಇಲಾಖೆಗೆ ಬರುತ್ತಿರಲಿಲ್ಲ. ಒಬ್ಬರು, ಇಬ್ಬರು ಬಂದರೂ ಅವರಿಗೆ ಪತ್ರಿಕೋದ್ಯಮದ ಅನುಭವ ಇರುತ್ತಿರಲಿಲ್ಲ. ಅವರನ್ನು ತರಬೇತುಗೊಳಿಸುವುದು ಕಷ್ಟವಾಗುತ್ತಿತ್ತು. ಹೀಗಾಗಿ, ಸುಧಾರಣೆ ತಂದು ಪತ್ರಿಕೋದ್ಯಮದ ಹಿನ್ನೆಲೆ ಇರುವವರೇ ಇಲಾಖೆಯಲ್ಲಿ ಕೆಲಸ ಪಡೆಯುವಂತೆ ಸುಧಾರಣೆ ತರಲಾಯಿತು,'' ಎಂದರು.

ರಾಜ್ಯ ಸರಕಾರದ ನಿವೃತ್ತ ಪ್ರಧಾನ ಕಾರ್ಯದರ್ಶಿ ಎಂ.ಕೆ.ಶಂಕರಲಿಂಗೇಗೌಡ ಮಾತನಾಡಿ, ''ಇಲಾಖೆಯ ಹಿಂದಿನ ಅಧಿಕಾರಿಗಳು ಕಣ್ಣು, ಕಿವಿಯಾಗಿ ವರ್ತಿಸುತ್ತಿದ್ದರು. ರಾಜಕಾರಣಿಗಳಿಗೆ ಗೈಡ್ ಮಾಡುತ್ತಿದ್ದರು. ಅವರೂ ಅಧಿಕಾರಿಗಳ ಸಲಹೆ ಕೇಳುತ್ತಿದ್ದರು. ಆದರೆ, ಈಗಿನ ಅಧಿಕಾರಿಗಳ ಮಾತನ್ನು, ಸಲಹೆಯನ್ನು ಯಾರು ಪಡೆಯುತ್ತಾರೋ ಗೊತ್ತಿಲ್ಲ,'' ಎಂದರು.

ವಾರ್ತಾ ಇಲಾಖೆಯ ನಿವೃತ್ತ ನಿರ್ದೇಶಕ ವಿಶುಕುಮಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ.ಕೃಷ್ಣ, ಹಿರಿಯ ಪತ್ರಕರ್ತ ನಯೀದ್ ಅತಾವುಲ್ಲಾ ಇದ್ದರು.

ವಿಶ್ವವಾಣಿ

28.06.2024 ಶುಕ್ರವಾರ
vishwavani.news

# ಜನೋಪಕಾರಿಯಾಗಿ ಸೇವೆ ಸಲ್ಲಿಸಿದ ಮಮತಾ

## ನಿವೃತ್ತ ಅಪರ ಮುಖ್ಯಕಾರ್ಯದರ್ಶಿ ಎಂ.ಆರ್. ಶ್ರೀನಿವಾಸ್‌ಮೂರ್ತಿ ಅಭಿಮತ

ವಿಶ್ವವಾಣಿ ಸುದ್ದಿಮನೆ ಬೆಂಗಳೂರು

ಸರಕಾರಿ ಕೆಲಸದ ಮೂಲಕ ಜನರಿಗೆ ಯಾವ ರೀತಿಯಲ್ಲಿ ಸಹಾಯ ಮಾಡಬಹುದು ಎನ್ನುವುದನ್ನು ಮಮತಾ ಅವರು ತೋರಿಸಿದ್ದಾರೆ. ತಮ್ಮ ಇಡೀ ಸೇವೆಯನ್ನು ಜನೋಪಕಾರಿಗೆ ಮೀಸಲಿಟ್ಟವರು ಮಮತಾ ಎಂದು ನಿವೃತ್ತ ಅಪರ ಮುಖ್ಯಕಾರ್ಯದರ್ಶಿ ಎಂ.ಆರ್. ಶ್ರೀನಿವಾಸ್ ಮೂರ್ತಿ ಹೇಳಿದರು.

ತಿಂಗಳಾತ್ಯಕ್ಕೆ ನಿವೃತ್ತರಾಗಲಿರುವ ಡಾ. ಬಿ.ಆರ್ ಮಮತಾರಿಗೆ ಗಾಂಧಿಭವನದಲ್ಲಿ ಆಯೋಜಿಸಲಾದ ಅಭಿನಂದನಾ ಸಮಾರಂಭದಲ್ಲಿ ಮಾತನಾಡಿದ ಅವರು, ದೇಶ ವಿದೇಶಗಳನ್ನು ಸುತ್ತಿ ಮಮತಾ ಅವರು ತಮ್ಮ ಜ್ಞಾನವನ್ನು ಬೆಳೆಸಿಕೊಂಡರು. ಇದು ಎಲ್ಲರೂ ಕಲಿಯಬೇಕಾದ ಪಾಠ. ಕಾನೂನು ಮೀರಿ ಅದರ ಅಂತರ್ಯವನ್ನು ಅರ್ಥಮಾಡಿಕೊಂಡು ಜನರಿಗೆ ಉಪಯೋಗವಾಗುವಂತೆ ನಡೆದುಕೊಳ್ಳುವ ಮೂಲಕ ಸರಕಾರಿ ವ್ಯವಸ್ಥೆಯ ಕೊರತೆಗಳ ನಡುವೆಯೂ ಅತ್ಯುತ್ತಮವಾಗಿ ಕಾರ್ಯವನ್ನು ನಿರ್ವಹಿಸಬಹುದು ಎಂದು ತೋರಿಸಿದ್ದಾರೆ. ಸರಕಾರಿ ಸೇವೆಯಲ್ಲಿ ಸಾರ್ಥಕವಾದ ಸೇವೆ ಸಲ್ಲಿಸಿದ್ದಾರೆ ಎಂದರು. ನಿವೃತ್ತರಾಗಲಿರುವ ನೋಂದಣಿ ಮತ್ತು ಮುದ್ರಾಂಕ ಇಲಾಖೆ ಮಹಾ ನಿರೀಕ್ಷಕಿ ಡಾ.ಬಿ.ಆರ್.ಮಮತಾ ಮಾತನಾಡಿ, ನಾನು ಹೆಜ್ಜೆಯಿಟ್ಟಿರುವಲ್ಲೆಲ್ಲಾ ಜನ ನೀಡಿರುವ ಸ್ನೇಹ ದೊಡ್ಡದು. ಅದು ನನ್ನಲ್ಲಿ ಧನ್ಯತಾ ಭಾವ ತುಂಬಿದೆ. ಏ ಆರ್ ವಾಟ್ ದ ಸೊಸೈಟಿ ಮೇಕ್ ಅಸ್ ಎಂಬ ಮಾತಿನಂತೆ ನನ್ನ ಸ್ನೇಹಿತರು, ಹಿರಿಯರು, ಮಾರ್ಗದರ್ಶಕರು ಅಧಿಕಾರಿಗಳು ನನ್ನನ್ನು ರೂಪಿಸಿದ್ದಾರೆ. ಚಿತ್ರದುರ್ಗದ ಕುಗ್ರಾಮ ಹಿಟ್ಟಾಳಿಯ ನಂಟು ಸದಾ ಉಳಿಸಿಕೊಂಡು ಬೆಳೆದುಬಂದ ಬಗೆಯನ್ನು ವಿವರಿಸಿದರು. ಮಮತಾ ಅವರು ಮೊದಲು ಆಸೆಪಟ್ಟಂತೆ ವೈದ್ಯರಾಗದೇ ಪತ್ರಕರ್ತೆಯಾಗಿದ್ದು, ವಿಪ್ರೋ ಸಂಸ್ಥೆಯಲ್ಲಿ ಕೆಲಸ ಮಾಡಿದ್ದನ್ನು ಸ್ಮರಿಸಿದರು. ನಂತರ ವಾರ್ತಾ ಇಲಾಖೆಗೆ ಅನಿರೀಕ್ಷಿತವಾಗಿ ಸೇರಿ ಐಎಎಸ್‌ವರೆಗಿನ ತಮ್ಮ ವೃತ್ತಿ ಜೀವನದ ಪಯಣವನ್ನು ವಿವರಿಸಿದರು.



ಮಾಸಾಂತ್ಯಕ್ಕೆ ನಿವೃತ್ತರಾಗಲಿರುವ ಡಾ. ಬಿ.ಆರ್ ಮಮತಾರಿಗೆ ಗಾಂಧಿಭವನದಲ್ಲಿ ಅಭಿನಂದನಾ ಕಾರ್ಯಕ್ರಮ ಹಮ್ಮಿಕೊಳ್ಳಲಾಗಿತ್ತು. ಈ ವೇಳೆ ಗಾಂಧಿ ಭವನದ ಅಧ್ಯಕ್ಷ ವೂಡೆ ಪಿ. ಕೃಷ್ಣ, ಸರಕಾರದ ನಿವೃತ್ತ ಪ್ರಧಾನ ಕಾರ್ಯದರ್ಶಿ ಎಂ.ಕೆ.ಶಂಕರಲಿಂಗೇ ಗೌಡ, ನಿವೃತ್ತ ಅಪರ ಮುಖ್ಯಕಾರ್ಯದರ್ಶಿ ಎಂ.ಆರ್. ಶ್ರೀನಿವಾಸ್‌ಮೂರ್ತಿ ಇದ್ದರು.

### ಕ್ರಿಯಾಶೀಲ ಅಧಿಕಾರಿ

ಸರಕಾರದ ನಿವೃತ್ತ ಪ್ರಧಾನ ಕಾರ್ಯದರ್ಶಿ ಎಂ.ಕೆ.ಶಂಕರಲಿಂಗೇಗೌಡರು ಮಾತನಾಡಿ, ಅಭಿಪ್ರಾಯ ರೂಪಿಸುವಲ್ಲಿ ವಾರ್ತಾ ಇಲಾಖೆ ಅತ್ಯಂತ ಮಹತ್ವದ ಪಾತ್ರ ವಹಿಸುತ್ತದೆ. ವಾರ್ತಾಧಿಕಾರಿ ಮಮತಾ ಅವರು ತಂತ್ರಜ್ಞಾನದ ಬಗ್ಗೆ ಹೆಚ್ಚಿನ ಜ್ಞಾನ ಹೊಂದಿದ್ದರು. ಮುಖ್ಯಮಂತ್ರಿಗಳ ಕಚೇರಿಯಲ್ಲಿ ಐಟಿ ವಿಭಾಗದಲ್ಲಿ ಪ್ರಮುಖ ಪಾತ್ರ ವಹಿಸಿದ್ದರು. ತಂತ್ರಜ್ಞಾನ ಆಗಷ್ಟೇ ಬೆಳೆಯುತ್ತಿದ್ದ ಸಂದರ್ಭದಲ್ಲಿ ಸರಕಾರದ ಕಣ್ಣು ಮತ್ತು ಕಿವಿಗಳಾಗಿ ಸಾರ್ವಜನಿಕರೊಂದಿಗೆ ಸಂಪರ್ಕ ಸಾಧಿಸಿದ್ದರು. ನಿವೃತ್ತಿಯ ನಂತರವೂ ಕ್ರಿಯಾಶೀಲರಾಗಿರುವಂತೆ ಸಲಹೆ ನೀಡಿದರು.



ವಾರ್ತಾ ಇಲಾಖೆಯಿಂದ ಐಎಎಸ್ ಗೆ ಬಡ್ತಿ ಪಡೆದ ಮೊದಲ ಅಧಿಕಾರಿಯಾದ ಮಮತಾ ಅವರ ಸಂವಹನ ಕೌಶಲ್ಯ ಅತ್ಯುತ್ತಮ. ಸರಳತೆ ಹಾಗೂ ದಕ್ಷತೆ ಅವರ ವಿಶೇಷ ಗುಣಗಳು ಎಂದರು. ಮುದ್ರಾಂಕ ಇಲಾಖೆಯಲ್ಲಿ ತಂತ್ರಜ್ಞಾನ ಅಭಿವೃದ್ಧಿಗೆ ಕಾರಣೀಭೂತರು.

-ವೂಡೆ.ಪಿ.ಕೃಷ್ಣ, ಗಾಂಧಿ ಭವನದ ಅಧ್ಯಕ್ಷ

ಕನ್ನಡಪ್ರಭ ಶುಕ್ರವಾರ 28.06.2024

# ಐಎಎಸ್ ಡಾ। ಮಮತಾಗೆ ಅಭಿನಂದನೆ

## ಸರ್ಕಾರದ ಕಣ್ಣು, ಕಿವಿಯಾಗಿದ್ದ ಅಧಿಕಾರಿ: ಶಂಕರಲಿಂಗೇಗೌಡ ಶ್ಲಾಘನೆ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಹಿರಿಯ ಐಎಎಸ್ ಅಧಿಕಾರಿ ಡಾ। ಬಿ.ಆರ್.ಮಮತಾ ಅವರು ತಂತ್ರಜ್ಞಾನ ಬೆಳವಣಿಗೆ ಹೊಂದುತ್ತಿದ್ದ ಕಾಲದಲ್ಲಿ ಅದರ ಬಗ್ಗೆ ಹೆಚ್ಚಿನ ಜ್ಞಾನವನ್ನು ಹೊಂದಿ ಸರ್ಕಾರದ ಕಣ್ಣು ಮತ್ತು ಕಿವಿಗಳಾಗಿ ಕೆಲಸ ಮಾಡಿದ್ದರು ಎಂದು ಸರ್ಕಾರದ ನಿವೃತ್ತ ಪ್ರಧಾನ ಕಾರ್ಯದರ್ಶಿ ಎಂ.ಕೆ.ಶಂಕರಲಿಂಗೇಗೌಡ ಅಭಿಪ್ರಾಯಪಟ್ಟರು.

ಜೂ.30ರಂದು ನಿವೃತ್ತರಾಗುತ್ತಿರುವ ನೋಂದಣಿ ಮತ್ತು ಮುದ್ರಾಂಕ ಇಲಾಖೆ ಮಹಾ ನಿರೀಕ್ಷಕರಾದ ಐಎಎಸ್ ಅಧಿಕಾರಿ ಮಮತಾ ಅವರ ಅಭಿನಂದನಾ ಕಾರ್ಯಕ್ರಮದಲ್ಲಿ ಪಾಲ್ಗೊಂಡು ಮಾತನಾಡಿದರು.

ಸರ್ಕಾರದ ಬಗ್ಗೆ ಉತ್ತಮ ಅಭಿಪ್ರಾಯ ರೂಪಿಸುವಲ್ಲಿ ವಾರ್ತಾ ಇಲಾಖೆಯ ಪಾತ್ರ ಮಹತ್ವದ್ದಾಗಿರುತ್ತದೆ. ವಾರ್ತಾಧಿಕಾರಿಯಾಗಿದ್ದ ಮಮತಾ ಅವರು ತಂತ್ರಜ್ಞಾನದ ಮೂಲಕ ವಾರ್ತಾ ಇಲಾಖೆಯ ಕಾರ್ಯನಿರ್ವಹಣೆಯ ಸ್ವರೂಪ ಬದಲಿಸಿದರು. ಅಲ್ಲದೆ, ತಂತ್ರಜ್ಞಾನ ಬೆಳೆಯುತ್ತಿದ್ದ ಸಂದರ್ಭದಲ್ಲಿ ಸರ್ಕಾರದ ಕಣ್ಣು ಮತ್ತು ಕಿವಿಗಳಾಗಿ ಕೆಲಸ ಮಾಡಿದ್ದರು. ಮಮತಾ ಅವರು ನಿವೃತ್ತರಾದ ನಂತರವೂ ಕ್ರಿಯಾಶೀಲರಾಗಿರಬೇಕು ಎಂದರು.

ಡಾ। ಬಿ.ಆರ್. ಮಮತಾ ಅವರು ಮಾತನಾಡಿ, ನಾನು ಕೆಲಸ ಮಾಡಿದಲ್ಲೆಲ್ಲ ಸಹೋದ್ಯೋಗಿಗಳು, ಸಾರ್ವಜನಿಕರು ದೊಡ್ಡ ಮಟ್ಟದ ನೆರವು ನೀಡಿದ್ದಾರೆ.



ನಿವೃತ್ತರಾಗುತ್ತಿರುವ ಐಎಎಸ್ ಅಧಿಕಾರಿ ಮಮತಾ ಅವರನ್ನು ಗಣ್ಯರು ಅಭಿನಂದಿಸಿದರು.

ನನ್ನ ಸ್ನೇಹಿತರು, ಹಿರಿಯರು, ಮಾರ್ಗದರ್ಶಕರು, ಅಧಿಕಾರಿಗಳು ನನ್ನನ್ನು ದಕ್ಷ ಅಧಿಕಾರಿಯನ್ನಾಗಿ ರೂಪಿಸಿದ್ದಾರೆ. ವಾರ್ತಾ ಇಲಾಖೆಗೆ ಅನಿರೀಕ್ಷಿತವಾಗಿ ಸೇರಿದ್ದ ನಾನು ನಂತರ ಐಎಎಸ್ ಅಧಿಕಾರಿಯಾಗಿ ವೃತ್ತಿ ಪಯಣ ಮುಂದುವರಿಸಿದೆ. ನನಗೆ ನೀಡಿದ ಸಹಕಾರಕ್ಕೆ ಎಲ್ಲರಿಗೂ ಧನ್ಯವಾದಗಳು ಎಂದು ತಿಳಿಸಿದರು.

ನಿವೃತ್ತ ಅಪರ ಮುಖ್ಯ ಕಾರ್ಯದರ್ಶಿ ಎಂ.ಆರ್. ಶ್ರೀನಿವಾಸಮೂರ್ತಿ, ವಾರ್ತಾ ಇಲಾಖೆ ನಿವೃತ್ತ ಅಧಿಕಾರಿಗಳಾದ ಎನ್.ಆರ್.ವಿಶುಕುಮಾರ್, ಎಚ್.ಬಿ. ದಿನೇಶ್, ಹಿರಿಯ ಪತ್ರಕರ್ತೆ ನಾಹಿದ್ ಅತಾವುಲ್ಲಾ, ಗಾಂಧಿ ಭವನ ಅಧ್ಯಕ್ಷ ವೂಡೆ ಪಿ.ಕೃಷ್ಣ ಇದ್ದರು.

ಸಂಯುಕ್ತ ಕರ್ನಾಟಕ
27/06/2024

# ಗಾಂಧಿಭವನಕ್ಕೆ ನಾಡಪ್ರಭು ಕೆಂಪೇಗೌಡ ಪುರಸ್ಕಾರ

ಬೆಂಗಳೂರು: 2024ನೇ ಸಾಲಿನ ನಾಡಪ್ರಭು ಕೆಂಪೇಗೌಡ ಅಂತಾರಾಷ್ಟ್ರೀಯ ಪ್ರಶಸ್ತಿ ಬೆಂಗಳೂರಿನ ಗಾಂಧಿಭವನಕ್ಕೆ ಸಂದಿದೆ. ಕೆಂಪೇಗೌಡ ಅಭಿವೃದ್ಧಿ ಪ್ರಾಧಿಕಾರದಿಂದ ನೀಡುವ ಈ ಪ್ರಶಸ್ತಿ ಆಯ್ಕೆಗೆ ರಚಿಸಿದ್ದ ವಿವಿಧ ಕ್ಷೇತ್ರಗಳ ತಜ್ಞರನ್ನೊಳಗೊಂಡ ಆಯ್ಕೆ ಸಮಿತಿ ಬುಧವಾರ ಅಧಿಕೃತವಾಗಿ ಪ್ರಶಸ್ತಿ ಘೋಷಿಸಿದೆ.



ವರ್ಷಪೂರ್ತಿ ನಿರಂತರವಾಗಿ ಒಂದಿಲ್ಲೊಂದು ಸೇವಾಕಾರ್ಯಗಳಲ್ಲಿ ತೊಡಗಿಸಿಕೊಂಡಿರುವ ನಾಡೋಜ ವೂಡೆ ಪಿ ಕೃಷ್ಣ ಅವರ ಅಧ್ಯಕ್ಷತೆಯ ಗಾಂಧಿಭವನಕ್ಕೆ ಈ ಸಾಲಿನ ಪ್ರತಿಷ್ಠಿತ ನಾಡಪ್ರಭು ಕೆಂಪೇಗೌಡ ಸ್ಮಾರಕ ಅಂತಾರಾಷ್ಟ್ರೀಯ ಪ್ರಶಸ್ತಿ ಸಿಕ್ಕಿದೆ.

ಗುರುವಾರ(ಜೂ.27)ಬೆಂಗಳೂರಿನ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ನಡೆಯಲಿರುವ ನಾಡಪ್ರಭು ಕೆಂಪೇಗೌಡರ 515ನೇ ಜಯಂತಿ ಕಾರ್ಯಕ್ರಮದಲ್ಲಿ ಈ ಪ್ರಶಸ್ತಿಯನ್ನು ಪ್ರದಾನ ಮಾಡಲಾಗುತ್ತಿದೆ.

ವಿಜಯ ಕರ್ನಾಟಕ
ಗುರುವಾರ,27 ಜೂನ್ 2024,
ಬೆಂಗಳೂರು
09

# ಗಾಂಧಿ ಭವನಕ್ಕೆ ಕೆಂಪೇಗೌಡ ಪ್ರಶಸ್ತಿ

**ಬೆಂಗಳೂರು:** 2024ನೇ ಸಾಲಿನ ನಾಡಪ್ರಭು ಕೆಂಪೇಗೌಡ ಅಂತಾರಾಷ್ಟ್ರೀಯ ಪ್ರಶಸ್ತಿಗೆ ನಗರದ ಕುಮಾರಪಾರ್ಕ್ ರಸ್ತೆಯಲ್ಲಿರುವ 'ಗಾಂಧಿ ಭವನ'ವನ್ನು ಆಯ್ಕೆ ಮಾಡಲಾಗಿದೆ. ಗಾಂಧಿ ಭವನ ಮಾಡಿದ ಅಪ್ರತಿಮ ಸಾಧನೆಯನ್ನು ಪರಿಗಣಿಸಿ ಈ ಪ್ರಶಸ್ತಿ ಕೊಡಮಾಡಲಾಗುತ್ತಿದೆ ಎಂದು ನಾಡಪ್ರಭು ಕೆಂಪೇಗೌಡ ಪಾರಂಪರಿಕ ತಾಣದ ಅಭಿವೃದ್ಧಿ ಪ್ರಾಧಿಕಾರ ಪ್ರಕಟಣೆಯಲ್ಲಿ ತಿಳಿಸಿದೆ.



ಜೂನ್ 27 ಗುರುವಾರ ಕಂಠೀರವ ಒಳಾಂಗಣ ಕ್ರೀಡಾಂಗಣದಲ್ಲಿ ನಡೆಯಲಿರುವ ನಾಡಪ್ರಭು ಕೆಂಪೇಗೌಡರ 515ನೇ ಜಯಂತಿ ಕಾರ್ಯಕ್ರಮದಲ್ಲಿ ಗಾಂಧಿ ಭವನ ಸಂಸ್ಥೆಗೆ ಪ್ರಶಸ್ತಿ ನೀಡಿ ಗೌರವಿಸಲಾಗುತ್ತಿದೆ. ಗಾಂಧಿ ಭವನದ ಪರವಾಗಿ ಅಧ್ಯಕ್ಷರಾದ ವೂಡೇ ಪಿ. ಕೃಷ್ಣ ಅವರು ಪ್ರಶಸ್ತಿ ಸ್ವೀಕರಿಸಲಿದ್ದಾರೆ.

Jun 27, 2024



ನಗರದ ಕಂಠೀರವ ಕ್ರೀಡಾಂಗಣದಲ್ಲಿ ನಡೆದ ನಾಡಪ್ರಭು ಕೆಂಪೇಗೌಡರ 515ನೇ ಜಯಂತ್ಯೋತ್ಸವ ಕಾರ್ಯಕ್ರಮದಲ್ಲಿ ಗಾಂಧಿ ಸ್ಮಾರಕ ನಿಧಿಯ ವೂಡೇ ಪಿ ಕೃಷ್ಣ, ಸುಮಂಗಲಿ ಸೇವಾಶ್ರಮದ ಸುಶೀಲಮ್ಮ, ಸ್ಪೈನ್ಸ್ ಫೋರಂನ ಅಧ್ಯಕ್ಷರಿಗೆ ಕೆಂಪೇಗೌಡ ಪ್ರಶಸ್ತಿ ನೀಡಿ ಸಿಎಂ ಸಿದ್ದರಾಮಯ್ಯ ಸನ್ಮಾನಿಸಿದರು. ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಪೀಠಾಧ್ಯಕ್ಷರಾದ ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ, ಸ್ಪಟಿಕಪುರಿ ಮಠದ ನಂಜಾವಧೂತ ಸ್ವಾಮೀಜಿ, ವಿಶ್ವ ಒಕ್ಕಲಿಗರ ಮಹಾಸಂಸ್ಥಾನ ಮಠದ ಶ್ರೀ ಕುಮಾರಚಂದ್ರಶೇಖರನಾಥ ಸ್ವಾಮೀಜಿ, ಡಿಸಿಎಂ ಡಿ.ಕೆ.ಶಿವಕುಮಾರ್, ಸಚಿವ ಕೃಷ್ಣಬೈರೇಗೌಡ, ವಿಧಾನ ಪರಿಷತ್ ಸದಸ್ಯರಾದ ಗೋವಿಂದರಾಜು, ಪುಟ್ಟಣ್ಣ, ರಾಮೋಜಿಗೌಡ, ಸಲೀಂ ಅಹಮ್ಮದ್ , ಶಾಸಕರಾದ ರಿಜ್ವಾನ್ ಅರ್ಷದ್, ಎಸ್.ಆರ್. ವಿಶ್ವನಾಥ್ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು.

ಸಂಜೆವಾಣಿ
ಬುಧವಾರ 26 ಜೂನ್ 2024










ಸರ್ವಶ್ರೇಷ್ಠ ದಾರ್ಶನಿಕ, ಅಪ್ರತಿಮ ಆಡಳಿತಗಾರ ಬೆಂಗಳೂರು ಮಹಾನಗರ ನಿರ್ಮಾತೃ

ನಾಡಪ್ರಭು ಕೆಂಪೇಗೌಡರ

515ನೇ ಜಯಂತ್ಯುತ್ಸವ ಸಮಾರಂಭ

: 27 2024

ನಗರದ ಕಂಠೀರವ ಕ್ರೀಡಾಂಗಣದಲ್ಲಿ ಇಂದು ನಡೆದ ನಾಡಪ್ರಭು ಕೆಂಪೇಗೌಡರ 515ನೇ ಜಯಂತ್ಯುತ್ಸವ ಸಮಾರಂಭದಲ್ಲಿ ನಾಡೋಜ ವೂಡೇ ಪಿ.ಕೃಷ್ಣ ಸೇರಿದಂತೆ ಐದು ಮಂದಿ ಗಣ್ಯರಿಗೆ ಮುಖ್ಯಮಂತ್ರಿ ಸಿದ್ದರಾಮಯ್ಯರವರು ಕೆಂಪೇಗೌಡ ಪ್ರಶಸ್ತಿ ಪ್ರದಾನ ಮಾಡಿ ಗೌರವಿಸಿದರು. ಡಾ. ನಿರ್ಮಲಾನಂದ ಸ್ವಾಮೀಜಿ, ಡಿಸಿಎಂ ಡಿ.ಕೆ.ಶಿವಕುಮಾರ್ ಸಚಿವ ಕೃಷ್ಣ ಬೈರೇಗೌಡ ಮತ್ತಿತರರು ಇದ್ದಾರೆ.



ಖಾದ್ರಿ ಶಾಮಣ್ಣ ಸ್ಮಾರಕ ಟ್ರಸ್ಟ್ ಶನಿವಾರ ನಗರದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ 'ಪ್ರಜಾವಾಣಿ'ಯ ಡೆಪ್ಯೂಟಿ ಎಡಿಟರ್ ಎಂ. ನಾಗರಾಜ ಅವರಿಗೆ ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ ಪ್ರದಾನ ಮಾಡಲಾಯಿತು. ಪ್ರೊ.ಕೆ.ವಿ.ನಾಗರಾಜ್, ಬಿ.ಎಸ್. ಅರುಣ್, ವೂಡೇ ಪಿ. ಕೃಷ್ಣ ಹಾಗೂ ಎಸ್.ಆರ್. ಉಮಾಶಂಕರ್, ಎಚ್.ಆರ್. ಶ್ರೀಶ ಹಾಜರಿದ್ದರು

ಪ್ರಜಾವಾಣಿ

ಭಾನುವಾರ • ಜೂನ್ 23, 2024

## ಸಹಕಾರ ಪತ್ರಿಕೋದ್ಯಮ ಬೇಕಿದೆ: ಕೆ.ವಿ. ನಾಗರಾಜ್

# ನಾಗರಾಜಗೆ ಖಾದ್ರಿ ಶಾಮಣ್ಣ ಪ್ರಶಸ್ತಿ ಪ್ರದಾನ

ಪ್ರಜಾವಾಣಿ ವಾರ್ತೆ

ಬೆಂಗಳೂರು: ಖಾದ್ರಿ ಶಾಮಣ್ಣ ಸ್ಮಾರಕ ಟ್ರಸ್ಟ್ ನೀಡುವ 'ಖಾದ್ರಿ ಶಾಮಣ್ಣ ಪತ್ರಿಕೋದ್ಯಮ' ಪ್ರಶಸ್ತಿಯನ್ನು 'ಪ್ರಜಾವಾಣಿ' ಡೆಪ್ಯೂಟಿ ಎಡಿಟರ್ ಎಂ.ನಾಗರಾಜ ಅವರಿಗೆ ಶನಿವಾರ ಪ್ರದಾನ ಮಾಡಲಾಯಿತು.

ಪ್ರಶಸ್ತಿ ಪ್ರದಾನ ಮಾಡಿದ ನಿವೃತ್ತ ಪ್ರಾಧ್ಯಾಪಕ ಕೆ.ವಿ.ನಾಗರಾಜ್ ಅವರು, 'ಹಿಂದೆ ಜಾಹೀರಾತು ಬೇರೆ, ಸುದ್ದಿ ಬೇರೆಯಾಗಿತ್ತು. ಈಗ ಪತ್ರಿಕೋದ್ಯಮವು ಸುದ್ದಿ ತಯಾರಿಸುವ ಕೈಗಾರಿಕೆಯಾಗಿದೆ. ಹಾಗಾಗಿ ಪತ್ರಿಕೋದ್ಯಮ ವಾಣಿಜ್ಯೋ-ದ್ಯಮವಾಗಿದೆ' ಎಂದರು.

ಇದಕ್ಕೆ ಪರ್ಯಾಯವಾಗಿ ಅಮೆರಿಕದಲ್ಲಿ 'ಮೈಂಡ್‌ಫುಲ್ ಜರ್ನಲಿಸಂ' ಆರಂಭವಾಗಿದೆ. ಬುದ್ಧನ ಅಷ್ಟಮಾರ್ಗಗಳನ್ನು ಅಳವಡಿಸಿಕೊಂಡು ಇದು ನಡೆಯುತ್ತಿದೆ. ಸ್ಪರ್ಧೆ ಇರಬಾರದು. ಸಹಕಾರ ಇರಬೇಕು ಎಂಬುದು ಅದರ ತತ್ವ. ಇದೇ ತತ್ವದ ಆಧಾರದ ಪತ್ರಿಕೋದ್ಯಮ ನಮ್ಮ ದೇಶದಲ್ಲಿಯೂ ಸಾಧ್ಯವೇ ಎಂಬ ಚಿಂತನೆ ಆಗಬೇಕು ಎಂದರು.



ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿಯನ್ನು 'ಪ್ರಜಾವಾಣಿ' ಡೆಪ್ಯೂಟಿ ಎಡಿಟರ್ ಎಂ. ನಾಗರಾಜ ಅವರಿಗೆ ಪ್ರಾಧ್ಯಾಪಕ ಕೆ.ವಿ. ನಾಗರಾಜ್ ಪ್ರದಾನ ಮಾಡಿದರು. ಪತ್ರಕರ್ತ ಬಿ.ಎಸ್. ಅರುಣ್, ಗಾಂಧಿಭವನ ಅಧ್ಯಕ್ಷ ವೂಡೇ ಪಿ. ಕೃಷ್ಣ, ಗೃಹ ಇಲಾಖೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಎಸ್.ಆರ್. ಉಮಾಶಂಕರ್, ಖಾದ್ರಿ ಶಾಮಣ್ಣ ಸ್ಮಾರಕ ಟ್ರಸ್ಟ್‌ನ ಎಚ್.ಆರ್. ಶ್ರೀಶ, ನಾಗರಾಜ ಅವರ ಪತ್ನಿ ಯಶೋದಾ ಹಾಜರಿದ್ದರು —ಪ್ರಜಾವಾಣಿ ಚಿತ್ರ

ಸಾಮಾಜಿಕ ಜಾಲತಾಣಗಳು ಬಂದ ಮೇಲೆ ಎಲ್ಲವೂ ಸುದ್ದಿ, ಎಲ್ಲರೂ ಪತ್ರಕರ್ತರು ಎಂಬ ಮಾತುಗಳಿವೆ. ಇದು ಸರಿಯಲ್ಲ. ವೃತ್ತಿಪರ ಚೌಕಟ್ಟು ಇಲ್ಲದೇ, ಸುದ್ದಿಯನ್ನು ಪರಿಷ್ಕರಿಸದೇ ಪ್ರಕಟಿಸುವುದು ಪತ್ರಿಕೋದ್ಯಮವಾಗದು ಎಂದು ಅಭಿಪ್ರಾಯಪಟ್ಟರು.



ಗೃಹ ಇಲಾಖೆ ಹೆಚ್ಚುವರಿ ಮುಖ್ಯ ಕಾರ್ಯದರ್ಶಿ ಎಸ್.ಆರ್. ಉಮಾಶಂಕರ್ ಮಾತನಾಡಿ, 'ಬಿಬಿಎಂಪಿಯಲ್ಲಿ ಪತ್ರಕರ್ತರ ಆರೋಗ್ಯ ನಿಧಿಯಾಗಿ ವರ್ಷಕ್ಕೆ ₹ 2 ಕೋಟಿ ಮೀಸಲಿಡಲಾಗುತ್ತಿದೆ. ಅವಶ್ಯ ಇರುವ ಪತ್ರಕರ್ತರು ಇದರ ಸದುಪಯೋಗ ಪಡೆಯಬೇಕು' ಎಂದು ತಿಳಿಸಿದರು.

ಪತ್ರಕರ್ತ ಬಿ.ಎಸ್.ಅರುಣ್ ಮಾತನಾಡಿ, 'ಮಾಧ್ಯಮಗಳ ವಿಶ್ವಾಸಾರ್ಹತೆ ಕಡಿಮೆಯಾಗುತ್ತಿದೆ. ರಾಜಕೀಯ ಹಸ್ತಕ್ಷೇಪ ಹೆಚ್ಚಾಗುತ್ತಿದೆ. ಸಾಮಾಜಿಕ ಜಾಲತಾಣಗಳಲ್ಲಿ ಹರಿದಾಡುವ ಸುದ್ದಿಗಳಲ್ಲಿ ನಿಖರ ಯಾವುದು? ನಕಲಿ ಯಾವುದು? ಎಂದು ಪತ್ತೆ ಹಚ್ಚುವುದೇ ಕಷ್ಟದ ಕೆಲಸವಾಗಿದೆ' ಎಂದರು.

ಗಾಂಧಿಭವನ ಅಧ್ಯಕ್ಷ ವೂಡೇ ಪಿ. ಕೃಷ್ಣ ಮಾತನಾಡಿ, 'ಮಾಧ್ಯಮಗಳು ಘನತೆಯನ್ನು ಕಳೆದುಕೊಳ್ಳುತ್ತಿರುವ ಈ ಕಾಲದಲ್ಲಿ ಮುಖ್ಯವಾಹಿನಿಯ ಮುದ್ರಣ ಮಾಧ್ಯಮಗಳು ಮಾತ್ರ ಘನತೆ, ಗಟ್ಟಿತನ ಉಳಿಸಿಕೊಂಡಿವೆ' ಎಂದು ಶ್ಲಾಘಿಸಿದರು.



ವಿಜಯವಾಣಿ
ನಂ 1
ಕನ್ನಡ ದಿನಪತ್ರಿಕೆ

# ಸುದ್ದಿಗೆ ಚೌಕಟ್ಟಿಲ್ಲದಿದ್ದರೆ ಪತ್ರಿಕೋದ್ಯಮವಾಗದು

## ಕೆ.ವಿ. ನಾಗರಾಜ್ ಅಭಿಮತ I ಎಂ. ನಾಗರಾಜಗೆ 'ಖಾದ್ರಿ ಶಾಮಣ್ಣ ಪ್ರಶಸ್ತಿ' ಪ್ರದಾನ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಡಿಜಿಟಲ್ ಮಾಧ್ಯಮಗಳ ಈ ಕಾಲಘಟ್ಟದಲ್ಲಿ ಎಲ್ಲವೂ ಸುದ್ದಿ, ಎಲ್ಲರೂ ಪತ್ರಕರ್ತರಾಗುತ್ತಿದ್ದಾರೆ. ಆದರೆ, ವೃತ್ತಿಪರ ಚೌಕಟ್ಟು ಇಲ್ಲದೆ ಪ್ರಕಟಿಸುವುದು ಪತ್ರಿಕೋದ್ಯಮವಾಗದು ಎಂದು ಮಿಜೋರಾಂ ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕ ಕೆ.ವಿ. ನಾಗರಾಜ್ ಹೇಳಿದ್ದಾರೆ.

ಖಾದ್ರಿ ಶಾಮಣ್ಣ ಸ್ಮಾರಕ ಟ್ರಸ್ಟ್ ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಶನಿವಾರ ಹಮ್ಮಿಕೊಂಡಿದ್ದ 'ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ'ಯನ್ನು 'ಪ್ರಜಾವಾಣಿ' ಡೆಪ್ಯೂಟಿ ಎಡಿಟರ್ ಎಂ. ನಾಗರಾಜ ಅವರಿಗೆ ಪ್ರದಾನ ಮಾಡಿ ಮಾತನಾಡಿದರು. ಈಗ ಸುದ್ದಿಗಳ ಉತ್ಪಾದನೆಯ ಉದ್ದಿಮೆ ಬೆಳೆದಿದೆ. ಇದನ್ನು ತಪ್ಪಿಸಲು ಸುದ್ದಿಯ ಪೈಪೋಟಿಗಿಂತ ಸಹಕಾರ ಪತ್ರಿಕೋದ್ಯಮ ಸೂಕ್ತ. ಅಮೆರಿಕ ದಲ್ಲಿ ಈಗಾಗಲೇ 'ಮೈಂಡ್‌ಫುಲ್ ಜರ್ನಲಿಸಂ' ಎಂಬ ಪರಿಕಲ್ಪನೆ ಜಾರಿಗೆ ಬಂದಿದ್ದು ಬುದ್ಧನ ಅಷ್ಟಾಂಗ ಮಾರ್ಗಗಳನ್ನು ಅಳವಡಿಸಿಕೊಂಡು ಪತ್ರಿಕೋದ್ಯಮ ನಡೆಯುತ್ತಿದೆ. ಸ್ಪರ್ಧೆಯ ಬದಲು ಸಹಕಾರ ಇರಲಿ ಎಂಬ ನೆಲೆಗಟ್ಟಿನಲ್ಲಿ ಈ ಪತ್ರಿಕೋದ್ಯಮ ಸಾಗುತ್ತಿದೆ ಎಂದರು.



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪತ್ರಕರ್ತ ಎಂ. ನಾಗರಾಜ ಅವರಿಗೆ ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ ಪ್ರದಾನ ಮಾಡಲಾಯಿತು. ಕೆ.ವಿ. ನಾಗರಾಜ್, ಉಮಾಶಂಕರ್, ವೂಡೇ ಪಿ. ಕೃಷ್ಣ ಇತರರಿದ್ದರು.

ಬಿಬಿಎಂಪಿ ಆಡಳಿತಾಧಿಕಾರಿ ಎಸ್.ಆರ್. ಉಮಾಶಂಕರ್ ಮಾತನಾಡಿ, ಬಿಬಿಎಂಪಿಯಲ್ಲಿ ಪತ್ರಕರ್ತರ ಆರೋಗ್ಯ ನಿಧಿಯಾಗಿ ವರ್ಷಕ್ಕೆ 2 ಕೋಟಿ ರೂ ಮೀಸಲಿಡಲಾಗುತ್ತಿದೆ. ಆದರೆ, ಇದು ಪೂರ್ಣ ಬಳಕೆಯಾಗುತ್ತಿಲ್ಲ. ಒಂದು ಕೋಟಿ ರೂ.ಗಳಷ್ಟು ಬಳಕೆ ಆಗುತ್ತಿರುವುದೇ ಹೆಚ್ಚು. ಅವಶ್ಯಕತೆ ಇರುವ ಪತ್ರಕರ್ತರು ಈ ನಿಧಿಯನ್ನು ಬಳಸಿಕೊಳ್ಳುವಂತೆ ತಿಳಿಸಿದರು.

ಪತ್ರಿಕೋದ್ಯಮ ಎದುರಿಸುತ್ತಿರುವ ಸವಾಲುಗಳ ಬಗ್ಗೆ ಮಾತನಾಡಿದ ಹಿರಿಯ ಪತ್ರಕರ್ತ ಬಿ.ಎಸ್. ಅರುಣ್, ದೇಶದಲ್ಲಿ ಪತ್ರಕರ್ತರ ಮೇಲಿನ ದಾಳಿಗಳು ಹೆಚ್ಚಾಗುತ್ತಿವೆ. ಪತ್ರಿಕೋದ್ಯಮದ ಬಗ್ಗೆ ವಿಶ್ವಾಸಾರ್ಹತೆ ಕಡಿಮೆಯಾಗುತ್ತಿದೆ, ರಾಜಕೀಯ ಹಸ್ತಕ್ಷೇಪ ಹೆಚ್ಚಾಗಿ ಪತ್ರಿಕಾ ಸ್ವಾತಂತ್ರ್ಯ ಮೊಟಕುಗೊಳ್ಳುತ್ತಿದೆ. ಅದರ ಜತೆಗೆ ಈಗ ಕೃತಕ ಬುದ್ಧಿಮತ್ತೆ ಹೊಸ ಸವಾಲು ಒಡ್ಡುತ್ತಿದೆ. ಸಾಮಾಜಿಕ ಜಾಲತಾಣಗಳಲ್ಲಿ ಹರಿದಾಡುವ ಸುದ್ದಿಗಳಲ್ಲಿ ನಿಜ ಯಾವುದು, ನಕಲಿ ಯಾವುದು ಎಂದು ಪತ್ತೆ ಹಚ್ಚುವುದೇ ಸವಾಲಿನ ಕೆಲಸವಾಗಿದೆ ಎಂದು ಹೇಳಿದರು. ಗಾಂಧಿ ಭವನ ಅಧ್ಯಕ್ಷ ವೂಡೇ ಪಿ. ಕೃಷ್ಣ ಉಪಸ್ಥಿತರಿದ್ದರು.

Bengaluru Edition
Jun 23, 2024 Page No. 6
Powered by: erelego.com

ಸಂಯುಕ್ತ ಕರ್ನಾಟಕ

# ಜಾಲತಾಣಗಳಿಂದ ಪತ್ರಿಕೋದ್ಯಮ ವಿಶ್ವಾಸಾರ್ಹತೆಗೆ ಧಕ್ಕೆ

ಬೆಂಗಳೂರು: ಇಂದಿನ ಸಾಮಾಜಿಕ ಜಾಲತಾಣಗಳು ಮೂಲ ಪತ್ರಿಕೋದ್ಯಮ ವಿಶ್ವಾಸಾರ್ಹತೆಗೆ ಧಕ್ಕೆ ಬರುವಂತಹ ರೀತಿಯಲ್ಲಿ ಬಳಕೆಯಾಗುತ್ತಿರುವುದು ಆತಂಕದ ಸಂಗತಿಯಾಗಿದೆ ಎಂದು ರಾಜಕೀಯ ಚಿಂತಕ ಬಿ.ಎಸ್.ಅರುಣ್ ತಿಳಿಸಿದರು.

ನಗರದ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಖಾದ್ರಿ ಶಾಮಣ್ಣ ಸ್ಮಾರಕ ಟ್ರಸ್ಟ್ ಹಮ್ಮಿಕೊಂಡಿದ್ದ ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡಿದರು. ಸಾಮಾಜಿಕ ಜಾಲತಾಣಗಳಲ್ಲಿ ಗಮನಿಸಬಹುದಾದ ಸುದ್ದಿ, ಕೆಲ ಅಂಶಗಳಲ್ಲಿ ನಿಖರತೆ, ಸ್ಪಷ್ಟತೆ ಇಲ್ಲದೆ ನಂಬಬೇಕೋ ನಂಬಬಾರದೋ ಎಂಬ ಗೊಂದಲದಲ್ಲಿ ಜನಸಾಮಾನ್ಯರು ಸಿಲುಕಿಕೊಳ್ಳುವಂತಾಗಿದೆ ಎಂದು ಹೇಳಿದರು.

ಸಾಮಾಜಿಕ ಜಾಲತಾಣಗಳಿಂದಾಗುವ ಸಾಕಷ್ಟು ಪರಿಣಾಮಗಳ ಬಗ್ಗೆ ಗಂಭೀರವಾಗಿ ಆಲೋಚನೆ ಮಾಡಬೇಕಾಗಿದೆ. ನಕಲಿ ಸುದ್ದಿಗಳನ್ನು ಹರಿಬಿಡುವುದು ಸಾಮಾನ್ಯ ಸಂಗತಿಯಾಗಿದೆ. ಈ ಪರಿಣಾಮವಾಗಿ ಪತ್ರಿಕೋದ್ಯಮದ ಮೌಲ್ಯಗಳು ಕುಸಿಯುವಂತಹ ವಾತಾವರಣ ನಿರ್ಮಾಣವಾಗಿದೆ. ಸುದ್ದಿ ವಾಹಿನಿಗಳಿಂದ ಪತ್ರಿಕೋದ್ಯಮದ ವಿಶ್ವಾಸಾರ್ಹತೆಗೆ ಹೆಚ್ಚಿನ ತೊಂದರೆ ಕೂಡ ಆಗುತ್ತಿರುವುದನ್ನು



ಗಮನಿಸಬಹುದಾಗಿದೆ. ಪತ್ರಕರ್ತನಿಗಾಗಲೀ, ಸುದ್ದಿ ಸಂಸ್ಥೆಗಾಗಲೀ ವಿಶ್ವಾಸಾರ್ಹತೆ ಬಹುಮುಖ್ಯ ಎಂದು ತಿಳಿಸಿದರು.

ಕೃತಕ ಬುದ್ಧಿಮತ್ತೆ (ಆರ್ಟಿಫಿಷಿಯಲ್ ಇಂಟೆಲಿಜೆನ್ಸ್)ಯನ್ನು ಹಂತ ಹಂತವಾಗಿ ಹಲವು ಕ್ಷೇತ್ರಗಳಲ್ಲಿ ಬಳಕೆಯಾಗುತ್ತಿರುವುದನ್ನು ಗಮನಿಸಬಹುದಾಗಿದೆ. ಪತ್ರಿಕೋದ್ಯಮದಲ್ಲಿ ಕೃತಕ ಬುದ್ಧಿಮತ್ತೆಯನ್ನು ಬಳಸಿದ್ದೇ ಆದಲ್ಲಿ ಮೂಲ ಆಶಯಗಳಿಗೆ ಕುಂದುಂಟಾಗುತ್ತದೆ. ಪತ್ರಿಕೋದ್ಯಮದ ವಿಶ್ವಾಸಾರ್ಹತೆಯೂ ಕಡಿಮೆಯಾಗುವುದರಲ್ಲಿ ಯಾವುದೇ ಅನುಮಾನವಿಲ್ಲ. ಕೊರೊನಾದಿಂದ ಹಲವು ಕ್ಷೇತ್ರಗಳಿಗೂ ಹೆಚ್ಚಿನ ಪರಿಣಾಮ ಬೀರಿತು. ಆದರೆ ಪತ್ರಿಕೋದ್ಯಮ ಕ್ಷೇತ್ರಕ್ಕಾದ ನಷ್ಟ ಹೆಚ್ಚು. ಇಂದಿಗೂ ಅದನ್ನು ಸರಿದೂಗಿಸುವಂತಹದ್ದು ಸವಾಲಿನ ಕೆಲಸವಾಗಿದೆ ಎಂದು ಹೇಳಿದರು.

ಮಿಜೋರಾಂ ವಿಶ್ವವಿದ್ಯಾನಿಲಯದ ನಿವೃತ್ತ ಪ್ರಾಧ್ಯಾಪಕ ಪ್ರೊ.ಕೆ.ವಿ.ನಾಗರಾಜ್ ಮಾತನಾಡಿ, ಪತ್ರಿಕೋದ್ಯಮದಲ್ಲಿ ಖಾದ್ರಿ ಶಾಮಣ್ಣ ಅವರು ತೊಡಗಿಸಿಕೊಂಡ ವೈಖರಿಯೇ ವಿಭಿನ್ನತೆಯಿಂದ ಕೂಡಿದೆ. ಅವರ ಕಾರ್ಯತತ್ಪರತೆಯು ಇಂದಿನ ಪತ್ರಕರ್ತರಿಗೆ ಮಾದರಿಯಾಗಿದ್ದು, ಈ ನಿಟ್ಟಿನಲ್ಲಿ ಪತ್ರಿಕೋದ್ಯಮದ ಮೌಲ್ಯಗಳು ಮತ್ತು ಆದರ್ಶಗಳಿಗೆ ಬದ್ಧರಾಗಬೇಕಾದ ಅವಶ್ಯಕತೆ ಇದೆ ಎಂದು ತಿಳಿಸಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಖಾದ್ರಿ ಶಾಮಣ್ಣ ಗಾಂಧಿ ಚಿಂತಕ ಹಾಗೂ ಅನುಯಾಯಿ ಅವರಿಂದ ಹೆಚ್ಚಿನ ಪ್ರೇರಣೆ ಪಡೆದಿದ್ದಾರೆ. ಖಾದ್ರಿ ಅವರ ಲೇಖನಗಳನ್ನು ಓದಿ ನಾನು ಸ್ಫೂರ್ತಿ ಪಡೆದಿರುವೆ. ಅವರ ಹೆಸರಲ್ಲಿ ಪತ್ರಕರ್ತರಿಗಾಗಿ ಪ್ರಶಸ್ತಿ ನೀಡುತ್ತಿರುವುದು ಶ್ಲಾಘನೀಯ ಸಂಗತಿ ಎಂದರು.

ಖಾದ್ರಿ ಶಾಮಣ್ಣ ಪತ್ರಿಕೋದ್ಯಮ ಪ್ರಶಸ್ತಿ ಸ್ವೀಕರಿಸಿ ಮಾತನಾಡಿದ ಪ್ರಜಾವಾಣಿ ಡೆಪ್ಯುಟಿ ಎಡಿಟರ್ ಎಂ.ನಾಗರಾಜ, ಹಲವರ ಸಹಕಾರದಿಂದ ಪತ್ರಿಕೋದ್ಯಮ ವೃತ್ತಿಯಲ್ಲಿ ವಿಶೇಷವಾಗಿ ತೊಡಗಿಸಿಕೊಳ್ಳಲು ಸಾಧ್ಯವಾಯಿತು. ನನಗೆ ಸಂದಿರುವ ಪ್ರಶಸ್ತಿ ಮೊತ್ತವನ್ನು ಖಾದ್ರಿ ಶಾಮಣ್ಣ ಸ್ಮಾರಕ ಟ್ರಸ್ಟ್‌ಗೆ ನೀಡುವೆ. ಟ್ರಸ್ಟ್ ಗಟ್ಟಿಯಾಗಿ ಬೆಳೆದು ನಿಲ್ಲಲಿ ಎಂದು ಆಶಿಸಿದರು. ಬಿಬಿಎಂಪಿ ಆಡಳಿತಾಧಿಕಾರಿ ಎಸ್.ಆರ್.ಉಮಾಶಂಕರ್, ಟ್ರಸ್ಟ್ ಮುಖ್ಯಸ್ಥರಾದ ಶ್ರೀಶ, ಸ್ಮಿತಾ ಅಮೃತ ಉಪಸ್ಥಿತರಿದ್ದರು.

ಕನ್ನಡಪ್ರಭ

# ಸಾಧನೆ ಮಾಡಿದರೆ ಸಾಮಾನ್ಯನಿಗೂ ದೊಡ್ಡ ಗೌರವ

## ಪದ್ಮಶ್ರೀ ಪುರಸ್ಕೃತ ಕೆ.ಎಸ್.ರಾಜಣ್ಣ ಅಭಿಮತ | ಜಿಲ್ಲಾ ನಾಗರಿಕ ಅಭಿನಂದನಾ ಸಮಿತಿ ಸಹಯೋಗದಲ್ಲಿ ನಡೆದ ಕಾರ್ಯಕ್ರಮ

• ಕನ್ನಡಪ್ರಭ ವಾರ್ತೆ ಮಂಡ್ಯ

ಸಿಕ್ಕ ಅವಕಾಶಗಳನ್ನು ಬಳಸಿಕೊಂಡು ಸೇವೆ ಜೊತೆಗೆ ಸಾಧನೆ ಮಾಡಿದರೆ ಸಾಮಾನ್ಯನಿಗೂ ದೊಡ್ಡ ಗೌರವ ದೊರೆಯುತ್ತದೆ ಎಂಬುದಕ್ಕೆ ನನಗೆ ಪದ್ಮಶ್ರೀ ಸಿಕ್ಕಿರುವುದೇ ಕಾರಣ ಎಂದು ಪದ್ಮಶ್ರೀ ಪುರಸ್ಕೃತ ಕೆ.ಎಸ್.ರಾಜಣ್ಣ ಹೇಳಿದರು.

ನಗರದ ಅಂಬೇಡ್ಕರ್ ಭವನದಲ್ಲಿ ಜಿಲ್ಲಾ ನಾಗರಿಕ ಅಭಿನಂದನಾ ಸಮಿತಿ ಸಹಯೋಗದಲ್ಲಿ ಶನಿವಾರ ಆಯೋಜಿಸಿದ್ದ ಪದ್ಮಶ್ರೀ ಪ್ರಶಸ್ತಿ ಪುರಸ್ಕೃತ ಕೆ.ಎಸ್.ರಾಜಣ್ಣ ಮತ್ತು ಕರ್ನಾಟಕ ರಾಜ್ಯ ಮುಕ್ತ ವಿವಿಯಿಂದ ಗೌರವ ಡಾಕ್ಟರೇಟ್ ಪಡೆದಿರುವ ಮೀರಾ ಶಿವಲಿಂಗಯ್ಯ ಅವರಿಗೆ ನಾಗರಿಕ ಅಭಿನಂದನಾ ಸಮಾರಂಭದಲ್ಲಿ ಅಭಿನಂದನೆ ಸ್ವೀಕರಿಸಿ ಮಾತನಾಡಿದರು.

25 ವರ್ಷದ ಹಿಂದೆ ದೊಡ್ಡವರಿಗೆ ಹಾಗೂ ಬಲಾಢ್ಯರಿಗೆ ಸಿಗುತ್ತಿದ್ದ ಈ ಪದ್ಮಶ್ರೀ ಪ್ರಶಸ್ತಿ ನನ್ನಂತಹ ಸಾಮಾನ್ಯನಿಗೂ ಸಿಗುತ್ತಿದೆ. ಸೇವೆ ಎಂಬುದು ದೊಡ್ಡವರ ಆಸ್ತಿಯಲ್ಲ, ಇದರಲ್ಲಿ ಪ್ರಾಮಾಣಿಕವಾಗಿ ಸೇವೆಯಲ್ಲಿ ತೊಡಗಿಕೊಂಡವರಿಗೂ ಪ್ರಶಸ್ತಿ ಒಲಿಯುತ್ತದೆ ಎಂಬುವುದಕ್ಕೆ ನಾನೇ ಸಾಕ್ಷಿ ಎಂದರು.

ನನ್ನ ಸೇವೆಯನ್ನು ಗುರುತಿಸಿ ಪದ್ಮಶ್ರೀ ನೀಡಿರುವುದಕ್ಕೆ ಈ ಮಂಡ್ಯ ಮಣ್ಣಿಗೆ ಋಣಿಯಾಗಿರುತ್ತೇನೆ. ಪದ್ಮಶ್ರೀ ಸಿಕ್ಕಿದೆ ಎಂದಾಗ ನನಗಾದ ಸಂತೋಷ ಅಷ್ಟಿಷ್ಟಲ್ಲ. ಈ ಪ್ರಶಸ್ತಿ ಜಿಲ್ಲೆಯ ಜನರಿಗೆ ಸಿಕ್ಕ ಗೌರವವಾಗಿದೆ ಎಂದರು.

ಜಿಲ್ಲಾಧಿಕಾರಿ ಡಾ.ಕುಮಾರ ಮಾತನಾಡಿ, ವ್ಯಕ್ತಿತ್ವದಿಂದ ಒಳಿತಾಗುತ್ತದೆ ಎಂಬುದಕ್ಕೆ ಪದ್ಮಶ್ರೀ ಪ್ರಶಸ್ತಿ ವಿಜೇತ ಕೆ.ಎಸ್.ರಾಜಣ್ಣ ಹಾಗೂ ತಾವು ಕಲಿತ ವಿವಿಯಲ್ಲಿಯೇ ಡಾಕ್ಟರೇಟ್ ಪಡೆದ ಮೀರಾ ಶಿವಲಿಂಗಯ್ಯ ಅವರು ಸಾಕ್ಷಿಯಾಗಿ ನಿಲ್ಲುತ್ತಾರೆ. ಈ ಸಾಧನೆಯನ್ನು ಮಾಡಿರುವುದನ್ನು ಗುರುತಿಸಬೇಕಾದರೆ ಅದು ಒಳ್ಳೆಯ ಮನಸಿನಿಂದ ಸಾಧ್ಯವಾಗುತ್ತದೆ ಎಂದು ಹೇಳಿದರು.

ಶಾಸಕ ಪಿ.ರವಿಕುಮಾರ್ ಮಾತನಾಡಿ, ರಾಜಣ್ಣ ಅವರು ತಮಗಿರುವ ಅಂಗವಿಕಲತೆಯನ್ನು ಸಾಧನೆಯ ಮೆಟ್ಟಿಲಾಗಿ ಮಾಡಿಕೊಂಡು ದೇಶವನ್ನು ಪ್ರತಿನಿಧಿಸಿ ಪ್ಯಾರಾ ಒಲಂಪಿಕ್‌ನಲ್ಲಿ ಪದಕ ಗೆದ್ದು ವಿಶ್ವದಲ್ಲೇ ಮಂಡ್ಯದ ಹೆಸರನ್ನು ಪ್ರಚುರ ಪಡಿಸಿ ಪದ್ಮಶ್ರೀ ಪಡೆದಿರುವುದು ಹೆಮ್ಮೆಯ ವಿಷಯ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ವೂಡೇ ಪಿ.ಕೃಷ್ಣ ಮಾತನಾಡಿ, ರಾಜಣ್ಣ ಮತ್ತು ಮೀರಾ ಶಿವಲಿಂಗಯ್ಯ ಅವರ ಸಾಧನೆ ಎಲ್ಲರ ಮನ ಗೆದ್ದಿದೆ. ರಾಜಣ್ಣ ಅವರನ್ನು ದೇಶದ 806 ಜಿಲ್ಲೆಗಳಲ್ಲಿ ಹಾಗೂ 132 ಪದ್ಮಶ್ರೀ ವಿಜೇತರ ಪಟ್ಟಿಯಲ್ಲಿ ಮಂಡ್ಯ ಮುಕುಟಕ್ಕೆ ಪ್ರಶಸ್ತಿ ಒಲಿದಿದೆ ಎಂದರೆ ಇದು ಅಸಾಮಾನ್ಯವಾದುದಲ್ಲ. ಐಶ್ವರ್ಯ ಮತ್ತು ಅಧಿಕಾರವನ್ನು ಕೆಲವರು ಆರಾಧಿಸುವವರ ಕಾಲಘಟ್ಟದಲ್ಲಿ ಸೇವೆಯನ್ನು ಆರಾಧಿಸುವವರನ್ನು ಗುರುತಿಸಿ ಗೌರವಿಸುವುದು ಉತ್ತಮ ಕೆಲಸ ಎಂದರು.

ಇದೇ ವೇಳೆ ಪದ್ಮಶ್ರೀ ಪ್ರಶಸ್ತಿ ಪುರಸ್ಕೃತ ಕೆ.ಎಸ್.ರಾಜಣ್ಣ ಮತ್ತು ಕರ್ನಾಟಕ ರಾಜ್ಯ ಮುಕ್ತ ವಿವಿಯಿಂದ ಗೌರವ ಡಾಕ್ಟರೇಟ್ ಪಡೆದಿರುವ ಮೀರಾ ಶಿವಲಿಂಗಯ್ಯ ಅವರನ್ನು ಅಭಿನಂದಿಸಿ ಗೌರವಿಸಲಾಯಿತು. ಕಾರ್ಯಕ್ರಮದಲ್ಲಿ ಹೆಚ್ಚುವರಿ ಜಿಲ್ಲಾಧಿಕಾರಿ ಎಚ್.ಎಲ್.ನಾಗರಾಜು, ಚಿಕ್ಕಮಗಳೂರು ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಉಪನಿರ್ದೇಶಕಿ ಎಚ್.ಪಿ.ಮಂಜುಳಾ, ರಾಜ್ಯ ಅಂಗವಿಕಲರ ಒಕ್ಕೂಟದ ರಾಜ್ಯ ಘಟಕದ ಅಧ್ಯಕ್ಷ ಎಂ.ಎಸ್.ಚಲುವರಾಜು, ಸಮಿತಿಯ ಅಧ್ಯಕ್ಷ ಕೆ.ಟಿ.ಹನುಮಂತು, ಉಪಾಧ್ಯಕ್ಷ ಎಂ.ಎನ್.ಶ್ರೀಧರ್, ಕಾರ್ಯದರ್ಶಿಗಳಾದ ಕಾರಸವಾಡಿ ಮಹದೇವು, ಕೃಷ್ಣೇಗೌಡ ಇದ್ದರು.



ಮಂಡ್ಯದಲ್ಲಿ ಪದ್ಮಶ್ರೀ ಪುರಸ್ಕೃತ ಕೆ.ಎಸ್.ರಾಜಣ್ಣ, ಕರ್ನಾಟಕ ರಾಜ್ಯ ಮುಕ್ತ ವಿವಿಯಿಂದ ಗೌರವ ಡಾಕ್ಟರೇಟ್ ಪಡೆದ ಮೀರಾ ಶಿವಲಿಂಗಯ್ಯರನ್ನು ಅಭಿನಂದಿಸಲಾಯಿತು.

ಆಂದೋಲನ

# ಸಾಧಕರನ್ನು ಗುರುತಿಸಿದ್ದು ಹೆಮ್ಮೆಯ ಸಂಗತಿ: ವೂಡೇ ಕೃಷ್ಣ

## ಪದ್ಮಶ್ರೀ ಪುರಸ್ಕೃತ ಕೆ.ಎಸ್.ರಾಜಣ್ಣ, ಡಾಕ್ಟರೇಟ್ ಪಡೆದ ಮೀರಾ ಅವರಿಗೆ ಅಭಿನಂದನೆ



ಮಂಡ್ಯ: ಅಂಗವೈಕಲ್ಯವನ್ನು ಮೀರಿದ ಸಾಧನೆ ಮಾಡಿದ ಕೆ.ಎಸ್.ರಾಜಣ್ಣ ಅವರು ಪದ್ಮಶ್ರೀ ಪ್ರಶಸ್ತಿ ಪುರಸ್ಕೃತರಾಗಿರುವುದು ಸಕ್ಕರೆ ನಾಡಿನ ಮುಕುಟಕ್ಕೆ ಕೀರ್ತಿಯ ಗರಿ ಸಂದಿದೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ವೂಡೇ ಪಿ.ಕೃಷ್ಣ ಹೇಳಿದರು.

ನಗರದ ಅಂಬೇಡ್ಕರ್ ಭವನದಲ್ಲಿ ಜಿಲ್ಲಾ ನಾಗರಿಕ ಅಭಿನಂದನಾ ಸಮಿತಿ ಸಹಯೋಗದಲ್ಲಿ ಆಯೋಜಿಸಿದ್ದ ಪದ್ಮಶ್ರೀ ಪುರಸ್ಕೃತ ಕೆ.ಎಸ್.ರಾಜಣ್ಣ ಮತ್ತು ಕರ್ನಾಟಕ ರಾಜ್ಯ ಮುಕ್ತ ವಿವಿಯಿಂದ ಗೌರವ ಡಾಕ್ಟರೇಟ್‌ಗೆ ಭಾಜನರಾಗಿರುವ ಮೀರಾ ಶಿವಲಿಂಗಯ್ಯ ಅವರಿಗೆ ಹಮ್ಮಿಕೊಂಡಿದ್ದ ನಾಗರಿಕ ಅಭಿನಂದನಾ ಸಮಾರಂಭದಲ್ಲಿ ಪಾಲ್ಗೊಂಡು ಮಾತನಾಡಿದರು.

ಅಭಿನಂದನೆ ಸ್ವೀಕರಿಸಿ ಮಾತನಾಡಿದ ಪದ್ಮಶ್ರೀ ಕೆ.ಎಸ್.ರಾಜಣ್ಣ, ನನ್ನ ಸೇವೆಯನ್ನು ಗುರುತಿಸಿ ಕೇಂದ್ರ ಸರ್ಕಾರ ಪದ್ಮಶ್ರೀ ನೀಡಿರುವುದಕ್ಕೆ ಮಂಡ್ಯದ ಮಣ್ಣಿಗೆ ಋಣಿಯಾಗಿರುತ್ತೇನೆ, ದೊಡ್ಡವರಿಗೆ ಹಾಗೂ ಬಲಾಢ್ಯರಿಗೆ ಸಿಗುತ್ತಿದ್ದ ಈ ಪದ್ಮಶ್ರೀ ಪ್ರಶಸ್ತಿ ನನ್ನಂತಹ ಸಾಮಾನ್ಯನಿಗೂ ಸಿಕ್ಕಿರುವುದು ಹೆಮ್ಮೆಯ ಸಂಗತಿ ಎಂದರು.

ಜಿಲ್ಲಾಧಿಕಾರಿ ಕುಮಾರ ಮಾತನಾಡಿ, ಒಳ್ಳೆಯ ವ್ಯಕ್ತಿತ್ವದಿಂದ ಒಳಿತಾಗುತ್ತದೆ ಎಂಬುದಕ್ಕೆ ಪದ್ಮಶ್ರೀ ಕೆ.ಎಸ್.ರಾಜಣ್ಣ ಹಾಗೂ ತಾವು ಕಲಿತ ವಿವಿಯಲ್ಲಿಯೇ ಡಾಕ್ಟರೇಟ್ ಪಡೆದ ಮೀರಾ ಶಿವಲಿಂಗಯ್ಯ ಅವರು ಸಾಕ್ಷಿಯಾಗಿದ್ದಾರೆಂದು ಬಣ್ಣಿಸಿದರು.

ಶಾಸಕ ಪಿ.ರವಿಕುಮಾರ್‌ಗೌಡ ಮಾತನಾಡಿ, ರಾಜಣ್ಣ ಅವರು ಅಂಗವಿಕಲತೆಯನ್ನು ಸಾಧನೆಯ ಮೆಟ್ಟಿಲಾಗಿಸಿಕೊಂಡು, ದೇಶವನ್ನು ಪ್ರತಿನಿಧಿಸಿ, ಪ್ಯಾರಾ ಒಲಿಂಪಿಕ್‌ನಲ್ಲಿ ಪದಕ ಗೆದ್ದು, ವಿಶ್ವದಲ್ಲೇ ಮಂಡ್ಯದ ಹೆಸರನ್ನು ಎತ್ತಿ ಹಿಡಿದು ಪದ್ಮಶ್ರೀ ಪ್ರಶಸ್ತಿ ಪಡೆದಿರುವುದು ಹೆಮ್ಮೆಯ ಸಂಗತಿ ಎಂದರು.

ಕಾರ್ಯಕ್ರಮದಲ್ಲಿ ಪದ್ಮಶ್ರೀ ಪುರಸ್ಕೃತ ಕೆ.ಎಸ್.ರಾಜಣ್ಣ ಮತ್ತು ಕರಾಮುವಿಯಿಂದ ಗೌರವ ಡಾಕ್ಟರೇಟ್‌ಗೆ ಭಾಜನರಾಗಿರುವ ಮೀರಾ ಶಿವಲಿಂಗಯ್ಯ ಅವರನ್ನು ದಂಪತಿ ಸಮೇತ ಅಭಿನಂದಿಸಲಾಯಿತು.

ಅಪರ ಜಿಲ್ಲಾಧಿಕಾರಿ ಎಚ್.ಎಲ್.ನಾಗರಾಜು, ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಉಪನಿರ್ದೇಶಕಿ ಎಚ್.ಪಿ.ಮಂಜುಳಾ, ಅಂಗವಿಲಕರ ಒಕ್ಕೂಟದ ರಾಜ್ಯ ಘಟಕದ ಅಧ್ಯಕ್ಷ ಎಂ.ಎಸ್.ಚೆಲುವರಾಜು, ಸಮಿತಿಯ ಅಧ್ಯಕ್ಷ ಕೆ.ಟಿ.ಹನುಮಂತು, ಉಪಾಧ್ಯಕ್ಷ ಎಂ.ಎನ್.ಶ್ರೀಧರ್, ಕಾರ್ಯದರ್ಶಿಗಳಾದ ಮಹದೇವು, ಕೃಷ್ಣೇಗೌಡ, ದೇವರಾಜ್ ಮತ್ತಿತರರು ವೇದಿಕೆಯಲ್ಲಿದ್ದರು.

ಜನದನಿಯ ಸಾರಥಿ
ವಾರ್ತಾ ಭಾರತಿ

# 'ವಿಶೇಷಚೇತನರಿಗೆ ಬದುಕು ಕಟ್ಟಿಕೊಳ್ಳಲು ಅವಕಾಶ ನೀಡಬೇಕು'

## ಪದ್ಮಶ್ರೀ ರಾಜಣ್ಣ, ಡಾ.ಮೀರಾ ಶಿವಲಿಂಗಯ್ಯಗೆ ನಾಗರಿಕ ಸನ್ಮಾನ

ಮಂಡ್ಯ, ಜೂ.22: ನಗರದ ಡಾ.ಬಿ.ಆರ್.ಅಂಬೇಡ್ಕರ್ ಭವನದಲ್ಲಿ ಜಿಲ್ಲಾ ನಾಗರಿಕ ಅಭಿನಂದನಾ ಸಮಿತಿ ವತಿಯಿಂದ ಭಾರತ ಸರಕಾರದ ಪದ್ಮಶ್ರೀ ಪುರಸ್ಕೃತ ಕೆ.ಎಸ್.ರಾಜಣ್ಣ ಹಾಗೂ ಕರ್ನಾಟಕ ರಾಜ್ಯ ಮುಕ್ತ ವಿವಿ ಗೌರವ ಡಾಕ್ಟರೇಟ್ ಪುರಸ್ಕೃತೆ ಡಾ.ಮೀರಾ ಶಿವಲಿಂಗಯ್ಯ ಅವರಿಗೆ ಸನ್ಮಾನ ಮಾಡಲಾಯಿತು.



ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಜಿಲ್ಲಾಧಿಕಾರಿ ಡಾ.ಕುಮಾರ, ಒಳ್ಳೆಯ ಸಾಧಕರನ್ನು ಗುರುತಿಸಿ ಗೌರವಿಸುವುದು ಜೀವಂತಿಕೆಯ ಮನಸ್ಸುಗಳಿಂದ ಮಾತ್ರ ಸಾಧ್ಯ. ಈ ನಿಟ್ಟಿನಲ್ಲಿ ಮಂಡ್ಯ ಜಿಲ್ಲೆಯ ಅಭಿನಂದನಾ ಸಮಿತಿ ಪದಾಧಿಕಾರಿಗಳು ಇತರರಿಗೆ ಮಾದರಿಯಾಗಿದ್ದಾರೆ ಎಂದರು.

ಅಂಗವೈಕಲ್ಯ ಎಂಬುದು ದೇಹಕ್ಕೆ ಮಾತ್ರ, ಮನಸ್ಸಿಗೆ ಅಲ್ಲ ಎಂಬುದನ್ನು ರಾಜಣ್ಣ ಅವರು ದೃಢಪಡಿಸಿದ್ದಾರೆ. ಕ್ರಿಯಾಶೀಲ ಅಧಿಕಾರಿಯಾಗಿ ವಿಶೇಷಚೇತನ ಮಕ್ಕಳಿಗೆ ಧ್ವನಿಯಾಗಿದ್ದಾರೆ. ಸಮಾಜದ ಬಗ್ಗೆ ಅಪಾರ ಕಾಳಜಿ ಇದೆ. ಯುವ ಮನಸ್ಸುಗಳಿಗೆ ಆದರ್ಶವಾಗಿದ್ದಾರೆ. ಅನುಕಂಪದಿಂದ ವಿಶೇಷಚೇತನರ ಬದುಕು ಹಸನಾಗುವುದಿಲ್ಲ. ಬದಲಾಗಿ ಅವರಿಗೆ ಬದುಕುಕಟ್ಟಿಕೊಳ್ಳಲು ಅವಕಾಶ ನೀಡಬೇಕು ಎಂದು ಅವರು ಹೇಳಿದರು.

ಕರ್ನಾಟಕ ಮುಕ್ತ ವಿವಿ ಗೌರವ ಡಾಕ್ಟರೇಟ್‌ಗೆ ಭಾಜನರಾಗಿರುವ ಮೀರಾಶಿವಲಿಂಗಯ್ಯ ಸರಳ, ಸಜ್ಜನಿಕೆಯಿಂದ ಶೈಕ್ಷಣಿಕ, ಆರೋಗ್ಯ, ಕೈಗಾರಿಕಾ ಕ್ಷೇತ್ರದಲ್ಲಿ ಒಳ್ಳೆಯ ಕೆಲಸ ಮಾಡುತ್ತಿದ್ದಾರೆ. ಅವರಿಗೆ ವಿಶೇಷವಾದ ಸಂಘಟನಾ ಶಕ್ತಿ ಇದೆ. ಪ್ರಚಾರಕ್ಕಾಗಿ ಸೇವೆ ಮಾಡದೆ, ಸದ್ದಿಲ್ಲದಂತೆ ಸಮಾಜ ಸೇವೆ ಮಾಡುತ್ತಿದ್ದಾರೆ. ಇತರರಿಗೆ ಮಾದರಿಯಾಗಿದ್ದಾರೆ ಎಂದು ಅವರು ಹೇಳಿದರು.

ಕಾರ್ಯಕ್ರಮದಲ್ಲಿ ಶಾಸಕ ಪಿ.ರವಿಕುಮಾರ್ ಗಣಿಗ, ನಾಮೋಜ ಪೂಡೇ ಪಿ.ಕೃಷ್ಣ, ಅಪರ ಜಿಲ್ಲಾಧಿಕಾರಿ ಡಾ.ಎಚ್. ಎಲ್.ನಾಗರಾಜು, ನಿವೃತ್ತ ಅಧಿಕಾರಿಗಳಾದಡಾ.ಬಿ.ಶಿವಲಿಂಗಯ್ಯ, ಡಾ.ಎಚ್.ಪಿ.ಮಂಜುಳಾ, ಡಾ.ಎಂ.ಎಸ್ .,ಚೆಲುವರಾಜು, ಅಭಿನಂದನಾ ಸಮಿತಿಯ ಕಾರಸವಾಡಿ ಮಹಾದೇವ, ಕೀಲಾರ ಕೃಷ್ಣೇಗೌಡ, ಕೆ.ಟಿ.ಹನುಮಂತು, ಬಿ.ಅಪ್ಪಾಜಪ್ಪ, ಇತರ ಗಣ್ಯರು ಉಪಸ್ಥಿತರಿದ್ದರು.

Bengaluru Edition
Jun 23, 2024 Page No. 4

ಸಂಯುಕ್ತ ಕರ್ನಾಟಕ

ಭಾನುವಾರ 23 ಜೂನ್ 2024

# ಅಭಿನಂದನಾ ಸಮಾರಂಭ

ಸಂ.ಕ. ಸಮಾಚಾರ, ಮಂಡ್ಯ

ನಗರದ ಡಾ.ಬಿ.ಆರ್.ಅಂಬೇಡ್ಕರ್ ಭವನದಲ್ಲಿ ಪದ್ಮಶ್ರೀ ಪ್ರಶಸ್ತಿ ಪುರಸ್ಕೃತರಾದ ಪದ್ಮಶ್ರೀ ಕೆ.ಎಸ್. ರಾಜಣ್ಣ ಹಾಗೂ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪಡೆದಿರುವ ಡಾ. ಮೀರಾ ಶಿವಲಿಂಗಯ್ಯ ಅವರಿಗೆ ನಾಗರಿಕ ಅಭಿನಂದನಾ ಸಮಾರಂಭವನ್ನು ಜಿಲ್ಲಾಧಿಕಾರಿ ಡಾ. ಕುಮಾರ ಉದ್ಘಾಟಿಸಿದರು.

ಮಂಡ್ಯ ಜಿಲ್ಲಾ ನಾಗರಿಕ ಅಭಿನಂದನಾ ಸಮಿತಿ, ಮಂಡ್ಯ ಜಿಲ್ಲೆಯ ಎಲ್ಲಾ ಗ್ರಾಮೀಣಾ ಪುನರ್ವಸತಿ ಕಾರ್ಯಕರ್ತರು ಹಾಗೂ ವಿಶೇಷಚೇತನರ ಏಳಿಗೆಗಾಗಿ ಶ್ರಮಿಸುತ್ತಿರುವ ಸಂಘ ಸಂಸ್ಥೆಗಳ ಆಶ್ರಯದಲ್ಲಿ ಭಾರತ ಸರ್ಕಾರದಿಂದ ಈ ಕಾರ್ಯಕ್ರಮ ನಡೆಯಿತು.

ಈ ಸಂದರ್ಭದಲ್ಲಿ ನಾಡೋಜ ಪ್ರೊ. ಪಿ. ಕೃಷ್ಣ, ಶಾಸಕರಾದ ಪಿ. ರವಿಕುಮಾರ್ ಗೌಡ ಗಣಿಗ, ಅಪರ ಜಿಲ್ಲಾಧಿಕಾರಿ ಡಾ. ಎಚ್. ಎಲ್. ನಾಗರಾಜು, ಡಾ. ಎಚ್.ಪಿ. ಮಂಜುಳಾ ಹಾಗೂ ಡಾ.ಎಂ.ಎಸ್. ಚೆಲುವರಾಜು ಹಾಜರಿದ್ದರು.



## ಆಡು ಮುಟ್ಟದ ಸೊಪ್ಪಿಲ್ಲ — ವೂಡೇ ಪಿ. ಕೃಷ್ಣ

# ವೂಡೇಪಿ ಕೃಷ್ಣರವರ ಜೊತೆಜೊತೆಯಲ್ಲೇ ಸಾಗುತ್ತಿರುವ ಪತ್ನಿ ಶ್ರೀಮತಿ ಸವಿತಾರವರು

ಪರಿಚಯ

ಸಾಮಾನ್ಯವಾಗಿ ಸಭೆ ಸಮಾರಂಭಗಳಲ್ಲಿ, ಮಹಿಳಾ ಕಾರ್ಯಕ್ರಮಗಳಲ್ಲಿ ಲೋಕರೂಡಿಯಾಗಿ ಕೇಳಿಬರುವ ಒಂದು ನಿರಂತರವಾದ ಮಾತು ಪ್ರತಿಯೊಬ್ಬ ಪುರುಷನ ಸಾಧನೆ, ಕೀರ್ತಿ, ಗೌರವದ ಹಿಂದೆ ಮಹಿಳೆಯ ಪಾತ್ರ ಬಹಳ ಮಹತ್ವದ ಮತ್ತು ಮುಖ್ಯವಾದ ಪಾತ್ರ ವಹಿಸುತ್ತದೆ ಎಂದು ಹೇಳುತ್ತಾರೆ. ನಾವು ಸಹ ಕೇಳುತ್ತೇವೆ. ಆದರೆ ವೂಡೇಪಿ ಕೃಷ್ಣರವರ ಹಿಂದೆ ಅವರ ಪತ್ನಿ ಶ್ರೀಮತಿ ಸವಿತಾ ಮೇಡಂರವರ ವೂಡೇಪಿ ಕೃಷ್ಣರವರ ಸಾಧನೆ ಗೌರವದ ಹಿಂದೆ ಇದ್ದು ಗಟ್ಟಿಯಾಗಿ ಇದ್ದರೂ ಇವರು ಸಹ ವೂಡೇಪಿರವರಂತೆ ಸಮಾಜದ ಮುಖ್ಯ ವಾಹಿನಿಯಲ್ಲಿ ವೂಡೇಪಿರವರಂತೆ ಒಬ್ಬ ಮಹಿಳೆಯಾಗಿ ದುಡಿಯುತ್ತಿದ್ದಾರೆ.

ಇದರ ಅರ್ಥ ಕೇವಲ ಒಬ್ಬ ಹೆಣ್ಣು ಮಗಳು ಮದುವೆಯಾಗಿ ತನ್ನ ಗಂಡನ ಮನೆ ಸೇರಿದ ನಂತರ ತನ್ನ ಗಂಡನ ಎಲ್ಲಾ ಆಗು ಹೋಗುಗಳು, ಕಷ್ಟ ಸುಖಗಳು, ಹೀಗೆ ಹತ್ತು ಹಲವು ರೀತಿಯ ಕೆಲಸ ಕಾರ್ಯಗಳ ಜೊತೆಗಿದ್ದು ಅವರ ಆರೋಗ್ಯದ ಕಡೆಗೆ ಹೆಚ್ಚಿನ ಗಮನ ಕೊಡುವುದು ಸಾಮಾನ್ಯ ಸಂಗತಿ, ಲೋಕರೂಡಿಯಾಗಿ ಹೆಣ್ಣುಮಕ್ಕಳು ಮದುವೆಯಾಗಿ ಗಂಡನ ಮನೆಗೆ ಹೋಗಿ ನಾಲ್ಕು ಗೋಡೆಗಳ ಮಧ್ಯೆ ಗಂಡ, ಅತ್ತೆ, ಮಾವ ಇನ್ನಿತರ ಕುಟುಂಬದ ಸೇವೆಯನ್ನು ಮಾಡಿಕೊಂಡಿರಬೇಕೆಂಬುದು ಒಂದು ಪ್ರತೀತಿ, ಆದರೆ ನಮ್ಮ ವೂಡೇ ಪಿ ಕೃಷ್ಣರವರ ಪತ್ನಿಯವರು ನಾನು ನನ್ನ ಪತಿಯ ಶ್ರೇಯೋಭಿವೃದ್ಧಿಗಾಗಿ, ಅವರ ಎಲ್ಲಾ ಬೇಕು ಬೇಡಗಳನ್ನು ಅವರ ಏಳಿಗೆಯನ್ನು ಸಮಾಜದಲ್ಲಿ ಗೌರವವನ್ನು ಸಂಪಾದಿಸಲು ಅವರ ಜೊತೆಗೆ ಸದಾ ನಾನು ಇದ್ದು ಅವರಿಗೆ ಎಲ್ಲಾ ರೀತಿಯ ನನ್ನ ಸಹಕಾರ, ಪ್ರೀತಿ ವಿಶ್ವಾಸವು ಇದ್ದೇ ಇರುತ್ತದೆ, ಅದು ನನ್ನ ಸೇವೆ, ನನ್ನ ಧರ್ಮವು ಹೌದು. ಆದರೆ ನಾನು ಸಹ ಒಬ್ಬ ಹೆಣ್ಣಾಗಿ ಕೇವಲ ಗಂಡನ ಏಳಿಗೆ ಮತ್ತು ಹೆಸರಿನಿಂದ ನಾನು ವೂಡೇಪಿ ಕೃಷ್ಣರವರ ಪತ್ನಿ ಎಂಬುವುದಕ್ಕಿಂತ ನಾನು ಸಮಾಜದ ಮುಖ್ಯವಾಹಿನಿಯಲ್ಲಿ ಪತಿಯವರಂತೆ ನಾನು ಏನಾದರೂ ಅಲ್ಪ ಸ್ವಲ್ಪ ಸೇವೆಯನ್ನು ಅದು ಯಾವುದೇ ಕ್ಷೇತ್ರವಾಗಿರಬಹುದು, ಶಿಕ್ಷಣ ಕ್ಷೇತ್ರಗಳಾಗಿರಬಹುದು, ಸಾಮಾಜಿಕ ಕ್ಷೇತ್ರವಾಗಿರಬಹುದು, ಧಾರ್ಮಿಕ ಕ್ಷೇತ್ರವಾಗಿರಬಹುದು ಅಥವಾ ದೀನ ದಲಿತರ ಕೆಲಸವಾಗಿರಬಹುದು ಏನಾದರೂ ಅಲ್ಪ ಸ್ವಲ್ಪ ಸೇವೆಯನ್ನು ಮಾಡುತ್ತಾ ಇದ್ದಾಗ ಮಾತ್ರ ನಾನು ವೂಡೇಪಿ ಕೃಷ್ಣರವರ ಪತ್ನಿಯಾಗಿದ್ದಕ್ಕೂ ಸಾರ್ಥಕವಾಗುತ್ತದೆ. ಅದು ಬಿಟ್ಟು ಪುರುಷನ ಹಿಂದೆ ಪತ್ನಿಯ ಶ್ರಮ, ಸಹಕಾರ ಇದೆ ಎಂದು ಹೇಳುತ್ತಾ ಹೋದರೆ, ನಾವು ಎಂದು ಸಮಾಜದ ಮುಖ್ಯವಾಹಿನಿಗೆ ಬರಲು ಸಾಧ್ಯವಿಲ್ಲ ಮಹಿಳೆಯ ಸಾಧನೆ ಕೇವಲ ಪುರುಷನ ಹಿಂದೆ ಮಹಿಳೆಯೊಬ್ಬರು ಇದ್ದಾಳೆ ಎಂಬ ಅರ್ಥಕ್ಕೆ ಪದಕ್ಕೆ ಮಾತ್ರ ಸೀಮಿತವಾಗಿರುತ್ತದೆ. ಹೀಗಾಗಿ ನಾನು ಸಹ ನನ್ನ ಪತಿಯವರ ಎಲ್ಲಾ ಬೆಳವಣಿಗೆಯ ವಿಚಾರದಲ್ಲಿ ಅವರಿಗೆ ನನ್ನ ಸಂಪೂರ್ಣ ಸಹಕಾರ ಇದ್ದೇ ಇರುತ್ತದೆ, ಹಾಗೆಯೇ ನನಗೂ ವೂಡೇಪಿ ಕೃಷ್ಣರವರ ಪತ್ನಿಯಾಗಿರುವುದು ಹೆಮ್ಮೆ ಹಾಗೂ ನಾನು ನನ್ನ ಪತಿಯ ಜೊತೆಯಲ್ಲಿಯೇ ಸಮಾಜ ಸೇವೆ ಮಾಡುತ್ತಾ ಸಮಾಜದ ಮುಖ್ಯವಾಹಿನಿಯಲ್ಲಿ ಒಬ್ಬ ಮಹಿಳೆಯಾಗಿ ನಾನು ಸಹ ಇಂದು ಸಮಾಜದಲ್ಲಿ ನನ್ನ ಕೈಲಾದ ಮಟ್ಟಿಗೆ ಅಲ್ಪಸ್ವಲ್ಪ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದೇನೆ. ಮುಂದೆಯೂ ಮಾಡುತ್ತೇನೆ ಇದಕ್ಕೆ ಸ್ಫೂರ್ತಿ ನನ್ನ ಪತಿ ನಾಡೋಜ ವೂಡೇಪಿ ಕೃಷ್ಣರವರು ಎಂದು ಹೇಳಲು ನನಗೆ ಅತ್ಯಂತ ಹೆಮ್ಮೆಯೆನಿಸುತ್ತದೆ. ಹೀಗಾಗಿಯೇ ನನ್ನ ಜೀವನದ ಬದುಕಿನಲ್ಲಿ ಒಬ್ಬ ಪುರುಷನ ಹಿಂದೆ ಒಬ್ಬ ಮಹಿಳೆಯೊಬ್ಬಳು ಇದ್ದಾಳೆ ಎನ್ನುವುದಕ್ಕಿಂತ ಒಬ್ಬ ಮಹಿಳೆಯ ಹಿಂದೆ ಒಬ್ಬ ಪುರುಷನಿದ್ದಾನೆ ಎಂಬುದಕ್ಕೆ ನಾನೇ ಒಳ್ಳೆಯ ಉದಾಹರಣೆ ಎಂದು ಹೇಳಲು ಬಹಳ ಹೆಮ್ಮೆಯೆನಿಸುತ್ತದೆ.

ಮುಂದುವರೆದು ವೂಡೇಪಿರವರ ಪತ್ನಿ ಶ್ರೀಮತಿ ಸವಿತಾರವರು ಹೇಳುವಂತೆ ನನ್ನ ಪತಿ ಕೃಷ್ಣರವರು ಇತರರಿಗಿಂತ ವಿಭಿನ್ನ ಸ್ವಭಾವದವರು, ಗುಣದವರು ಎನ್ನುವುದನ್ನು ಬಿಟ್ಟರೆ ಬೇರೆ ಯಾವುದು ನನಗೆ ಅವರ ಬಗ್ಗೆ ಅಷ್ಟಾಗಿ ಗೊತ್ತಿರಲಿಲ್ಲ.. ಯಾವಾಗ ನಾನು ಅವರನ್ನು ಮದುವೆಯಾದೆನೋ ಅನಂತರ ಇವರ ವ್ಯಕ್ತಿತ್ವ ಇವರ ಗುಣ, ಇವರು ಮೃದು ಮನಸ್ಸು ಹೇಗಿದೆ, ಇವರ ಸ್ವಭಾವ ಹೇಗಿದೆ ಎಂಬುದನ್ನು ನಾನು ಮದುವೆಯಾದ ನಂತರ ನಿಧಾನವಾಗಿ, ಹಂತಹಂತವಾಗಿ ತಿಳಿಯುತ್ತಾ ಹೋಯಿತು. ಹಾಗೆಯೇ ನನ್ನ ಪತಿಯ ಬಗ್ಗೆ ಇದ್ದ ಗೌರವ, ಪ್ರೀತಿ, ವಿಶ್ವಾಸ ದಿನೇ ದಿನೇ ಹೆಚ್ಚುತ್ತಲೇ ಹೋಯಿತು, ಜೊತೆಗೆ ವಿವಾಹದ ನಂತರ ನನ್ನ ಪತಿಯವರ ಸಹಕಾರ, ಮಾರ್ಗದರ್ಶನದಿಂದ ನಾನು ಸ್ನಾತಕೋತ್ತರ ಪದವಿಯನ್ನು ಪಡೆಯಲು ಸಾಧ್ಯವಾಯಿತು. ಇಲ್ಲಿಯೂ ಸಹ ನನ್ನ ಮುಂದಿನ ಸ್ನಾತಕೋತ್ತರ ಪದವಿ ಪಡೆಯಲು ನನ್ನ ಪತಿಯವರ ಸಹಕಾರ, ಪ್ರೋತ್ಸಾಹ ಹೆಚ್ಚಿನದಾಗಿತ್ತು. ಇವರ ಸಹಕಾರದಿಂದಲೇ ನಾನು ಮದುವೆಯ ನಂತರ ಸ್ನಾತಕೋತ್ತರ ಪದವಿಯನ್ನು ಪಡೆಯಲು ಸಾಧ್ಯವಾಯಿತು. ಕೇವಲ ಉನ್ನತ ಮಟ್ಟದ ಶಿಕ್ಷಣವನ್ನು ಪಡೆದರೆ ಸಾಲದು, ಪಡೆದ ಶಿಕ್ಷಣವನ್ನು ಸರಿಯಾದ ರೀತಿಯಲ್ಲಿ ಉಪಯೋಗಿಸಿಕೊಂಡು ನಾಲ್ಕಾರು ಜನರಿಗೆ ಉಪಯೋಗವಾಗುವಂತೆ ಏನಾದರೂ ಮಾಡು ಎಂದು ನನ್ನ ಪತಿಯವರು ಆಗಾಗ್ಗೆ ಹೇಳುತ್ತಿದ್ದರು, ಹೀಗಿರುವಾಗ ಒಮ್ಮೆ ನನ್ನ ಪತಿಯವರೆ ನನ್ನೊಂದಿಗೆ ಪ್ರಸ್ತಾಪಮಾಡಿ ಹೇಗೂ ನಿನಗೆ ಒಳ್ಳೆಯ ಶಿಕ್ಷಣವಿದೆ, ನಿನಗೆ ಏನನ್ನಾದರೂ ಸಾಧಿಸುವ ಛಲ ನಿನ್ನಲಿದೆ, ಒಬ್ಬ ಮಹಿಳಾ ಉದ್ಯಮಿಯಾಗಿ ಏನನ್ನಾದರೂ ಮಾಡು ಎಂದು ಹೇಳಿ ನನ್ನಲ್ಲಿ ಆತ್ಮಸ್ಥೈರ್ಯ, ಪ್ರೀತಿ ವಿಶ್ವಾಸ ತುಂಬಿದರು. ಈ ನಿಟ್ಟಿನಲ್ಲಿ ನನ್ನ ಪತಿಯ ಸಹಕಾರ, ಮಾರ್ಗದರ್ಶನದಲ್ಲಿ ನಾನು ಒಬ್ಬ ಮಹಿಳಾ ಉದ್ಯಮಿಯಾಗುವ ನಿಟ್ಟಿನಲ್ಲಿ ಮಂಡ್ಯ ಜಿಲ್ಲೆಯಲ್ಲಿ ಒಂದು ಸಣ್ಣ ಉದ್ಯಮವೊಂದನ್ನು ಸ್ಥಾಪಿಸಿ ಇದರ ಉಸ್ತುವಾರಿ, ಜವಾಬ್ದಾರಿಯನ್ನೂ ನಾನು ನೋಡಿಕೊಳ್ಳುವಂತೆ ಹೇಳಿದ್ದು ಇಂದು ಒಂದು ಉದ್ಯಮದ ಸಂಸ್ಥೆಯು ಚೆನ್ನಾಗಿ ನಡೆಯುತ್ತಿದ್ದು ಇದರಿಂದ ಹಲವರಿಗೆ ಒಳ್ಳೆಯದಾಗಿರುತ್ತದೆ ಎಂದು ಹೇಳುತ್ತಾ ಇವೆಲ್ಲದಕ್ಕೂ ನನ್ನ ಹಿಂದಿರುವ ಶಕ್ತಿ ನನ್ನ ಪತಿ ಎಂದು ತುಂಬು ಹೃದಯದಿಂದ ಶ್ರೀಮತಿ ಸವಿತಾರವರು ಹೇಳಿಕೊಳ್ಳುತ್ತಾರೆ.

ಇದರ ಜೊತೆಗೆ ಶಾರದಾ ಮಠದವರು ನಡೆಸುವ ನಿವೇದಿತಾ ಶಾಲೆಯಲ್ಲಿ ನಾನು ಸ್ವಯಂ ಸೇವಾ ಶಿಕ್ಷಕಿಯಾಗಿ ಸೇವೆ ಸಲ್ಲಿಸಲು ಸಹ ನನ್ನ ಪತಿ ವೂಡೇಪಿ ಕೃಷ್ಣರವರು ಹೇಳಿದ್ದು, ಪ್ರೋತ್ಸಾಹಿಸಿದ್ದು ನಿಜವಾಗಿಯೂ ನನಗೆ ನಾನು ಸಹ ಒಂದು ಸಂಸ್ಥೆಯಲ್ಲಿ ಸ್ವಯಂಸೇವಕಿ ಶಿಕ್ಷಕಿಯಾಗಿ ಸೇವೆ ಸಲ್ಲಿಸುತ್ತಿರುವುದು ನನ್ನ ಜೀವನದ ಅತ್ಯಂತ ಸಂತೋಷದ ದಿನಗಳಾಗಿ ಕಳೆಯುತ್ತಿದ್ದೇನೆ. ಆ ಸ್ವಯಂ ಸೇವಕಿ ಶಿಕ್ಷಕಿಯ ಕೆಲಸ ಇಂದು ನಾನು ಒಬ್ಬ ಮಹಿಳೆಯಾಗಿ, ನನ್ನನ್ನು ನಾನು ಸಮಾಜದ ಮುಖ್ಯವಾಹಿನಿಯಲ್ಲಿ ಗುರ್ತಿಸಿ ಕೊಳ್ಳುತ್ತಿರುವುದಕ್ಕೆ ಕಾರಣ ನನ್ನ ಪತಿ ವೂಡೇಪಿ ಕೃಷ್ಣರವರು ಎಷ್ಟೇ ಆಗಲಿ ನನ್ನ ಪತಿಯವರು ಗಾಂಧೀಜಿಯವರ ಮತ್ತು ಡಾ. ಬಿ.ಆರ್. ಅಂಬೇಡ್ಕರ್‌ರವರ ಅನುಯಾಯಿ ಯಲ್ಲವೆ

ಇನ್ನು ತನ್ನ ಪತಿಯವರ ಬಗ್ಗೆ ವೂಡೇಪಿಯವರ ಪತ್ನಿ ಶ್ರೀಮತಿ ಸವಿತಾರವರು ತುಂಬು ಹೃದಯದಿಂದ ಅಂತರಾಳದಿಂದ ಮನದಾಳದಿಂದ ಹೇಳುತ್ತಾರೆ, ನನ್ನ ಪತಿಯವರು ಯಾವುದೇ ರೀತಿಯ ನಾಟಕೀಯವಿಲ್ಲದೆ, ಹಿಂದೆ ಮುಂದೆ ಮಾತನಾಡುವ ವ್ಯಕ್ತಿಯಲ್ಲ, ಏನು ಹೇಳಬೇಕೋ, ಏನು ಮಾಡಬೇಕೋ, ಯಾವ ಸಂದರ್ಭದಲ್ಲಿ ಏನು ಮಾಡಬೇಕು, ಏನು ಹೇಳಬೇಕು ಎಂಬುದನ್ನು ನೇರವಾಗಿ ಹೇಳುವ ವ್ಯಕ್ತಿ, ನನ್ನ ಪತಿ ಅತ್ಯಂತ ಸರಳ ವ್ಯಕ್ತಿ, ಸರಳ ಸ್ವಭಾವದವರು, ಹೀಗಾಗಿಯೇ ಸಮಾಜದಲ್ಲಿ ನನ್ನ ಪತಿಯನ್ನು ಹೇಗೆ ನೋಡುತ್ತಾರೋ, ಹೇಗೆ ಕಾಣುತ್ತಾರೋ ಅದೇ ಅವರ ಮೂಲ ವ್ಯಕ್ತಿತ್ವ ಒಳಗೊಂದು, ಹೊರಗೊಂದು, ಮುಖ ಸ್ತುತಿಗೋಸ್ಕರ ಅವರಿವರನ್ನು ಮೆಚ್ಚಿಸಲು, ಎಂದು ಮಾತನಾಡುವ ಜಾಯಮಾನದವರಲ್ಲ ಸಾಮಾನ್ಯವಾಗಿ ಅವರು ತುಂಬಾನೆ ಸೌಮ್ಯ ಸ್ವಭಾವದವರು, ಉಡುಗೆ ತೊಡುಗೆ ಆಹಾರ ಪದ್ಧತಿ, ತನ್ನ ನಡುವಳಿಕೆ ಪ್ರತಿಯೊಂದರಲ್ಲೂ ಅವರು ಬಹಳ ಸರಳ, ಸಾಧಾರಣ ವ್ಯಕ್ತಿ, ಒಬ್ಬ ಮನುಷ್ಯ ಬದುಕಿಗೆ ಜೀವನಕ್ಕೆ ಏನು ಬೇಕೋ ಎಷ್ಟು ಬೇಕೋ ಅಷ್ಟೇ ಸಾಕು, ಅದಕ್ಕಿಂತ ಹೆಚ್ಚಿನದು ಬೇಡ, ಅವರಿಗೆ ವಿವಿಧ ರೀತಿಯ ಆಶೆ ಇಲ್ಲ, ಅಷ್ಟೇ ಅಲ್ಲ ಅವರ ಕೈಗೆ ಒಂದೊಳ್ಳೆಯ ಗಡಿಯಾರ (ವಾಚ್) ಅನ್ನು ಕಟ್ಟಿಕೊಳ್ಳುವುದಿಲ್ಲ. ಹೀಗಾಗಿ ಅವರಿಗೆ ಯಾವ ವಸ್ತು ಅಗತ್ಯವಿದೆಯಾ ಅಂತಹ ವಸ್ತುಗಳನ್ನು ಮಾತ್ರ ಕಂಡುಕೊಳ್ಳುತ್ತಾರೆ, ಅನಗತ್ಯವಾಗಿ ಕೈಗೆ ಸಿಕ್ಕಿದನ್ನು ಖರೀದಿಸಲು ಎಂದು ಇಷ್ಟಪಟ್ಟವರಲ್ಲ.

ಹಾಗೆಯೇ ನಾನು ಕಂಡಂತೆ ಇವರ ಉಡಿಗೆ ಖಾದಿ ಬಟ್ಟೆ ಬಿಟ್ಟರೆ ಬೇರೆ ಯಾವುದೇ ರೀತಿಯ ಬಟ್ಟೆಗಳನ್ನು ಧರಿಸುವುದಿಲ್ಲ, ಜೊತೆಗೆ ವಿವಿಧ ಸಂಸ್ಥೆಗಳಲ್ಲಿ, ಕಛೇರಿಗಳಲ್ಲಿ ಸ್ವಯಂ ಪ್ರೀತಿಯಿಂದ ನಿಸ್ವಾರ್ಥತೆಯಿಂದ ದುಡಿಯುತ್ತಿದ್ದರು, ಎಷ್ಟೇ ಕೆಲಸ ಕಾರ್ಯಗಳು ಇದ್ದರು ಆ ಕೆಲಸಗಳನ್ನು ಅಲ್ಲಿಯೇ ಮುಗಿಸಿ ಮನೆಗೆ ಬರುವುದು ಇವರ ಪದ್ಧತಿ ಇವರು ಎಂದು ಕಛೇರಿಯ ಕೆಲಸ ಕಾರ್ಯಗಳನ್ನ ಮನೆಗೆ ತಂದು ಕೆಲಸದ ಒತ್ತಡವನ್ನು ಮನೆಯವರ ಮೇಲೆ ತೋರಿಸಿದವರಲ್ಲ, ಕುಟುಂಬದವರ ಮೇಲೆ ಒತ್ತಡವನ್ನು ಹೇರಿದವರಲ್ಲಿ ಹೀಗಾಗಿಯೇ ಮನೆಯಲ್ಲಿ ಎಂದೂ ನೆಮ್ಮದಿಯನ್ನು ಕೆಡಿಸಿಕೊಂಡವರಲ್ಲ

ನಾನು ನನ್ನ ಪತಿಯವರನ್ನು ನೋಡಿದಂತೆ ಮದುವೆಯಾದಾಗಿನಿಂದ ಹಿಡಿದು ಇವತ್ತಿನ ತನಕ ಯಾರೇ ಆಗಿರಲಿ, ಯಾವುದೇ ಸಮುದಾಯದವರಾಗಲಿ ಯಾವುದೇ ಕೆಲಸವಾಗಿರಲು ಆರ್ಥಿಕವಾಗಿ ಕಷ್ಟದಿಂದ ಬಳಲುತ್ತಿರುವವರು ಬಂದು ಇವರ ಹತ್ತಿರ ಕಷ್ಟವಿದೆ ಎಂದು ಹೇಳಿ ಸಹಾಯವನ್ನು ಕೇಳಿದಾಗ ಯಾರಿಗೂ ನಿರಾಶೆಗೊಳಿಸಿಲ್ಲ, ತಮ್ಮ ಕೈಲಾದ ಮಟ್ಟಿಗೆ ಸಹಾಯ ಮಾಡುತ್ತಾರೆ, ಹೀಗಾಗಿಯೆ ಇಂದು ಅನೇಕ ಬಡಮಕ್ಕಳಿಗೆ, ದೀನ ದಲಿತರ ಬಡಮಕ್ಕಳಿಗೆ ಶಿಕ್ಷಣವನ್ನು ಕೊಡಿಸುವಲ್ಲಿ ಎಲೆ ಮರೆಯ ಕಾಯಿಯಂತೆ ದುಡಿಯುತ್ತಿದ್ದಾರೆ.

ಹಾಗೆಯೇ ಓದಿನ ಮೇಲೆ, ಶಿಕ್ಷಣದ ಬಗ್ಗೆ ಅಪಾರವಾದ ಗೌರವ, ಪ್ರೀತಿ, ವಿಶ್ವಾಸ, ಬರಹಗಾರರನ್ನು, ಸಾಹಿತಿಗಳನ್ನು ಲೇಖಕರನ್ನು, ಪತ್ರಕರ್ತರನ್ನು ಅತೀ ಹೆಚ್ಚಿನ ಗೌರವದಿಂದ ಕಾಣುವ ವ್ಯಕ್ತಿ ನನ್ನ ಪತಿಯವರು.

ನನ್ನ ವಿವಾಹವಾಗಿದ್ದು 1991ರಲ್ಲಿ ಅಂದಿನಿಂದ ಇಂದಿನ ತನಕ ನಮ್ಮ ಬದುಕು, ನಮ್ಮ ಜೀವನ ತುಂಬಾ ಸಂತೋಷವಾಗಿದೆ, ಒಂದೇ ಒಂದು ಮಾತಿನಲ್ಲಿ ಹೇಳಬೇಕೆಂದರೆ ವೂಡೇಪಿ ಕೃಷ್ಣರವರಂತ ಪತಿಯನ್ನು ಪಡೆದಿರುವುದು ನನ್ನ ಸೌಭಾಗ್ಯ, ಎಷ್ಟೋ ಜನ್ಮದ ಪುಣ್ಯದ ಫಲದಿಂದ ಇಂದು ಅಂತಹ ಪತಿಯನ್ನು ಪಡೆದಿರುವುದಕ್ಕೆ ನಾನೇ ಧನ್ಯ ಎಂದು ಬಹಳ ವಿನಮ್ರವಾಗಿ ಹೇಳುತ್ತಾರೆ. ವೂಡೇಪಿರವರ ಪತ್ನಿ ಶ್ರೀಮತಿ ಸವಿತಾ ಮೇಡಂರವರು.

ಒಟ್ಟಾರೆ ನಮ್ಮ ಆದಿಜಾಂಬವ ಜಾಗೃತಿ ಪತ್ರಿಕೆಯಲ್ಲಿ ಇಂತಹ ಒಬ್ಬ ಮಹಾನ್ ಸಾಧಕರ ಮತ್ತು ಅವರ ಕುಟುಂಬದವರ ಕುರಿತು ಪತ್ರಿಕೆಯಲ್ಲಿ ಕಳೆದ ಒಂದು ವರ್ಷದಿಂದ ಅಂಕಣದ ರೂಪದಲ್ಲಿ ಪ್ರತಿ ಹದಿನೈದು ದಿನಗಳಿಗೊಮ್ಮೆ ಪ್ರಕಟಗೊಂಡು ಬರುತ್ತಿರುವ ದೇಶ, ವಿದೇಶಗಳಲ್ಲಿಯೂ ಪತ್ರಿಕೆಯ ಓದುಗರು ಸಹ ವೂಡೇಪಿ ರವರ ಅಂಕಣವನ್ನು ಓದಿ ಬಹಳವಾಗಿ ಮೆಚ್ಚಿರುತ್ತಾರೆ.

ಇಂತಹ ಕುಟುಂಬದ ವ್ಯಕ್ತಿಯ ಕುರಿತಾದ ಅಂಕಣವನ್ನು ನಾನು ಬರೆಯುತ್ತಿದ್ದೇನೆ ಎಂದರೆ ಒಂದು ಕಡೆ ಸಂತೋಷ ಮತ್ತೊಂದು ಕಡೆ ಭಯ. ಏಕೆಂದರೆ ವೂಡೇಪಿ ಕೃಷ್ಣ ಮತ್ತು ಅವರ ಮನೆತನ ಒಂದು ರೀತಿಯಲ್ಲಿ ಆಲದ ಮರ ಇದ್ದಹಾಗೆ. ಅಂತಹ ಮರದ ಬಗ್ಗೆ ನಾನು ಏನು ಬರೆದು ಬಿಡುತ್ತೇನೋ, ಎಲ್ಲಿ ವೂಡೇಪಿಯವರು ನನಗೆ ಬಯ್ಯುತ್ತಾರೋ ಎಂಬ ಭಯ ನನಗೆ ಸದಾ ಕಾಡುತ್ತಿರುತ್ತದೆ.

ಆದರೂ ಪ್ರತಿ ಸಂಚಿಕೆಯನ್ನು ವೂಡೇಪಿಯವರು ಓದಿ ತುಂಬು ಹೃದಯದಿಂದ ಗಂಗಾಧರ್ ತುಂಬಾ ಚೆನ್ನಾಗಿ ಬರೆಯುತ್ತಿದ್ದೀರಿ, ಬರೆಯಿರಿ, ಎಂದು ಪ್ರತಿ ಸಂಚಿಕೆ ಅವರ ಮನೆಗೆ ತಲುಪಿದ ತಕ್ಷಣ ಹೇಳುವ ಈ ಮಾತು ನನಗೆ ಆತ್ಮಸ್ಥೈರ್ಯ ತುಂಬುತ್ತಾ ವೂಡೇಪಿಯವರ ಅಂಕಣವನ್ನು ಬರೆಯಲು ಕುಳಿತಾಗ ಗೊತ್ತಿದ್ದು, ಗೊತ್ತಿಲ್ಲದೆ ಬರೆದು ಬಿಡುತ್ತೇನೆ ಅದನ್ನು ಓದುಗರ ಪ್ರೀತಿ ದಿನೇ ದಿನೇ ಹೆಚ್ಚಾಗುತ್ತಿರುತ್ತದೆ.

– ಸಂ

–ಮುಂದುವರೆಯುತ್ತದೆ

ಸಂಜೆವಾಣಿ Thursday 20 June 2024



ವಿಶ್ವಮಾನವ ರಾಷ್ಟ್ರಕವಿ ಕುವೆಂಪು ಕಲಾನಿಕೇತನ ವತಿಯಿಂದ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ರಂಗಭೂಮಿ, ಚಲನಚಿತ್ರ ನಟ ಹೊನ್ನವಳ್ಳಿ ಕೃಷ್ಣ ಅವರಿಗೆ ನಟಸಾರ್ವಭೌಮ ಡಾ. ರಾಜ್‌ಕುಮಾರ್ ಪ್ರಶಸ್ತಿ ನೀಡಿ ಗೌರವಿಸಲಾಯಿತು. ನಿರ್ಮಾಪಕ ಎಸ್.ಎ. ಚಿನ್ನೇಗೌಡ, ನಾಡೋಜ ಡಾ. ವೂಡೇ ಪಿ. ಕೃಷ್ಣ, ಸಾ.ರಾ. ಗೋವಿಂದು, ವ.ಚ. ಚನ್ನೇಗೌಡ, ನಟ ಶರತ್ ಲೋಹಿತಾಶ್ವ, ಗಾಯಕ ಕಿಕ್ಕೇರಿ ಕೃಷ್ಣಮೂರ್ತಿ, ಸಂಸ್ಥೆ ಅಧ್ಯಕ್ಷ ಕುವೆಂಪು ಪ್ರಕಾಶ್ ಮತ್ತಿತರರು ಇದ್ದಾರೆ.

# ಕನ್ನಡಪರ ನಿಜ ಹೋರಾಟಗಾರ ಡಾ.ರಾಜ್

**ನಟಸಾರ್ವಭೌಮ ರಾಜ್‌ಕುಮಾರ್ ಪ್ರಶಸ್ತಿ ಹೊನ್ನವಳ್ಳಿ ಕೃಷ್ಣಗೆ**

ಬೆಂಗಳೂರು: ಡಾ.ರಾಜ್‌ಕುಮಾರ್ ಅವರು ಕಲಾವಿದರಾಗಿ ಬೆಳೆಯುವ ಜೊತೆಗೆ, ಶ್ರೇಷ್ಠ ಕನ್ನಡಪರ ಹೋರಾಟಗಾರರಾಗಿ ಬೆಳೆದು ಕನ್ನಡ ಭಾಷೆಯ ಬಗ್ಗೆ ಜನರಲ್ಲಿ ಅಭಿಮಾನ ಹುಟ್ಟುವಂತೆ ಪ್ರಮುಖ ಕಾರಣಕರ್ತರಾದರು ಎಂಬುದನ್ನು ಎಂದಿಗೂ ಮರೆಯುವಂತಿಲ್ಲ ಎಂದು ಡಾ.ರಾಜ್‌ಕುಮಾರ್ ಅಭಿಮಾನಿ ಸಂಘದ ರಾಜ್ಯ ಘಟಕದ ಅಧ್ಯಕ್ಷ ಸಾ.ರಾ.ಗೋವಿಂದ್ ತಿಳಿಸಿದರು.

ಕುವೆಂಪು ಕಲಾನಿಕೇತನ ಹಾಗೂ ಸ್ನೇಹ ಶ್ರೀರಕ್ಷಾ ಸಂಗೀತ ನೃತ್ಯ ಸಾಂಸ್ಕೃತಿಕ ಅಕಾಡೆಮಿ ಸಹಯೋಗದೊಂದಿಗೆ ನಯನ ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಚಿತ್ರನಟ ಹೊನ್ನವಳ್ಳಿ ಕೃಷ್ಣ ಅವರಿಗೆ 'ನಟಸಾರ್ವಭೌಮ ಡಾ.ರಾಜ್‌ಕುಮಾರ್' ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದ ಅವರು, ಡಾ.ರಾಜ್‌ಕುಮಾರ್ ನಟನೆಗಿಂತ ಅವರು ನಡೆದುಕೊಳ್ಳುತ್ತಿದ್ದ ರೀತಿ ಜೊತೆಗೆ ಅವರ ಬದುಕು ಎಂದಿಗೂ ಅವಿಸ್ಮರಣೀಯವಾದದ್ದು ನನ್ನ ಸಾಕಷ್ಟು ಕನ್ನಡಪರ ಹೋರಾಟಗಳಿಗೆ ಅವರು ಸಹಕಾರ ನೀಡಿದ್ದರು ಎಂದು ತಿಳಿಸಿದರು.

ಬಿಎಚ್‌ಇಎಲ್, ಎಚ್‌ಎಎಲ್ ಸೇರಿ ಸರ್ಕಾರಿ ಸ್ವಾಮ್ಯದ ಕಾರ್ಖಾನೆ, ಕಂಪನಿಗಳಲ್ಲಿ ಕನ್ನಡಿಗರಿಗೆ ಸಿಗಬೇಕಾದ ಪ್ರಾತಿನಿಧ್ಯ ಸಿಗುತ್ತಿಲ್ಲ. ಇಂದಿಗೂ ಕನ್ನಡಿಗರಿಗೆ ಅನ್ಯಾಯವಾಗುತ್ತಿರುವುದು ವಾಸ್ತವ. ಅಂದಿನ ಕಾಲದಲ್ಲಿಯೇ ಈ ಪರಿಯನ್ನು ಮನಗಂಡು ಡಾ.ರಾಜ್‌ಕುಮಾರ್ ಅವರನ್ನು ಪ್ರತಿಭಟನೆಗೆಂದು ಆಹ್ವಾನಿಸಿದಾಗ ಬಿಎಚ್‌ಎಎಲ್ ಕಾರ್ಖಾನೆಗೆಂದು ಎಲ್ಲರೊಂದಿಗೆ ಪ್ರತಿಭಟನೆಯಲ್ಲಿ ಭಾಗವಹಿಸಿದ್ದು ವಿಶೇಷ. ಗೋಕಾಕ್ ಚಳವಳಿಯ ದಿನಗಳು ಮನಸ್ಸಿನಲ್ಲಿ ಹೆಚ್ಚು ಬೇರೂರಿದೆ ಎಂದು ತಿಳಿಸಿದರು.

ಶೇಷಾದ್ರಿಪುರ ಶಿಕ್ಷಣ ದತ್ತಿ ಟ್ರಸ್ಟ್ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಮಾತನಾಡಿ, ಎಂಜಿನಿಯರಿಂಗ್ ವ್ಯಾಸಂಗ ಮಾಡುತ್ತಿದ್ದ ವೇಳೆ ಗೋಕಾಕ್ ಚಳವಳಿಯಲ್ಲಿ ಭಾಗವಹಿಸಿದ್ದೆ. ಡಾ.ರಾಜ್‌ಕುಮಾರ್ ಕನ್ನಡಪರ ಹೋರಾಟಗಳಲ್ಲಿ ತೊಡಗಿಸಿಕೊಂಡಿದ್ದ ಬಗೆ ಎಂಥವರಿಗೂ ಸ್ಫೂರ್ತಿ ನೀಡುವಂತಹದ್ದು ಎಂದರು.

ಡಾ.ರಾಜ್‌ಕುಮಾರ್ ಮತ್ತು ಪಾರ್ವತಮ್ಮ ಅವರಿಗೆ ಹೊನ್ನವಳ್ಳಿ ಕೃಷ್ಣ ಅಂದರೆ ಅಚ್ಚುಮೆಚ್ಚು. ಹಾಗಾಗಿ ಹೊನ್ನವಳ್ಳಿ ಅವರು ಕಲಾಸೇವೆಯನ್ನು ಮಾಡುತ್ತಾ ಬಂದ ಕಾರಣದಿಂದ ಈ ಪ್ರಶಸ್ತಿ ಸಂದಿರುವುದು ವಿಶೇಷ ಎಂದು ಹೇಳಿದರು. ಚಲನಚಿತ್ರ ನಿರ್ಮಾಪಕ ಎಸ್.ಎ.ಚಿನ್ನೇಗೌಡ ಮಾತನಾಡಿದರು. ರಂಗಕರ್ಮಿ ಶರತ್ ಲೋಹಿತಾಶ್ವ, ಕಸಾಪ ಮಾಜಿ ಗೌರವ ಕಾರ್ಯದರ್ಶಿ ವ.ಚ. ಚನ್ನೇಗೌಡ, ಕುವೆಂಪು ಕಲಾನಿಕೇತನ ಅಧ್ಯಕ್ಷ ಕುವೆಂಪು ಪ್ರಕಾಶ್ ಇತರರಿದ್ದರು.



ಕುವೆಂಪು ಕಲಾನಿಕೇತನ ಹಾಗೂ ಸ್ನೇಹ ಶ್ರೀರಕ್ಷಾ ಸಂಗೀತ ನೃತ್ಯ ಸಾಂಸ್ಕೃತಿಕ ಅಕಾಡೆಮಿ ಸಹಯೋಗದೊಂದಿಗೆ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಚಿತ್ರನಟ ಹೊನ್ನವಳ್ಳಿ ಕೃಷ್ಣ ಅವರಿಗೆ 'ನಟಸಾರ್ವಭೌಮ ಡಾ.ರಾಜ್‌ಕುಮಾರ್' ಪ್ರಶಸ್ತಿಯನ್ನು ನಿರ್ಮಾಪಕ ಎಸ್.ಎ.ಚಿನ್ನೇಗೌಡ ಪ್ರದಾನ ಮಾಡಿದರು. ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ, ಸಾ.ರಾ. ಗೋವಿಂದ್, ವ.ಚ.ಚನ್ನೇಗೌಡ ಮತ್ತಿತರರಿದ್ದರು.

# ನಂ. 1 ಕನ್ನಡ ದಿನಪತ್ರಿಕೆ

VIJAYAVANI BENGALURU
ಬುಧವಾರ 19 ಜೂನ್ 2024
19 JUNE 2024

ನಯನ ಸಭಾಂಗಣದಲ್ಲಿ ಕುವೆಂಪು ಕಲಾನಿಕೇತನ ಹಾಗೂ ಸ್ನೇಹ ಶ್ರೀರಕ್ಷಾ ಸಂಗೀತ, ನೃತ್ಯ ಸಾಂಸ್ಕೃತಿಕ ಅಕಾಡೆಮಿ ಆಯೋಜಿಸಿದ್ದ ಸಾಂಸ್ಕೃತಿಕ ಉತ್ಸವದಲ್ಲಿ ಹಿರಿಯ ನಟ ಹೊನ್ನವಳ್ಳಿ ಕೃಷ್ಣ ಅವರಿಗೆ 'ನಟ ಸಾರ್ವಭೌಮ ಡಾ. ರಾಜ್‌ಕುಮಾರ್ ಪ್ರಶಸ್ತಿ' ಪ್ರದಾನ ಮಾಡಲಾಯಿತು. ನಿರ್ಮಾಪಕ ಎಸ್.ಎ. ಚಿನ್ನೇಗೌಡ, ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ, ಚಲನಚಿತ್ರ ವಾಣಿಜ್ಯ ಮಂಡಳಿ ಮಾಜಿ ಅಧ್ಯಕ್ಷ ಸಾ.ರಾ. ಗೋವಿಂದ್, ನಟ ಲೋಹಿತಾಶ್ವ ಇತರರಿದ್ದರು.



ಪ್ರಜಾವಾಣಿ
ಬುಧವಾರ ● ಜೂನ್ 19, 2024



## ಪ್ರಶಸ್ತಿ ಪ್ರದಾನ

ನಗರದ ನಯನ ಸಭಾಂಗಣದಲ್ಲಿ ಮಂಗಳವಾರ ವಿಶ್ವಮಾನವ ರಾಷ್ಟ್ರ ಕವಿ ಕುವೆಂಪು ಕಲಾನಿಕೇತನ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಕನ್ನಡ ಚಲನಚಿತ್ರ ನಟ ಹೊನ್ನವಳ್ಳಿ ಕೃಷ್ಣ ಮತ್ತು ಜಲಜಾ ಹೊನ್ನವಳ್ಳಿ ಕೃಷ್ಣ ದಂಪತಿಗೆ 'ನಟಸಾರ್ವಭೌಮ ಡಾ. ರಾಜ್‌ಕುಮಾರ್ ಪ್ರಶಸ್ತಿ' ಪ್ರದಾನ ಮಾಡಲಾಯಿತು. ನಟರಾದ ಡಿಂಗ್ರಿ ನಾಗರಾಜ್, ಶರತ್ ಲೋಹಿತಾಶ್ವ, ವಿಶ್ವಮಾನವ ರಾಷ್ಟ್ರ ಕವಿ ಕುವೆಂಪು ಕಲಾನಿಕೇತನ ಅಧ್ಯಕ್ಷ ಕುವೆಂಪು ಪ್ರಕಾಶ್, ಗಾಯಕ ಕಿಕ್ಕೇರಿ ಕೃಷ್ಣಮೂರ್ತಿ, ಚಲನಚಿತ್ರ ನಿರ್ಮಾಪಕ ಎಸ್.ಎ. ಚನ್ನೇಗೌಡ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ವ.ಚ. ಚನ್ನೇಗೌಡ, ಡಾ. ರಾಜ್‌ಕುಮಾರ್ ಅಭಿಮಾನಿ ಸಂಘದ ಅಧ್ಯಕ್ಷ ಸಾ.ರಾ. ಗೋವಿಂದ್ ಭಾಗವಹಿಸಿದ್ದರು —ಪ್ರಜಾವಾಣಿ ಚಿತ್ರ

ಈ ಸಂಜೆ

Jun 19, 2024



ನಗರದ ನಯನ ಸಭಾಂಗಣದಲ್ಲಿ ವಿಶ್ವ ಮಾನವ ರಾಷ್ಟ್ರಕವಿ ಕುವೆಂಪು ಕಲಾನಿಕೇತನ ಸಂಸ್ಥೆಯಿಂದ ಹಿರಿಯ ರಂಗಕರ್ಮಿ, ಚಲನಚಿತ್ರನಟ ಹೊನ್ನವಳ್ಳಿ ಕೃಷ್ಣ ಅವರಿಗೆ ನಟಸಾರ್ವಭೌಮ ಡಾ.ರಾಜ್‌ಕುಮಾರ್ ಪ್ರಶಸ್ತಿ ನೀಡಿ ಗೌರವಿಸಲಾಯಿತು. ನಾಡೋಜ ಡಾ.ಪ್ರೊ. ಪಿ. ಕೃಷ್ಣ, ಡಾ. ರಾಜ್‌ಕುಮಾರ್ ಅಭಿಮಾನಿ ಸಂಘದ ಅಧ್ಯಕ್ಷ ಸಾ.ರಾ.ಗೋವಿಂದ್, ವಾ.ಚ.ಚನ್ನೇಗೌಡ, ಶರತ್ ಲೋಹಿತಾಶ್ವ, ಗಾಯಕರಾದ ಕಿಕ್ಕೇರಿ ಕೃಷ್ಣಮೂರ್ತಿ, ಕುವೆಂಪು ಕಲಾನಿಕೇತನ ಅಧ್ಯಕ್ಷರಾದ ಕುವೆಂಪು ಪ್ರಕಾಶ್ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ
ಸೋಮವಾರ 17.06.2024

## ನಿವೃತ್ತ ಐಪಿಎಸ್ ಅಧಿಕಾರಿ ಸಿ.ಚಂದ್ರಶೇಖರ್ ಅವರ ಕಾವೇರಿ ವಿವಾದ ಒಂದು ಐತಿಹಾಸಿಕ ಹಿನ್ನೋಟ ಕೃತಿ ಲೋಕಾರ್ಪಣೆ

# 'ಕಾವೇರಿ ನೀರು ಹಂಚಿಕೆಯಲ್ಲಿ ರಾಜ್ಯಕ್ಕೆ ಅನ್ಯಾಯ'

### ವಿವಾದದ ಬಗ್ಗೆ ರಾಜ್ಯದಿಂದ ಪ್ರಬಲ ವಾದ ಮಂಡನೆ ಆಗಿಲ್ಲ | ಕೇಂದ್ರದಿಂದಲೂ ರಾಜ್ಯಕ್ಕೆ ನ್ಯಾಯ ಸಿಕ್ಕಿಲ್ಲ: ನ್ಯಾ.ಗೋಪಾಲಗೌಡ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಕಾವೇರಿ ನದಿ ನೀರು ಹಂಚಿಕೆಗೆ ಸಂಬಂಧಿಸಿದಂತೆ ರಾಜ್ಯಕ್ಕೆ ಅನ್ಯಾಯವಾಗಿದೆ. ಮಳೆ ಪ್ರಮಾಣ, ಜನಸಂಖ್ಯೆ ಹೆಚ್ಚಳ ಮತ್ತಿತರ ವಿಚಾರಗಳ ಬಗ್ಗೆ ರಾಜ್ಯದಿಂದಲೂ ಪ್ರಬಲ ವಾದ ಮಂಡನೆಯಾಗಿಲ್ಲ. ಕೇಂದ್ರ ಸರ್ಕಾರ ಸಹ ರಾಜ್ಯಕ್ಕೆ ನ್ಯಾಯ ನೀಡುತ್ತಿಲ್ಲ ಎಂದು ಸುಪ್ರೀಂಕೋರ್ಟ್‌ನ ನಿವೃತ್ತ ನ್ಯಾಯಮೂರ್ತಿ ವಿ.ಗೋಪಾಲಗೌಡ ಅಭಿಪ್ರಾಯಪಟ್ಟಿದ್ದಾರೆ.

ಭಾನುವಾರ ಗಾಂಧಿ ಭವನದಲ್ಲಿ 'ಕಾಡುಮಲ್ಲೇಶ್ವರ ಗೆಳೆಯರ ಬಳಗ' ಸಹಯೋಗದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಅಭಿರುಚಿ ಪ್ರಕಾಶನ ಪ್ರಕಟಿಸಿದ ನಿವೃತ್ತ ಐಪಿಎಸ್ ಅಧಿಕಾರಿ ಸಿ.ಚಂದ್ರಶೇಖರ್ ಅವರ 'ಕಾವೇರಿ ವಿವಾದ ಒಂದು ಐತಿಹಾಸಿಕ ಹಿನ್ನೋಟ' ಕೃತಿ ಲೋಕಾರ್ಪಣೆಗೊಳಿಸಿ ಅವರು ಮಾತನಾಡಿದರು.



ಗಾಂಧಿ ಭವನದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ನಿವೃತ್ತ ಐಪಿಎಸ್ ಅಧಿಕಾರಿ ಸಿ.ಚಂದ್ರಶೇಖರ್ ಅವರ 'ಕಾವೇರಿ ವಿವಾದ ಒಂದು ಐತಿಹಾಸಿಕ ಹಿನ್ನೋಟ' ಕೃತಿಯನ್ನು ಸುಪ್ರೀಂ ಕೋರ್ಟ್ ನಿವೃತ್ತ ನ್ಯಾ.ವಿ.ಗೋಪಾಲ ಗೌಡ ಲೋಕಾರ್ಪಣೆಗೊಳಿಸಿದರು. ಬಿ.ಕೆ.ಶಿವರಾಂ, ಡಾ। ವೂಡೇ ಪಿ.ಕೃಷ್ಣ, ದಿನೇಶ್ ಅಮೀನ್‌ಮಟ್ಟು ಇದ್ದರು.

ತಮಿಳುನಾಡಿಗೆ ಕಾವೇರಿ ನೀರು ಹಂಚಿಕೆ ಕುರಿತ ಒಪ್ಪಂದದಿಂದ ರಾಜ್ಯಕ್ಕೆ ಅನ್ಯಾಯವಾಗಿದೆ. ನ್ಯಾಯ ಮಂಡಳಿಗೆ ಸದಸ್ಯರ ಆಯ್ಕೆಯಲ್ಲೂ ನ್ಯಾಯ ಸಿಕ್ಕಿಲ್ಲ. ಹೆಚ್ಚುತ್ತಿರುವ ಜನಸಂಖ್ಯೆ, ಮಳೆಯ ಪ್ರಮಾಣ, ಪರಿಸರ ಬದಲಾವಣೆ, ಕೃಷಿಗೆ ಬೇಕಾಗುವ ನೀರಿನ ಲೆಕ್ಕ, ಆರ್ಥಿಕ ನೀತಿ ಹೀಗೆ ಹಲವು ವಿಚಾರಗಳಲ್ಲಿ ರಾಜ್ಯದಿಂದ ಪ್ರಬಲ ವಾದ ಮಂಡನೆಯಾಗಿಲ್ಲ. ಕೇಂದ್ರ ಸರ್ಕಾರ ಕೂಡ ರಾಜ್ಯಕ್ಕೆ ನ್ಯಾಯ ನೀಡುತ್ತಿಲ್ಲ ಎಂದರು. ಕಾಡು ಮಲ್ಲೇಶ್ವರ ಗೆಳೆಯರ ಬಳಗ ಅಧ್ಯಕ್ಷ ಬಿ.ಕೆ.ಶಿವರಾಂ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ. ಕೃಷ್ಣ, ಪತ್ರಕರ್ತ ದಿನೇಶ್ ಅಮೀನ್ ಮಟ್ಟು ಉಪಸ್ಥಿತರಿದ್ದರು.

## 'ವಾದಕ್ಕಾಗಿ ₹142 ಕೋಟಿ ವೆಚ್ಚ ಸರಿಯಲ್ಲ'

ಕಾವೇರಿ ನೀರಿನ ಬಿಕ್ಕಟ್ಟು ಕುರಿತು ಚರ್ಚಿಸಲು ಕಳೆದ ವರ್ಷ ಮುಖ್ಯಮಂತ್ರಿ ಸಿದ್ದರಾಮಯ್ಯ ಅವರು ಸಭೆ ಕರೆದಿದ್ದರು. ಕಾವೇರಿ ವಿಚಾರದಲ್ಲಿ ವಾದ ಮಾಡಲು ವಕೀಲರಿಗೆ ₹142 ಕೋಟಿ ವೆಚ್ಚ ಮಾಡಲಾಗಿದೆ. ಈ ಹಣದಲ್ಲಿ ಮತ್ತೊಂದು ಅಣೆಕಟ್ಟೆ ನಿರ್ಮಿಸಬಹುದಾಗಿತ್ತು ಎಂದು ಸಭೆಗೂ ಮುನ್ನ ನಾನು ನೇರವಾಗಿಯೇ ಹೇಳಿದೆ. ಆಗ ಈ ವಿಚಾರವನ್ನು ಮತ್ತೊಮ್ಮೆ ಚರ್ಚಿಸೋಣ ಎಂದು ಸಿದ್ದರಾಮಯ್ಯ ಪ್ರತಿಕ್ರಿಯಿಸಿದರು ಎಂದು ನಿವೃತ್ತ ನ್ಯಾಯಮೂರ್ತಿ ವಿ. ಗೋಪಾಲಗೌಡ ಹೇಳಿದರು.

ಲಾಭದ ಉದ್ದೇಶದಿಂದ ಜೀವಮಾನದಲ್ಲಿ ನಾನು ಯಾವುದೇ ತೀರ್ಪು ನೀಡಿಲ್ಲ, ರೈತರು, ಬಡವರು, ಶ್ರಮಿಕರ ಪರವಾಗಿ ಸದಾ ಕಾಲ ನಿಲ್ಲುತ್ತಿದ್ದೆ. ಆದರೆ ಇಂದಿನ ಪರಿಸ್ಥಿತಿ ಸಂಪೂರ್ಣ ಭಿನ್ನವಾಗಿದೆ. ತೀರ್ಪುಗಳನ್ನು ನೀಡಿದ ನ್ಯಾಯಮೂರ್ತಿಗಳು ಲೋಕಾಯುಕ್ತರು, ರಾಜ್ಯಪಾಲರಾಗುತ್ತಿದ್ದಾರೆ. ಹೇಗೆ ಇಂತಹ ಹುದ್ದೆಗಳಿಗೆ ನೇಮಕಗೊಳ್ಳುತ್ತಾರೆ ಎಂಬುದು ಎಲ್ಲರಿಗೂ ತಿಳಿದಿದೆ ಎಂದರು.

ಕನ್ನಡಪ್ರಭ ಸೋಮವಾರ 17.06.2024

# ಮನಸ್ಸಿನ ಏಕಾಗ್ರತೆಗೆ ಪರಿಶುದ್ಧತೆಯೇ ಮೂಲಾಧಾರ: ನಿಖಿಲೇಶ್ವರಾನಂದಜೀ

## ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಉಪನ್ಯಾಸ

**• ಕನ್ನಡಪ್ರಭ ವಾರ್ತೆ** ಯಲಹಂಕ

ಮನಸ್ಸಿನ ಏಕಾಗ್ರತೆ ಜ್ಞಾನಾರ್ಜನೆಗೆ ಮೂಲವಾದರೆ ಏಕಾಗ್ರತೆಗೆ ಪರಿಶುದ್ಧತೆಯೇ ಮೂಲಾಧಾರವಾಗಿದೆ. ಈ ದಿಸೆಯಲ್ಲಿ ನಾವು ಮನಸ್ಸನ್ನು ಪರಿಶುದ್ಧವಾಗಿ ಇಟ್ಟುಕೊಳ್ಳುವುದರಿಂದ ಏಕಾಗ್ರತೆಯನ್ನು ಗಳಿಸಿಕೊಳ್ಳಬಹುದಾಗಿದೆ ಎಂದು ಗುಜರಾತಿನ ರಾಜ್ ಕೋಟ್‌ನ ರಾಮಕೃಷ್ಣ ಆಶ್ರಮದ ಅಧ್ಯಕ್ಷ ಸ್ವಾಮಿ ನಿಖಿಲೇಶ್ವರಾನಂದಜೀ ಅಭಿಪ್ರಾಯಪಟ್ಟರು.

ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜು ವತಿಯಿಂದ ಏರ್ಪಡಿಸಿದ್ದ ಉಪನ್ಯಾಸ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಮನುಷ್ಯ ಕಣ್ಣು, ಕಿವಿ, ಬಾಯಿಯ ಮೂಲಕ ಸ್ವೀಕರಿಸುವ ವಿಷಯ ಅಥವಾ ಆಹಾರ ಪರಿಶುದ್ಧವಿದ್ದಾಗ ಮಾತ್ರ ಮನಸು ಪರಿಶುದ್ಧವಾಗುತ್ತದೆ. ಮನಸು ಪರಿಶುದ್ಧವಾದಾಗ ಏಕಾಗ್ರತೆ ಲಭಿಸುತ್ತದೆ, ಏಕಾಗ್ರತೆಯ ಅಧ್ಯಯನ ಜ್ಞಾನಾರ್ಜನೆಗೆ ಇಂಬು ನೀಡುತ್ತದೆ. ಏಕಾಗ್ರತೆಯಿಲ್ಲದೆ ಮಾಡುವ ಹತ್ತು ಗಂಟೆಗಳ ಅಧ್ಯಯನವನ್ನು ಏಕಾಗ್ರತೆಯಿಂದ ಮಾಡುವ ಕೇವಲ ಒಂದು ಗಂಟೆಯ ಅಧ್ಯಯನ ಸರಿದೂಗಿಸುತ್ತದೆ ಎಂದು ಹೇಳಿದರು.

ವಿದ್ಯಾರ್ಥಿಗಳು ಇದನ್ನು ಮನವರಿಕೆ ಮಾಡಿಕೊಂಡು ಅಧ್ಯಯನದಲ್ಲಿ ತೊಡಗಿದರೆ, ನೀವಂದುಕೊಳ್ಳುವ ಜ್ಞಾನಾರ್ಜನೆಯ ಗುರಿಯನ್ನು ಬಹುಬೇಗ ತಲುಪಬಹುದು. ಸ್ವಾಮಿ ವಿವೇಕಾನಂದರು ಮನಸ್ಸಿನ ಏಕಾಗ್ರತೆ, ಪರಿಶುದ್ಧತೆಯನ್ನು ಗಳಿಸುವ ಬಗೆಯನ್ನು ವೇದಾಂತ ಸಾರದ ವಿವರಣೆಯ ಮೂಲಕ ವಿಶ್ವಕ್ಕೆ ಸಾರಿದ್ದಾರೆ. ಪ್ರಸ್ತುತವಾಗಿ ವಿಶ್ವದಾದ್ಯಂತ 165 ರಾಮಕೃಷ್ಣ ಆಶ್ರಮಗಳಿವೆ, ಬೆಂಗಳೂರು ನಗರದ ಹಲಸೂರು ಮತ್ತು ಬಸವನಗುಡಿಯಲ್ಲಿ ರಾಮಕೃಷ್ಣ ಆಶ್ರಮವಿದ್ದು, ಸ್ವಾಮಿ ವಿವೇಕಾನಂದರ ಭವ್ಯ ಸಂದೇಶವನ್ನು ಸಾರುವ ಮೂಲಕ ಸತ್ ಚಿಂತನೆಯನ್ನು ಪಸರಿಸುವಲ್ಲಿ ನಿರತವಾಗಿವೆ ಎಂದರು.

ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಕಾರ್ಯದರ್ಶಿ ವುಡೆ.ಪಿ.ಕೃಷ್ಣ, ಜಂಟಿ ಕಾರ್ಯದರ್ಶಿ ಶೇಷನಾರಾಯಣ, ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಡಾ। ಎಸ್.ಎನ್. ವೆಂಕಟೇಶ್, ಕಾಲೇಜಿನ ಬೋಧಕ, ಬೋಧಕೇತರ ಸಿಬ್ಬಂದಿ ಹಾಗೂ ವಿದ್ಯಾರ್ಥಿಗಳಿದ್ದರು.



ಯಲಹಂಕದ ಶೇಷಾದ್ರಿಪುರಂ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ ಉಪನ್ಯಾಸ ಕಾರ್ಯಕ್ರಮದಲ್ಲಿ ಗುಜರಾತಿನ ರಾಜ್‌ಕೋಟ್‌ನಲ್ಲಿರುವ ರಾಮಕೃಷ್ಣ ಆಶ್ರಮದ ಅಧ್ಯಕ್ಷ ಸ್ವಾಮಿ ನಿಖಿಲೇಶ್ವರಾನಂದಜೀ ಅವರನ್ನು ಸನ್ಮಾನಿಸಲಾಯಿತು.

ಈ ಸಂಜೆ

Jun 7, 2024

# ಕನ್ನಡ ಸಂಸ್ಕೃತ ವಿದ್ವತ್ ಪರಂಪರೆಯ ಕೊಂಡಿ ಪ್ರೊ.ಮಲ್ಲೇಪುರಂ



ಬೆಂಗಳೂರು, ಜೂ.7- ಕಲಬುರ್ಗಿಯ ಪ್ರೊ ಮಲ್ಲೇಪುರಂ ಸಾಂಸ್ಕೃತಿಕ ಪ್ರತಿಷ್ಠಾನ ಮತ್ತು ಬೆಂಗಳೂರಿನ ಉದಯ ಪ್ರಕಾಶನ ಸಂಯುಕ್ತಾಶ್ರಯದಲ್ಲಿ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಅವರ 73ನೇ ಹುಟ್ಟುಹಬ್ಬದ ಅಂಗವಾಗಿ ಅವರ 101ನೇ ಕೃತಿ ಚಿದಾನಂದ ಅವಧೂತರ ಜ್ಞಾನ ಸಿಂಧು ವೇದಾಂತ ಕಾವ್ಯವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ಡಾ.ವೂಡೆ ಪಿ. ಕೃಷ್ಣ ಜನಾರ್ಪಣೆಗೊಳಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆವಹಿಸಿ ಮಾತನಾಡುತ್ತಾ, ಕನ್ನಡ ಸಾಹಿತ್ಯ ಪರಂಪರೆಗೆ ವಿದ್ವತ್ಪೂರ್ಣ ಕೃತಿಗಳನ್ನು ನೀಡಿ ಸಮೃದ್ಧತೆಗೆ ಕಾರಣರಾಗಿ ಈ ಕೃತಿ ಕನ್ನಡ ಸಾಹಿತ್ಯ ಮತ್ತು ವೇದಾಂತ ಮಾರ್ಗಕ್ಕೆ ಬಹುದೊಡ್ಡ ಕೊಡುಗೆಯಾಗಿದ್ದು ಕನ್ನಡ-ಸಂಸ್ಕೃತ ವಿದ್ವತ್ ಪರಂಪರೆಯ ಕೊಂಡಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ ರವರು ಮುಂದುವರಿಸಿಕೊಂಡು ಬರುತ್ತಿರುವುದು ಕನ್ನಡಿಗರ ಪುಣ್ಯ ಎಂದು ಅಭಿಪ್ರಾಯಪಟ್ಟರು.

ಸಮಾರಂಭದಲ್ಲಿ ಪ್ರೊ. ಮಲ್ಲೇಪುರಂ ಸಾಂಸ್ಕೃತಿಕ ಪ್ರತಿಷ್ಠಾನದಿಂದ ಕೊಡಮಾಡುವ ಪ್ರೊ.ಮಲ್ಲೇಪುರಂ ಸಾಹಿತ್ಯ ಪ್ರಶಸ್ತಿಯನ್ನು ಕೆಆರ್ ಪುರಂ ಸಿಲಿಕಾನ್ ಸಿಟಿ ಕಾಲೇಜಿನ ಸಹಪ್ರಾಧ್ಯಾಪಕ ಹಾಗೂ ಸಂಶೋಧಕ ಡಾ. ಎಚ್.ಎಸ್ ಗೋವರ್ಧನ್ ಮತ್ತು ಬಿ ಬಸಲಿಂಗಪ್ಪ ಮುಳ್ಳಪ್ಪ ಕಟ್ಟಿ ಸ್ಮರಣಾರ್ಥ ಪುಸ್ತಕ ಬಹುಮಾನವನ್ನು ವರ್ತೂರು ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಪ್ರಾಂಶುಪಾಲ ಡಾ.ಸಿ.ಚಂದ್ರಪ್ಪರವರಿಗೆ ನೀಡಿ ಗೌರವಿಸಲಾಯಿತು.

ಸಿದ್ಧಾರೂಢ ಆಶ್ರಮದ ಟ್ರಸ್ಟಿ ಶಾಮಾನಂದ ಪೂಜಾರಿಯವರು ಪುಸ್ತಕ ಪರಿಚಯ ಮಾಡಿಕೊಟ್ಟರು.

ಕರ್ನಾಟಕ ಪ್ರಕಾಶಕರ ಸಂಘದ ಅಧ್ಯಕ್ಷ ಪ್ರಕಾಶ್ ಕಂಬತ್ತಳ್ಳಿ ಮುಖ್ಯ ಅತಿಥಿಗಳಾಗಿದ್ದರು.

ಪ್ರೊ. ಮಲ್ಲೇಪುರಂ ಸಾಂಸ್ಕೃತಿಕ ಪ್ರತಿಷ್ಠಾನದ ಡಾ.ಹೆಚ್.ಟಿ .ಪೋತೆ, ಅಧ್ಯಕ್ಷ ಡಾ. ಶ್ರೀಶೈಲ ನಾಗರಾಳ, ಕಾರ್ಯದರ್ಶಿ ಡಾ.ಎಂ.ಬಿ. ಕಟ್ಟಿ, ಪ್ರಕಾಶಕಿ ಶೈಲಜಾ ಹೆಗಡೆ ವೇದಿಕೆಯಲ್ಲಿ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ ಗುರುವಾರ 6 ಜೂನ್ 2024

# ಆಧ್ಯಾತ್ಮ ಪುಸ್ತಕ ರಚನೆ ಸಾಮಾನ್ಯರಿಂದ ಸಾಧ್ಯವಿಲ್ಲ

ಬೆಂಗಳೂರು: ಸ್ವರ್ಗ ಅನುಭವಕ್ಕೆ ಬರುವ ರೀತಿಯಲ್ಲಿ ಸಾಹಿತ್ಯ ರಚಿಸುವಲ್ಲಿ ಮಲ್ಲೇಪುರಂ ಜಿ.ವೆಂಕಟೇಶ್ ಅವರು ಪರಿಣಿತಿ ಹೊಂದಿ ವಿಶಿಷ್ಟ ಸಾಹಿತಿಯಾಗಿದ್ದಾರೆಂದು ಹುಬ್ಬಳ್ಳಿ ಸಿದ್ಧಾರೂಢ ಆಶ್ರಮದ ಟ್ರಸ್ಟಿ ಶಾಮಾನಂದ ಪೂಜೇರಿ ಹೇಳಿದರು.

ಕನ್ನಡ ಸಾಹಿತ್ಯ ಪರಿಷತ್‌ನ ಕೃಷ್ಣರಾಜ ಪರಿಷನ್ಮಂದಿರದಲ್ಲಿ ನಡೆದ ಮಲ್ಲೇಪುರಂ ಸಾಹಿತ್ಯ ಪ್ರಶಸ್ತಿ ಪ್ರದಾನ ಹಾಗೂ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಅವರು ಸಂಪಾದಿಸಿರುವ 'ಜ್ಞಾನಸಿಂಧು' ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಆಧ್ಯಾತ್ಮದ ಪುಸ್ತಕ ರಚಿಸುವುದು ಸಾಮಾನ್ಯರಿಂದ ಸಾಧ್ಯವಿಲ್ಲ. ಅದಕ್ಕೆ ಗುರುಪರಂಪರೆ ಇರಬೇಕು. ಜ್ಞಾನಸಿಂಧು ಪುಸ್ತಕದಲ್ಲಿರುವ ಒಂದೊಂದು ಪದದಿಂದ ಒಂದು ದಿನ ಉಪನ್ಯಾಸ ಮಾಡಬಹುದು ಎಂದು ಅಭಿಪ್ರಾಯಪಟ್ಟರು.

ಡಾ.ಎಸ್.ಎಚ್. ಗೋವರ್ಧನ ಅವರಿಗೆ ಮಲ್ಲೇಪುರಂ ಸಾಹಿತ್ಯ ಪ್ರಶಸ್ತಿ ಹಾಗೂ ಡಾ.ಸಿ.ಚಂದ್ರಪ್ಪ ಅವರಿಗೆ ಪುಸ್ತಕ ಬಹುಮಾನ ಪ್ರದಾನ ಮಾಡಲಾಯಿತು.

ಲೋಕ ಶಿಕ್ಷಣ ಟ್ರಸ್ಟ್‌ನ ಧರ್ಮದರ್ಶಿ ಡಿ.ಆರ್.ಪಾಟೀಲ್, ಜ್ಞಾನಸಿಂಧು ಪುಸ್ತಕ ಸಂಪಾದಕ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಕರ್ನಾಟಕ ಪ್ರಕಾಶಕರ ಸಂಘದ ಅಧ್ಯಕ್ಷ ಪ್ರಕಾಶ್ ಕಂಬತ್ತಳ್ಳಿ, ವೂಡೇ ಪಿ.ಕೃಷ್ಣ ಮತ್ತಿತರರಿದ್ದರು.



ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಸಂಪಾದಿಸಿರುವ 'ಜ್ಞಾನಸಿಂಧು' ಪುಸ್ತಕ ಬಿಡುಗಡೆ ಕಾರ್ಯಕ್ರಮದಲ್ಲಿ ಹುಬ್ಬಳ್ಳಿ ಸಿದ್ಧಾರೂಢ ಆಶ್ರಮದ ಟ್ರಸ್ಟಿ ಶಾಮಾನಂದ ಪೂಜೇರಿ, ಕರ್ನಾಟಕ ಪ್ರಕಾಶಕರ ಸಂಘದ ಅಧ್ಯಕ್ಷ ಪ್ರಕಾಶ್ ಕಂಬತ್ತಳ್ಳಿ, ಲೋಕ ಶಿಕ್ಷಣ ಟ್ರಸ್ಟ್‌ನ ಧರ್ಮದರ್ಶಿ ಡಿ.ಆರ್.ಪಾಟೀಲ್, ವೂಡೇ ಪಿ.ಕೃಷ್ಣ ಮತ್ತಿತರರಿದ್ದರು.

ಕನ್ನಡಪ್ರಭ ಗುರುವಾರ 6.06.2024

# 'ಆಧ್ಯಾತ್ಮ ಪುಸ್ತಕ ರಚನೆಗೆ ಗುರು ಪರಂಪರೆ ಬೇಕು'

## ಮಲ್ಲೇಪುರಂ ಸಂಪಾದಿತ ಜ್ಞಾನಸಿಂಧು ಕೃತಿ ಬಿಡುಗಡೆ




ನಗರದಲ್ಲಿ ಬುಧವಾರ ನಡೆದ ಕಾರ್ಯಕ್ರಮದಲ್ಲಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರು ಸಂಪಾದಿತ 'ಜ್ಞಾನಸಿಂಧು' ಕೃತಿಯನ್ನು ಹುಬ್ಬಳ್ಳಿ ಸಿದ್ಧಾರೂಢ ಆಶ್ರಮದ ಟ್ರಸ್ಟಿ ಶಮಾನಂದ ಪೂಜೇರಿ ಲೋಕಾರ್ಪಣೆಗೊಳಿಸಿದರು. ಡಾ.ವೂಡೇ ಪಿ.ಕೃಷ್ಣ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಆಧ್ಯಾತ್ಮದ ಕುರಿತು ಪುಸ್ತಕ ರಚಿಸುವುದು ಸಾಮಾನ್ಯರಿಂದ ಸಾಧ್ಯವಿಲ್ಲ, ಅದಕ್ಕೆ ಗುರು ಪರಂಪರೆ ಇರಬೇಕು ಎಂದು ಹುಬ್ಬಳ್ಳಿ ಸಿದ್ಧಾರೂಢ ಆಶ್ರಮದ ಟ್ರಸ್ಟಿ ಶಮಾನಂದ ಪೂಜೇರಿ ಅಭಿಪ್ರಾಯಪಟ್ಟರು.

ಬುಧವಾರ ಕನ್ನಡ ಸಾಹಿತ್ಯ ಪರಿಷತ್ತು ಸಭಾಂಗಣದಲ್ಲಿ ಪ್ರೊ.ಮಲ್ಲೇಪುರಂ ಸಾಂಸ್ಕೃತಿಕ ಪ್ರತಿಷ್ಠಾನ ಹಾಗೂ ಉದಯ ಪ್ರಕಾಶನ ಸಹಯೋಗದಲ್ಲಿ ನಡೆದ ಕಾರ್ಯಕ್ರಮದಲ್ಲಿ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್ ಅವರು ಸಂಪಾದಿತ 'ಜ್ಞಾನಸಿಂಧು' ಕೃತಿ ಲೋಕಾರ್ಪಣೆಗೊಳಿಸಿ ಅವರು ಮಾತನಾಡಿದರು.

ಆಧ್ಯಾತ್ಮ ಹಾಗೂ ಸಾಹಿತ್ಯ ಸಮಾಜದ ಉಸಿರು ಮತ್ತು ಪ್ರಾಣದಂತೆ. ಸ್ವರ್ಗ ಅನುಭವಕ್ಕೆ ಬರುವ ರೀತಿಯಲ್ಲಿ ಮಲ್ಲೇಪುರಂ ಜಿ.ವೆಂಕಟೇಶ್ ಅವರು ಸಾಹಿತ್ಯ ರಚಿಸಿದ್ದಾರೆ. ಅವರೊಬ್ಬ ವಿಶಿಷ್ಟ ಸಾಹಿತಿಯಾಗಿದ್ದು 'ಜ್ಞಾನಸಿಂಧು' ಪುಸ್ತಕದಲ್ಲಿರುವ ಒಂದೊಂದು ಪದದಿಂದ ಒಂದು ದಿನ ಉಪನ್ಯಾಸ ಮಾಡಬಹುದು ಎಂದರು.

ಇದೇ ಸಂದರ್ಭದಲ್ಲಿ ಡಾ.ಎಸ್.ಎಚ್. ಗೋವರ್ಧನ ಅವರಿಗೆ 'ಮಲ್ಲೇಪುರಂ ಸಾಹಿತ್ಯ ಪ್ರಶಸ್ತಿ' ಹಾಗೂ ಡಾ.ಸಿ.ಚಂದ್ರಪ್ಪ ಅವರಿಗೆ 'ಪ್ರೊ.ಮಲ್ಲೇಪುರಂ ಪುಸ್ತಕ ಬಹುಮಾನ' ಪ್ರದಾನ ಮಾಡಲಾಯಿತು.

ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಕರ್ನಾಟಕ ಪ್ರಕಾಶಕರ ಸಂಘದ ಅಧ್ಯಕ್ಷ ಪ್ರಕಾಶ್ ಕಂಬತ್ತಳ್ಳಿ, 'ಜ್ಞಾನಸಿಂಧು' ಪುಸ್ತಕ ಸಂಪಾದಕ ಪ್ರೊ.ಮಲ್ಲೇಪುರಂ ಜಿ. ವೆಂಕಟೇಶ್, ಡಿ.ಆರ್.ಪಾಟೀಲ್ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

# ಆಧ್ಯಾತ್ಮ ಪುಸ್ತಕ ರಚನೆಗೆ ಗುರು ಪರಂಪರೆಯೇ ಮೂಲ




ಕಸಾಪ ಸಭಾಂಗಣದಲ್ಲಿ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಸಂಪಾದಿತ 'ಜ್ಞಾನಸಿಂಧು' ಕೃತಿ ಲೋಕಾರ್ಪಣೆಗೊಂಡಿತು.

**ವಿಕ ಸುದ್ದಿಲೋಕ** ಬೆಂಗಳೂರು

''ಗುರು ಪರಂಪರೆಯಿದ್ದವರಿಂದ ಮಾತ್ರ ಆಧ್ಯಾತ್ಮದ ಕುರಿತ ಪುಸ್ತಕ ರಚಿಸಲು ಸಾಧ್ಯ. ಆ ಸಾಲಿಗೆ ಮಲ್ಲೇಪುರಂ ಜಿ. ವೆಂಕಟೇಶ್ ನಿಲ್ಲುತ್ತಾರೆ'' ಎಂದು ಹುಬ್ಬಳ್ಳಿ ಸಿದ್ಧಾರೂಢ ಆಶ್ರಮದ ಟ್ರಸ್ಟಿ ಶಾಮಾನಂದ ಪೂಜೇರಿ ಅಭಿಪ್ರಾಯಪಟ್ಟರು.

ಪ್ರೊ. ಮಲ್ಲೇಪುರಂ ಸಾಂಸ್ಕೃತಿಕ ಪ್ರತಿಷ್ಠಾನ ಹಾಗೂ ಉದಯ ಪ್ರಕಾಶನ ಸಹಯೋಗದೊಂದಿಗೆ ಕಸಾಪ ಸಭಾಂಗಣದಲ್ಲಿ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಸಂಪಾದಿತ 'ಜ್ಞಾನಸಿಂಧು' ಕೃತಿ ಲೋಕಾರ್ಪಣೆ ಹಾಗೂ ಡಾ. ಎಸ್.ಎಚ್. ಗೋವರ್ಧನ ಅವರಿಗೆ 'ಮಲ್ಲೇಪುರಂ ಸಾಹಿತ್ಯ ಪ್ರಶಸ್ತಿ' ಪ್ರದಾನ ಹಾಗೂ ಡಾ. ಸಿ. ಚಂದ್ರಪ್ಪ ಅವರಿಗೆ 'ಪ್ರೊ. ಮಲ್ಲೇಪುರಂ' ಪುಸ್ತಕ ಬಹುಮಾನ ಪ್ರದಾನ ಮಾಡಿ ಬುಧವಾರ ಅವರು ಮಾತನಾಡಿದರು.

''ಆಧ್ಯಾತ್ಮದ ಕುರಿತು ಪುಸ್ತಕ ರಚಿಸುವುದು ಸಾಮಾನ್ಯರಿಂದ ಸಾಧ್ಯವಿಲ್ಲ, ಅದಕ್ಕೆ ಗುರು ಪರಂಪರೆ ಇರಬೇಕು. ಈ ನಿಟ್ಟಿನಲ್ಲಿ ಮಲ್ಲೇಪುರಂ ಜಿ. ವೆಂಕಟೇಶ್ ಅವರು ಆಧ್ಯಾತ್ಮಕದ ಕುರಿತ ಸಾಹಿತ್ಯ ಕೃತಿಯನ್ನು ರಚಿಸಿದ್ದಾರೆ'' ಎಂದರು.

''49 ಪ್ರಕರಣ ಗ್ರಂಥಗಳಿಂದ ಕೂಡಿರುವ 'ಜ್ಞಾನಸಿಂಧು' ಬೃಹತ್ ಗ್ರಂಥವಾಗಿದ್ದು, ತೋರಣನಾಂದಿ ಎಂಬ ಸೊಗಸಾದ ಪ್ರಸ್ತಾವನೆ ಹೊಂದಿದೆ. ಇದರಲ್ಲಿ ಅವಧೂತರು ಹುಟ್ಟಿದ್ದು, ಬೆಳೆದದ್ದು, ಮಾಡಿದ ಕೆಲಸ ಕಾರ್ಯಗಳು, ಅವರ ಗ್ರಂಥಗಳ ರಚನೆ ಕುರಿತು ಸಮಗ್ರ ಮಾಹಿತಿ ಒಳಗೊಂಡಿದೆ. ಸಾಮಾನ್ಯರಿಂದ ಇದನ್ನು ಪರಿಷ್ಕರಿಸಲು, ರಚಿಸಲು, ಟಿಪ್ಪಣಿ ಬರೆಯಲು ಸಾಧ್ಯವಿಲ್ಲ, ನಿರಂತರ ಅಧ್ಯಯನ, ಆಶೀರ್ವಾದ, ಪಾಂಡಿತ್ಯವೂ ಬೇಕು. ಅದು ಮಲ್ಲೇಪುರಂ ಅವರಲ್ಲಿ ಕರಗತವಾಗಿದೆ'' ಎಂದು ನುಡಿದರು.

ಕಾರ್ಯಕ್ರಮದಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ.ಕೃಷ್ಣ, ಕರ್ನಾಟಕ ಪ್ರಕಾಶಕರ ಸಂಘದ ಅಧ್ಯಕ್ಷ ಪ್ರಕಾಶ್ ಕಂಬತ್ತಳ್ಳಿ, ಡಿ.ಆರ್. ಪಾಟೀಲ್ ಸೇರಿದಂತೆ ಹಲವರು ಉಪಸ್ಥಿತರಿದ್ದರು.

# ನೆಹರು ಯುವ ಕೇಂದ್ರದ ನಿರ್ದೇಶಕ ನಟರಾಜ್ ರಿಗೆ

# ಆತ್ಮೀಯ ಬೀಳ್ಕೊಡುಗೆ

ಬೆಂಗಳೂರು, ಮೇ 31- ರಾಷ್ಟ್ರೀಯ, ರಾಜ್ಯ, ಜಿಲ್ಲಾ ಯುವ ಪ್ರಶಸ್ತಿ ವಿಜೇತರು ಹಾಗೂ ಯುವ ಸಂಘಟನೆಗಳ ಸಹಯೋಗದಲ್ಲಿ ಕೇಂದ್ರ ಸರ್ಕಾರದ ನೆಹರು ಯುವ ಕೇಂದ್ರದ ರಾಜ್ಯ ನಿರ್ದೇಶಕರಾದ ಎಂ.ಎನ್. ನಟರಾಜ್, ಲೆಕ್ಕ ಮತ್ತು ಕಾರ್ಯಕ್ರಮ ಸಹಾಯಕರಾದ ಚಂದ್ರ ಗೌಡ ಅವರಿಗೆ ಬೀಳ್ಕೊಡುಗೆ ಸಮಾರಂಭವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಗಾಂಧಿ ಸ್ಮಾರಕ ನಿಧಿಯ ವೂಡೇ ಪಿ.ಕೃಷ್ಣ, ಉಪ ನಿರ್ದೇಶಕ ಅಲೀನ್ ಕ್ಯಾಬ್ರಿನ್ ಉದ್ಘಾಟಿಸಿದರು. ಈ ಸಂದರ್ಭದಲ್ಲಿ ರಾಷ್ಟ್ರೀಯ ಯುವ ಪ್ರಶಸ್ತಿ ವಿಜೇತ ಡಾ. ಚನ್ನಪ್ಪ ಚಿಕ್ಕಹಾಗಡೆ ಮಾತನಾಡಿ, ಕೇಂದ್ರ



ಸರ್ಕಾರದ ನೆಹರು ಯುವ ಕೇಂದ್ರದಲ್ಲಿ ಮೊದಲ ಕನ್ನಡಿಗ ಅಧಿಕಾರಿಗಳು ಕಾರ್ಯನಿರ್ವಹಿಸಿದ್ದು, ಅವರಲ್ಲಿ ಎಂ.ಎನ್. ನಟರಾಜ್ ಅವರು ಕನ್ನಡಿಗ ಅಧಿಕಾರಿಗಳಾಗಿ ಅನೇಕ ಯುವ ಪ್ರತಿಭೆಗಳನ್ನು ಗುರುತಿಸುವಲ್ಲಿ ತಮ್ಮದೇ ಸೇವೆ ಸಲ್ಲಿಸಿದ್ದಾರೆ. ಇವರ ಸೇವೆ ಅನನ್ಯವಾದದ್ದು ಎಂದರು.

ರಾಷ್ಟ್ರೀಯ ಯುವ ಪ್ರಶಸ್ತಿ ವಿಜೇತ ನಂದಿ ದುರ್ಗ ರಾಜೇಗೌಡ, ರಾಷ್ಟ್ರೀಯ ಯುವ ಪ್ರಶಸ್ತಿ ವಿಜೇತರಾದ ಅನುಪಮ, ನಾಗಮಣಿ, ನಂದಿ ದುರ್ಗ ರಾಜೇಗೌಡ, ಮಂಡ್ಯದ ಮಹದೇವ್, ಚಿಂತಾಮಣಿಯ ಚಂದ್ರು, ನಾಗೇಶ್, ನಿಸರ್ಗ ಸೇರಿದಂತೆ ಅನೇಕರು ಭಾಗವಹಿಸಿದ್ದರು.

Bengaluru Edition
May 31, 2024 Page No. 5
Powered by: erelego.com

ಕನ್ನಡಪ್ರಭ

May 18, 2024

# ಕಲಾವಿದರಿಗೆ ಎಲ್ಲೆಯಿಲ್ಲ: ವೂಡೇ ಪಿ.ಕೃಷ್ಣ

## ಬಿಎಂಟಿಸಿ ಕಲಾ ಕುಟೀರದಿಂದ ಕಲಾ ತಪಸ್ವಿ ಟಿ.ಎಂ.ಬಾಲಕೃಷ್ಣಗೆ ನುಡಿ ನಮನ

• **ಕನ್ನಡಪ್ರಭ ವಾರ್ತೆ**, ಬೆಂಗಳೂರು

ಸಾರಿಗೆ ಇಲಾಖೆ ನೌಕರರಾಗಿದ್ದರೂ ರಂಗಭೂಮಿ ಮೂಲಕ ನಾಡು ಹೆಮ್ಮೆ ಪಡುವಂತ ಸಾಧನೆ ಮಾಡುವಲ್ಲಿ ಟಿ.ಎಂ.ಬಾಲಕೃಷ್ಣ ಅವರು ಸೈ ಎನ್ನಿಸಿಕೊಂಡಿದ್ದು ಕಲೆ ಮತ್ತು ಕಲಾವಿದರಿಗೆ ಎಲ್ಲೆಗಳಿಲ್ಲ ಎಂಬುದನ್ನು ಸಾಧಿಸಿ ತೋರಿಸಿದ್ದಾರೆ ಎಂದು ಶೇಷಾದ್ರಿಪುರ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ವೂಡೇ ಪಿ.ಕೃಷ್ಣ ಅಭಿಪ್ರಾಯಪಟ್ಟರು.

ಶುಕ್ರವಾರ ಜೆ.ಸಿ.ರಸ್ತೆಯಲ್ಲಿರುವ ರವೀಂದ್ರ ಕಲಾಕ್ಷೇತ್ರದಲ್ಲಿ ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ (ಬಿಎಂಟಿಸಿ) ಸಾಂಸ್ಕೃತಿಕ ಕಲಾ ಕುಟೀರದ ವತಿಯಿಂದ ಆಯೋಜಿಸಿದ್ದ 'ಟಿ.ಎಂ.ಬಾಲಕೃಷ್ಣ ಅವರಿಗೆ ನುಡಿ ನಮನ' ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು. ಎಲ್ಲ ರಂಗಗಳಲ್ಲಿಯೂ ಬಾಲಕೃಷ್ಣ ಅವರ ಸೇವೆ ಅಜರಾಮರ. ಕಲಾ ತಪಸ್ವಿಯಾಗಿ ಕಲೆಗಾಗಿ ದುಡಿದವರು. ಸಾರಿಕೆ ಇಲಾಖೆಯಲ್ಲಿ ಕಾರ್ಮಿಕರಾಗಿದ್ದರೂ ಕಲಾ ಸೇವೆಯಲ್ಲಿ ತೊಡಗಿದ್ದ ಅವರಲ್ಲಿ ಸೃಜನಶೀಲತೆ, ಸಂಘಟನಾ ಸಾಮರ್ಥ್ಯವಿತ್ತು. ಈ ಮೂಲಕ ಹಲವರನ್ನು ಕಲಾವಿದರಾಗಿ ರೂಪಿಸುವಲ್ಲಿ ಬಾಲಕೃಷ್ಣ ಅವರು ಯಶಸ್ವಿಯಾಗಿದ್ದಾರೆ ಎಂದು ಸ್ಮರಿಸಿದರು.ಕರ್ನಾಟಕ ವಿಕಾಸರಂಗದ ಅಧ್ಯಕ್ಷ ವ.ಚ.ಚನ್ನೇಗೌಡ, ಹಿರಿಯ ರಂಗಕರ್ಮಿ ಎಸ್.ಎಲ್.ಎನ್. ಸ್ವಾಮಿ ಮಾತನಾಡಿದರು. ಕಾರ್ಯಕ್ರಮದಲ್ಲಿ ಚಲನಚಿತ್ರ ನಟಿ ಆಶಾ ರಾಣಿ, ಕುವೆಂಪು ಕಲಾನಿಕೇತನ ಕುವೆಂಪು ಪ್ರಕಾಶ್, ನಿಖರ ಸಮೂಹ ಸಂಸ್ಥೆ ಸಂಸ್ಥಾಪಕ ಅಧ್ಯಕ್ಷ ಕೋದಂಡರಾಮ ಉಪಸ್ಥಿತರಿದ್ದರು.



ರವೀಂದ್ರ ಕಲಾಕ್ಷೇತ್ರದಲ್ಲಿ ಬಿಎಂಟಿಸಿ ಸಾಂಸ್ಕೃತಿಕ ಕಲಾ ಕುಟೀರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ದಿವಂಗತ ಟಿ.ಎಂ.ಬಾಲಕೃಷ್ಣ ಅವರಿಗೆ ನುಡಿನಮನ ಸಲ್ಲಿಸಲಾಯಿತು.

ಈ ಸಂಜೆ

May 18, 2024



ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ವತಿಯಿಂದ ಸಾಂಸ್ಕೃತಿಕ ಕಲಾ ಕುಟೀರ ಸಂಘಟನೆಯಿಂದ ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಿದ್ದ ನಟ, ನಿರ್ದೇಶಕ, ಹಿರಿಯ ರಂಗಕರ್ಮಿ ದಿ.ಟಿ.ಎನ್.ಬಾಲಕೃಷ್ಣ ಅವರ ನುಡಿನಮನ ಕಾರ್ಯಕ್ರಮದಲ್ಲಿ ನಾಡೋಜ ವೂಡೆ ಪಿ.ಕೃಷ್ಣ, ವ.ಚ.ಚನ್ನೇಗೌಡ, ಎಸ್.ಎಲ್.ಎಸ್.ಶಾಸ್ತ್ರಿ ಕುವೆಂಪು ಪ್ರಕಾಶ್, ಆಶಾ ರಾಣಿ ಮತ್ತಿತರರು ಪಾಲ್ಗೊಂಡಿದ್ದರು.

ಸಂಜೆವಾಣಿ

ಶನಿವಾರ 18 ಮೇ 2024



ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆ ಸಾಂಸ್ಕೃತಿಕ ಕಲಾ ಕುಟೀರ ವತಿಯಿಂದ ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಿದ ನಟ, ನಿರ್ದೇಶಕ, ಹಿರಿಯ ರಂಗಕರ್ಮಿ ಟಿ.ಎನ್ ಬಾಲಕೃಷ್ಣರವರ ನುಡಿ ನಮನ ಕಾರ್ಯಕ್ರಮದಲ್ಲಿ ನಾಡೋಜ ಪ್ರೊ. ಪಿ. ಕೃಷ್ಣ, ವ.ಚ. ಚನ್ನೇಗೌಡ, ಎಸ್.ಎಲ್.ಎಸ್ ಶಾಸ್ತ್ರಿ, ಕುವೆಂಪು ಪ್ರಕಾಶ್, ಆಶಾರಾಣಿ ಮತ್ತಿತರರು ಭಾಗವಹಿಸಿ ನಮನ ಸಲ್ಲಿಸಿದರು.

ವಿಜಯ ಕರ್ನಾಟಕ ಮಂಗಳವಾರ, 14 ಮೇ 2024

# ಚಿನ್ನದ ಹುಡುಗಿಗೆ 'ಎಂ.ತಿಮ್ಮಯ್ಯ ವಿದ್ಯಾಚೇತನ ಪ್ರಶಸ್ತಿ' ಪ್ರದಾನ



**ವಿಕ ಸುದ್ದಿಲೋಕ** ಬೆಂಗಳೂರು

ಮೈಸೂರು ವಿಶ್ವವಿದ್ಯಾಲಯದಲ್ಲಿ ಎಂ.ಎ.ಕನ್ನಡ ವಿಷಯದಲ್ಲಿ 10 ಚಿನ್ನದ ಪದಕ ಮತ್ತು 4 ನಗದು ಬಹುಮಾನ ಗಳಿಸಿದ ವಿದ್ಯಾರ್ಥಿನಿ ವಿ.ತೇಜಸ್ವಿನಿ ಅವರಿಗೆ 'ಎಂ.ತಿಮ್ಮಯ್ಯ ವಿದ್ಯಾಚೇತನ ಪ್ರಶಸ್ತಿ' ಪ್ರದಾನ ಮಾಡಲಾಯಿತು.

ಕರ್ನಾಟಕ ಕೈಗಾರಿಕಾ ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ನಗರದ ಕಸಾಪದ ಕುವೆಂಪು ಸಭಾಂಗಣದಲ್ಲಿ ಹಮ್ಮಿಕೊಂಡಿದ್ದ ಸಮಾರಂಭದಲ್ಲಿ ಶಿಕ್ಷಣ ತಜ್ಞ ಡಾ. ವೂಡೆ ಪಿ.ಕೃಷ್ಣ ಪ್ರಶಸ್ತಿ ಪ್ರದಾನ ಮಾಡಿದರು. ಪ್ರಶಸ್ತಿಯು ಸ್ಮರಣ ಫಲಕ ಮತ್ತು 10 ಸಾವಿರ ರೂ.ನಗದು ಬಹುಮಾನ ಒಳಗೊಂಡಿದೆ.

ಕನ್ನಡ ಮಾಧ್ಯಮದಲ್ಲಿ ಸಾಧನೆ ಮಾಡಿದ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸುವ ಉದ್ದೇಶದಿಂದ ಒಕ್ಕೂಟದ ಅಧ್ಯಕ್ಷರ ಹೆಸರಿನಲ್ಲಿ ಈ ಪ್ರಶಸ್ತಿಯನ್ನು ನೀಡಲಾಗುತ್ತದೆ. ಪ್ರಶಸ್ತಿ ಪ್ರದಾನ ಮಾಡಿದ ಡಾ.ವೂಡೆ ಪಿ.ಕೃಷ್ಣ, ''ತಬ್ಬಲಿಯಾದ ತೇಜಸ್ವಿನಿ, ಎಂ.ಎ. ಕನ್ನಡ ವಿಷಯದಲ್ಲಿ 10 ಚಿನ್ನದ ಪದಕಗಳನ್ನು ಪಡೆಯುವ ಮೂಲಕ ಸಮಾಜಕ್ಕೆ ಮಾದರಿಯಾಗಿ ದ್ದಾರೆ,'' ಎಂದು ಪ್ರಶಂಸಿಸಿದರು.

ಒಕ್ಕೂಟದ ಕಾರ್ಯಾಧ್ಯಕ್ಷ ಸಿದ್ದಯ್ಯ, ಪ್ರಧಾನ ಕಾರ್ಯದರ್ಶಿಗಳಾದ ಸು.ಜಗದೀಶ್, ಜಿ. ಹೇಮಂತ್ ಕುಮಾರ್, ಖಜಾಂಚಿ ಜಿ.ರಾಜೇಶ್ ಉಪಸ್ಥಿತರಿದ್ದರು.

ಸಂಯುಕ್ತ ಕರ್ನಾಟಕ ಮಂಗಳವಾರ 14 ಮೇ 2024



ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ಕೊಡಮಾಡುವ ಎಂ.ತಿಮ್ಮಯ್ಯ ವಿದ್ಯಾಚೇತನ ಪ್ರಶಸ್ತಿಯನ್ನು ಎಂ.ಎ ಕನ್ನಡದಲ್ಲಿ ಹತ್ತು ಚಿನ್ನದ ಪದಕಗಳಿಸಿರುವ ಕುಮಾರಿ ವಿ.ತೇಜಸ್ವಿನಿ ಅವರಿಗೆ ನೀಡಲಾಯಿತು. ಶಿಕ್ಷಣ ತಜ್ಞ ಡಾ.ವೂಡೇ ಪಿ.ಕೃಷ್ಣ, ಒಕ್ಕೂಟದ ಅಧ್ಯಕ್ಷ ಎಂ.ತಿಮ್ಮಯ್ಯ, ಅಭಿವೃದ್ಧಿ ಶಿಕ್ಷಣ ತಜ್ಞ ಡಾ.ನಿರಂಜನಾರಾಧ್ಯ ಇತರರಿದ್ದರು.

ಪ್ರಜಾವಾಣಿ
ಮಂಗಳವಾರ • ಮೇ 14, 2024



ಮೈಸೂರು ವಿಶ್ವವಿದ್ಯಾಲಯದಲ್ಲಿ ಎಂ.ಎ. ಕನ್ನಡದಲ್ಲಿ ಚಿನ್ನದ ಪದಕ ಪಡೆದ ತೇಜಸ್ವಿನಿಯವರಿಗೆ ಕರ್ನಾಟಕ ಕೈಗಾರಿಕಾ ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟದಿಂದ ವತಿಯಿಂದ 10 ಸಾವಿರ ನಗದು ಸಹಿತ 'ಎಂ.ತಿಮ್ಮಯ್ಯ ವಿದ್ಯಾಚೇತನ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಶಿಕ್ಷಣ ತಜ್ಞರಾದ ಪ್ರೊ. ಪಿ. ಕೃಷ್ಣ, ನಿರಂಜನಾರಾಧ್ಯ, ಒಕ್ಕೂಟದ ಅಧ್ಯಕ್ಷ ಎಂ. ತಿಮ್ಮಯ್ಯ, ಕಾರ್ಯಾಧ್ಯಕ್ಷ ಸಿದ್ಧಯ್ಯ, ಪ್ರಧಾನ ಕಾರ್ಯದರ್ಶಿಗಳಾದ ಸು. ಜಗದೀಶ್, ಹೇಮಂತ್ ಕುಮಾರ್ ಜೆ., ಖಜಾಂಚಿ ಬಿ.ಜೆ. ರಾಜೇಶ್ ಉಪಸ್ಥಿತರಿದ್ದರು.

ಕನ್ನಡಪ್ರಭ ಮಂಗಳವಾರ 14.05.2024

ಗೌರವಾರ್ಪಣೆ ಎಂ.ತಿಮ್ಮಯ್ಯ ವಿದ್ಯಾಚೇತನ ಪ್ರಶಸ್ತಿ ಪ್ರದಾನ ಸಮಾರಂಭ

# ಸಾರ್ವಜನಿಕ ಶಿಕ್ಷಣ ಕುಸಿತಕ್ಕೆ ಆರಾಧ್ಯ ಕಳವಳ

• ಕನ್ನಡಪ್ರಭ ವಾರ್ತೆ, ಬೆಂಗಳೂರು

ಖಾಸಗಿ ಶಿಕ್ಷಣ ಸಂಸ್ಥೆಗಳಲ್ಲಿ ಪಡೆಯುವ ಶಿಕ್ಷಣವೇ ಶ್ರೇಷ್ಠ ಎಂಬ ಮನೋಭಾವದಿಂದಾಗಿ ಸಾರ್ವಜನಿಕ ಶಿಕ್ಷಣ ಪದ್ಧತಿ ಕ್ಷೀಣವಾಗುತ್ತಿದೆ ಎಂದು ಅಭಿವೃದ್ಧಿ ಶಿಕ್ಷಣ ತಜ್ಞ ಡಾ.ವಿ.ಪಿ. ನಿರಂಜನಾರಾಧ್ಯ ಕಳವಳ ವ್ಯಕ್ತಪಡಿಸಿದರು.

ಭಾನುವಾರ ಕನ್ನಡ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ಆಯೋಜಿಸಿದ್ದ 'ಶ್ರೀ ಎಂ ತಿಮ್ಮಯ್ಯ ವಿದ್ಯಾಚೇತನ' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಮೈಸೂರು ವಿಶ್ವವಿದ್ಯಾಲಯದ ಎಂ.ಎ ಕನ್ನಡ ವಿಭಾಗದಲ್ಲಿ 10 ಚಿನ್ನದ ಪದಕ ಪಡೆದು ಸಾಧನೆ ಮಾಡಿರುವ ವಿ. ತೇಜಸ್ವಿನಿ ಅವರಿಗೆ ಅಭಿನಂದಿಸಿ ಅವರು ಮಾತನಾಡಿದರು.

ದಿನದಿಂದ ದಿನಕ್ಕೆ ಶಿಕ್ಷಣದ ಖಾಸಗೀಕರಣದಿಂದ ಸರ್ಕಾರಿ ಮತ್ತು ಕನ್ನಡ ಮಾಧ್ಯಮ ಶಾಲೆಗಳಲ್ಲಿ ಓದುವವರ ಸಂಖ್ಯೆ ಕಡಿಮೆಯಾಗುತ್ತಿದೆ.

ಇದು ಸಾರ್ವಜನಿಕ ಶಿಕ್ಷಣದ ಅವನತಿಗೆ ಕಾರಣವಾಗುತ್ತಿದೆ. ರಾಜ್ಯದ ಸುಮಾರು 14,832 ಸರ್ಕಾರಿ ಶಾಲೆಗಳಲ್ಲಿ ವಿದ್ಯಾರ್ಥಿಗಳ ಸಂಖ್ಯೆ 50ಕ್ಕೂ ಕಡಿಮೆಯಿದೆ. ಸಾಧನೆಗೆ ಖಾಸಗಿ ಶಿಕ್ಷಣವೇ ಮುಖ್ಯವಾಗುತ್ತದೆ ಎನ್ನುವವರ ಮಧ್ಯೆ ತೇಜಸ್ವಿನಿ ಅವರು ಉನ್ನತ ಶಿಕ್ಷಣದವರೆಗೂ ಸರ್ಕಾರದ ಕಾರ್ಯಕ್ರಮಗಳನ್ನು ಬಳಸಿಕೊಂಡು ಮಾತೃ ಭಾಷೆಯಲ್ಲಿ ಅಧ್ಯಯನ ಮಾಡಿ ಚಿನ್ನದ ಪದಕಗಳನ್ನು ಪಡೆದುಕೊಂಡಿದ್ದಾರೆ. ಇದು ಕನ್ನಡ ಮಾಧ್ಯಮದಲ್ಲಿ ಓದುವ ಪ್ರತಿಯೊಬ್ಬ ವಿದ್ಯಾರ್ಥಿಗೂ ಮಾದರಿ ಎಂದು ಹೇಳಿದರು.ವೂಡೇ ಪಿ. ಕೃಷ್ಣ ಮಾತನಾಡಿ, ನಮ್ಮ ಜನ ಅಮೆರಿಕ ಶಿಕ್ಷಣ ಪದ್ಧತಿಗೆ ಮಾರುಹೋಗಿದ್ದಾರೆ. ಪಾಶ್ಚಾತ್ಯ ಶಿಕ್ಷಣದ ಪ್ರಭಾವದಿಂದ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯ ಮೌಲ್ಯ ಕುಸಿಯುತ್ತಿದೆ. ನಮ್ಮ ಶಿಕ್ಷಣ ಪದ್ಧತಿ, ಸಂಸ್ಕೃತಿ ಮತ್ತು ಜೀವನಶೈಲಿಯಿಂದ ದೂರ ಇರುವುದೇ ನಿಜವಾದ ಸ್ವಾತಂತ್ರ್ಯ ಎಂದು ಈಗಿನ ಯುವ ಜನಾಂಗ ಭಾವಿಸಿದಂತಿದೆ. ಆದರೆ, ಅದು ತಪ್ಪು ಕಲ್ಪನೆ ಎಂದರು.ಒಕ್ಕೂಟದ ಅಧ್ಯಕ್ಷ ಎಂ. ತಿಮ್ಮಯ್ಯ, ಕಾರ್ಯಾಧ್ಯಕ್ಷ ಸಿದ್ಧಯ್ಯ ಉಪಸ್ಥಿತರಿದ್ದರು.



ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ಆಯೋಜಿಸಿದ್ದ ಸಮಾರಂಭದಲ್ಲಿ ಕುಮಾರಿ ವಿ. ತೇಜಸ್ವಿನಿಗೆ 'ಶ್ರೀ ಎಂ. ತಿಮ್ಮಯ್ಯ ವಿದ್ಯಾಚೇತನ' ಪ್ರಶಸ್ತಿ ನೀಡಿ ಸನ್ಮಾನಿಸಲಾಯಿತು. ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ಅಧ್ಯಕ್ಷ ಎಂ. ತಿಮ್ಮಯ್ಯ, ನಾಡೋಜ ಡಾ. ವೂಡೇ ಪಿ. ಕೃಷ್ಣ, ಶಿಕ್ಷಣ ತಜ್ಞ ಡಾ.ವಿ.ಪಿ. ನಿರಂಜನಾರಾಧ್ಯ ಸೇರಿದಂತೆ ಇತರರಿದ್ದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
ಸೋಮವಾರ 13 ಮೇ 2024
13 MAY 2024



ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮೈಸೂರು ವಿವಿ ಎಂಎ ಕನ್ನಡದಲ್ಲಿ 10 ಚಿನ್ನದ ಪದಕ ಪಡೆದಿರುವ ತೇಜಸ್ವಿನಿ ಅವರಿಗೆ 'ಎಂ. ತಿಮ್ಮಯ್ಯ ವಿದ್ಯಾಚೇತನ ಪ್ರಶಸ್ತಿ' ಪ್ರದಾನ ಮಾಡಲಾಯಿತು. ಡಾ. ವೂಡೇ ಪಿ. ಕೃಷ್ಣ, ಡಾ. ವಿ.ಪಿ. ನಿರಂಜನಾರಾಧ್ಯ, ಎಂ. ತಿಮ್ಮಯ್ಯ ಮತ್ತಿತರರಿದ್ದರು.

ಉದಯವಾಣಿ ಬೆಂಗಳೂರು
ಸೋಮವಾರ, ಮೇ 13, 2024

# ಎಂ.ಎ. ಕನ್ನಡದಲ್ಲಿ 10 ಚಿನ್ನ ಪದಕ ಪಡೆದ ತೇಜಸ್ವಿನಿಗೆ ಪ್ರಶಸ್ತಿ



**ಬೆಂಗಳೂರು:** ಕರ್ನಾಟಕ ಕೈಗಾರಿಕಾ ಮತ್ತು ವಾಣಿಜ್ಯೋದ್ಯಮ ಕನ್ನಡ ಸಂಘಗಳ ಒಕ್ಕೂಟದಿಂದ ಕೊಡಮಾಡುವ 'ಶ್ರೀ ಎಂ.ತಿಮ್ಮಯ್ಯ ವಿದ್ಯಾಚೇತನ ಪ್ರಶಸ್ತಿ'ಯನ್ನು ಎಂ.ಎ. ಕನ್ನಡದಲ್ಲಿ 10 ಚಿನ್ನದ ಪದಕ ಪಡೆದಿರುವ ಕು. ತೇಜಸ್ವಿನಿಗೆ ಶಿಕ್ಷಣ ತಜ್ಞ ನಾಡೋಜ ಡಾ. ವೂಡೆ ಪಿ ಕೃಷ್ಣ ಪ್ರದಾನ ಮಾಡಿದರು. ಚಾಮರಾಜಪೇಟೆಯ ಕನ್ನಡ ಸಾಹಿತ್ಯ ಪರಿಷತ್ತಿನ ಕುವೆಂಪು ಸಭಾಂಗಣದಲ್ಲಿ ಭಾನುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಪ್ರಶಸ್ತಿ ಪ್ರದಾನ ಮಾಡಿ ಮಾತನಾಡಿದ ಅವರು, ಒಕ್ಕೂಟದ ಅಧ್ಯಕ್ಷರ ಹೆಸರಿನಲ್ಲಿ ಪ್ರಶಸ್ತಿ ಫಲಕ ಹಾಗೂ 10 ಸಾವಿರ ರೂ. ನಗದು ಬಹುಮಾನ ನೀಡುತ್ತಿರುವುದು ನನಗೆ ಸಂತೋಷವಾಗುತ್ತಿದೆ ಎಂದರು. ತೇಜಸ್ವಿನಿಗೆ ಮುಂದಿನ ಪಿ.ಎಚ್.ಡಿ. ಮಾಡಲು ಸಂಪೂರ್ಣ ಸಹಕಾರ ನೀಡುವುದಾಗಿ ಅಭಿವೃದ್ಧಿ ಶಿಕ್ಷಣ ತಜ್ಞ ಡಾ. ವಿ.ಪಿ. ನಿರಂಜನಾರಾಧ್ಯ ತಿಳಿಸಿದರು. ಈ ವೇಳೆ ಒಕ್ಕೂಟದ ಅಧ್ಯಕ್ಷ ಎಂ.ತಿಮ್ಮಯ್ಯ, ಕಾರ್ಯಾಧ್ಯಕ್ಷ ಸಿದ್ದಯ್ಯ, ಪ್ರಧಾನ ಕಾರ್ಯದರ್ಶಿಗಳಾದ ಸು. ಜಗದೀಶ್, ಜಿ. ಹೇಮಂತ್ ಕುಮಾರ್, ಖಜಾಂಚಿ ಬಿ.ಜಿ. ರಾಜೇಶ್ ಇತರರಿದ್ದರು.



ಕನ್ನಡಪ್ರಭ

ಶನಿವಾರ 11.05.2024

# 'ಜನವಾಣಿಯನ್ನು ದೈವವಾಣಿ ಮಾಡಿದ ಶಿವಶರಣ ಬಸವಣ್ಣ'



**ಬೆಂಗಳೂರು:** ಜನವಾಣಿಯನ್ನು ದೈವವಾಣಿಯಾಗಿ ಮಾಡಿದವರು ಬಸವಣ್ಣ ಎಂದು ಸುಪ್ರೀಂ ಕೋರ್ಟ್ ವಿಶ್ರಾಂತ ನ್ಯಾಯಮೂರ್ತಿ ಶಿವರಾಜ್ ಪಾಟೀಲ್ ಹೇಳಿದರು.

ಶುಕ್ರವಾರ ಚಾಮರಾಜಪೇಟೆಯ ಕಸಾಪ ಸಭಾಂಗಣದಲ್ಲಿ ಕರ್ನಾಟಕ ಪ್ರತಿಭಾವರ್ಧಕ ಅಕಾಡೆಮಿ ಆಯೋಜಿಸಿದ್ದ ವಿಶ್ವ ಗುರು ಬಸವೇಶ್ವರ ಜಯಂತಿ ಹಾಗೂ ನಾಡಿನ ಸಾಧಕರಿಗೆ 'ಕಾಯಕ ರತ್ನ' ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಅವರು ಮಾತನಾಡಿದರು.

**ಕಾಯಕ ರತ್ನ ಪ್ರಶಸ್ತಿ:** ಖ್ಯಾತ ಗಾಯಕಿ ಬಿ.ಕೆ.ಸುಮಿತ್ರಾ, ರಾಜ್ಯ ಪರಿಸರ ಮಾಲಿನ್ಯ ಮಂಡಳಿ ಅಧ್ಯಕ್ಷರಾದ ಶಾಂತ ತಿಮ್ಮಯ್ಯ, ಎಂಜಿನಿಯರ್ ಬಿ.ದುರುಗಪ್ಪ, ವಚನ ಗಾಯಕಿ ಅರುಣಾ ಚಂದ್ರಶೇಖರ್‌ಗೆ 'ಕಾಯಕ ರತ್ನ' ಪ್ರಶಸ್ತಿ ನೀಡಿ ಗೌರವಿಸಲಾಯಿತು. ಈ ವೇಳೆ ಮಧುಸೂಧನಾಂದಪುರಿ ಸ್ವಾಮೀಜಿ, ವೂಡೇ ಪಿ.ಕೃಷ್ಣ ಇದ್ದರು.

ಪ್ರಜಾವಾಣಿ

ಶನಿವಾರ • ಮೇ 11, 2024



ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶುಕ್ರವಾರ ಕರ್ನಾಟಕ ಪ್ರತಿಭಾವರ್ಧಕ ಅಕಾಡೆಮಿ ಆಯೋಜಿಸಿದ್ದ ಬಸವೇಶ್ವರ ಜಯಂತಿ ಅಂಗವಾಗಿ ಬಿ.ಕೆ. ಸುಮಿತ್ರ ಅವರಿಗೆ 'ಕಾಯಕ ರತ್ನ' ಪ್ರಶಸ್ತಿಯನ್ನು ನೀಡಿ ಗೌರವಿಸಲಾಯಿತು. ವಚನ ಗಾಯಕಿ ಅರುಣ ಚಂದ್ರಶೇಖರ್, ಯಶವಂತ, ಜಸ್ಟಿಸ್ ಶಿವರಾಜ್ ಪಾಟೀಲ, ಶೇಷಾದ್ರಿಪುರಂ ಎಜುಕೇಶನ್ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ವೂಡೇ ಪಿ.ಕೃಷ್ಣ, ಸಾಹಿತಿ ಮಲ್ಲೇಪುರಂ ಜಿ. ವೆಂಕಟೇಶ್, ಶಾಂತ್ ಎ. ತಿಮ್ಮಯ್ಯ ಉಪಸ್ಥಿತರಿದ್ದರು

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
VIJAYAVANI » BENGALURU
ಶನಿವಾರ 11 ಮೇ 2024
11 MAY 2024



# ಬೆಂಗಳೂರು ಸಿಟಿ ಎಕ್ಸ್‌ಪ್ರೆಸ್

ವಿಜಯವಾಣಿ ಚಿತ್ರ



## ಪ್ರಶಸ್ತಿ ಪ್ರದಾನ

ಬಸವ ಜಯಂತಿ ಅಂಗವಾಗಿ ಕರ್ನಾಟಕ ಪ್ರತಿಭಾವರ್ಧಕ ಅಕಾಡೆಮಿ ಕಸಾಪದಲ್ಲಿ ಆಯೋಜಿಸಿದ್ದ ಸಮಾರಂಭದಲ್ಲಿ ಗಾಯಕಿ ಬಿ.ಕೆ. ಸುಮಿತ್ರಾಗೆ 'ಕಾಯಕ ರತ್ನ' ಪ್ರಶಸ್ತಿ ಪ್ರದಾನ ಮಾಡಲಾಯಿತು. ವಿಶ್ರಾಂತ ನ್ಯಾಯಮೂರ್ತಿ ಶಿವರಾಜ ಪಾಟೀಲ್, ಶೇಷಾದ್ರಿಪುರಂ ಶಿಕ್ಷಣ ಟ್ರಸ್ಟ್ ಪ್ರಧಾನ ಕಾರ್ಯದರ್ಶಿ ಡಾ. ವೂಡೇ ಪಿ. ಕೃಷ್ಣ, ಹಿರಿಯ ವಿಮರ್ಶಕ ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಇತರರಿದ್ದರು.

ನಂ. 1 ಕನ್ನಡ ದಿನಪತ್ರಿಕೆ

ಭಾನುವಾರ 5 ಮೇ 2024
5 MAY 2024

# ಸರಳ- ಸಜ್ಜನಿಕೆಯ ಡಾ. ಸಿಸಿರಾ



ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ ಡಾ. ಸಿಸಿರಾ ಸ್ನೇಹ ಬಳಗ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಡಾ. ರಾಮಲಿಂಗೇಶ್ವರ ಸಿಸಿರಾ ದಂಪತಿಯನ್ನು ಗೌರವಿಸಲಾಯಿತು. ವಿದ್ವಾಂಸ ಡಾ. ಹಂಪ ನಾಗರಾಜಯ್ಯ, ಡಾ. ಮನು ಬಳಿಗಾರ್, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್, ಎಸ್.ಜಿ. ಸುಶೀಲಮ್ಮ ಇತರರಿದ್ದರು.

**ಬೆಂಗಳೂರು:** ಸರಳ- ಸಜ್ಜನಿಕೆಯ ಡಾ. ರಾಮಲಿಂಗೇಶ್ವರ ಸಿಸಿರಾ 26 ವರ್ಷಗಳಿಂದ ಕನ್ನಡ ನಾಡು-ನುಡಿ, ಸಾಹಿತ್ಯ ಹಾಗೂ ಸಂಸ್ಕೃತಿ ಸಂಘಟನೆಯಲ್ಲಿ ತೊಡಗಿರುವುದು ಶ್ಲಾಘನೀಯ ಎಂದು ಹಿರಿಯ ವಿದ್ವಾಂಸ ಡಾ. ಹಂಪ ನಾಗರಾಜಯ್ಯ ಹೇಳಿದ್ದಾರೆ.

ಸಿಸಿರಾ ಅವರಿಗೆ 50 ವರ್ಷ ತುಂಬಿದ ಹಿನ್ನೆಲೆ ನಗರದ ಶೇಷಾದ್ರಿಪುರ ಕಾಲೇಜಿನಲ್ಲಿ ಡಾ. ಸಿಸಿರಾ ಸ್ನೇಹ ಬಳಗ ಆಯೋಜಿಸಿದ್ದ ಸಮಾರಂಭದಲ್ಲಿ ಮಾತನಾಡಿದರು. ಕನ್ನಡದ ಬೆಳವಣಿಗೆಯಲ್ಲಿ ಪರಿಚಾರಿಕೆಯ ಕೆಲಸ ಮಾಡುವಾಗ ತನು-ಮನ- ಧನದ ಜತೆಗೆ ತ್ರಿಕರಣ ಶುದ್ಧಿ, ನಿರ್ಮಲ ಮನಸ್ಸಿನಿಂದ ಸಿಸಿರಾ ಸೇವೆ ಮಾಡಿದ್ದಾರೆ ಎಂದರು.

ಶಿಕ್ಷಣತಜ್ಞ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ಸಿಸಿರಾ ಕನ್ನಡ ಸಾಹಿತ್ಯ ಸೇವೆಯನ್ನು ತಮ್ಮ ಮೈಮೇಲೆ ಎಳೆದುಕೊಂಡು ಮೈಮನಸ್ಸಿನೊಳಗೆ ತುಂಬಿಕೊಂಡು ನಮ್ಮ ಕಾಲೇಜಿನ ಕನ್ನಡ ಮೇಷ್ಟ್ರಾಗಿ ಕಾಲೇಜಿಗೆ, ಸಮಾಜಕ್ಕೆ ತಮ್ಮದೇ ಆದ ಸೇವೆ ಮಾಡಿದ್ದಾರೆ ಎಂದು ಹೇಳಿದರು. ಇದೇ ವೇಳೆ ಗಾಯಕರಾದ ಹೊಸಹಳ್ಳಿ ವಾಸುದೇವ್, ಕಂಟನಕುಂಟೆ ಅಶ್ವತ್ಥ್‌ನಾರಾಯಣ, ಕಿಕ್ಕೇರಿ ಕೃಷ್ಣಮೂರ್ತಿ ಗೀತಗಾಯನ ನಡೆಸಿಕೊಟ್ಟರು. ಸುಮಂಗಲಿ ಸೇವಾಶ್ರಮದ ಮುಖ್ಯಸ್ಥೆ ಎಸ್.ಜಿ. ಸುಶೀಲಮ್ಮ, ಕಸಾಪದ ನಿಕಟಪೂರ್ವ ಅಧ್ಯಕ್ಷ ಡಾ. ಮನು ಬಳಿಗಾರ್ ಮತ್ತಿತರರಿದ್ದರು.

> ಎಲೆ ಮರೆಯ ಕಾಯಿಯಂತೆ ಸೇವೆ ಸಲ್ಲಿಸುತ್ತಿರುವ ಎಲ್ಲ ಕ್ಷೇತ್ರಗಳ ನೈಜ ಸಾಧಕರನ್ನು ಗುರುತಿಸಿ ಪ್ರಶಸ್ತಿ, ಪುರಸ್ಕಾರ, ಕಾವ್ಯ ಕಥಾ ಕಮ್ಮಟ ಏರ್ಪಡಿಸಿ ಎಲ್ಲರನ್ನೂ ಸಂತೋಷಪಡಿಸುವ ಡಾ. ರಾಮಲಿಂಗೇಶ್ವರ ತನ್ನ ಜೀವನದ ಸಾರ್ಥಕತೆಯನ್ನು ಪಡೆದುಕೊಂಡಿರುವುದು ಶ್ಲಾಘನೀಯ.
>
> **। ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್** ಸಾಹಿತಿ

ವಿಜಯ ಕರ್ನಾಟಕ ಭಾನುವಾರ,5 ಮೇ 2024



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಲೇಖಕ ಎಸ್. ಸುರೇಶ್ ರಚನೆಯ 'ಮತ್ತೆ ತೋಚಿದ್ದು, ಮತ್ತೆ ಗೀಚಿದ್ದು' ಚುಟುಕು ಕವನ ಸಂಕಲನವನ್ನು ಹಾಸ್ಯ ಕಲಾವಿದ ಗಂಗಾವತಿ ಪ್ರಾಣೇಶ್ ಬಿಡುಗಡೆಗೊಳಿಸಿದರು. ನಾಡೋಜ ವೂಡೇ ಪಿ.ಕೃಷ್ಣ, ಪ್ರೊ. ಕೆ.ಇ.ರಾಧಾಕೃಷ್ಣ, ಎಂ.ಎಸ್.ನಟರಾಜ್, ಕೆ.ಶೇಷಾದ್ರಿ ಇದ್ದರು.

ಈ ಸಂಜೆ

May 4, 2024



ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ ಕಾರ್ಯಕ್ರಮದಲ್ಲಿ ಸುರೇಶ್.ಎಸ್ ಅವರ ಮತ್ತೆ ತೋಚಿದ್ದು, ಮತ್ತೆ ಗೀಚಿದ್ದು, ಕೃತಿಯನ್ನು ಸಾಹಿತಿ ಹಾಸ್ಯಕಲಾವಿದ ಗಂಗಾವತಿ ಪ್ರಾಣೇಶ್, ನಾಡೋಜ ಡಾ.ವೂಡೇ ಪಿ.ಕೃಷ್ಣ, ನಿವೃತ್ತ ಸಂಸ್ಕೃತ ಅಧ್ಯಾಪಕ ಕೆ.ಶೇಷಾದ್ರಿ, ನಿವೃತ್ತಿ ಪ್ರಾಂಶುಪಾಲ ಕೆ.ಇ.ರಾಧಾಕೃಷ್ಣ, ರೇಖಾ ಚಿತ್ರಕಾರ ಪುಂಡಲೀಕ ಕಲ್ಲಿಗನೂರು ಬಿಡುಗಡೆ ಮಾಡಿದರು.

ಕನ್ನಡಪ್ರಭ

May 3, 2024



ನಗರದಲ್ಲಿ ಡಾ। ಸಿಸಿರಾ ಸ್ನೇಹ ಬಳಗ ಆಯೋಜಿಸಿದ್ದ ಸಾಹಿತಿ ಸಿಸಿರಾ ಅವರ 51ರ ಸಂಭ್ರಮ ಕಾರ್ಯಕ್ರಮವನ್ನು ಡಾ। ಹಂಪ ನಾಗರಾಜಯ್ಯ ಉದ್ಘಾಟಿಸಿದರು. ಕಾರ್ಯಕ್ರಮದಲ್ಲಿ ವೂಡೇ ಪಿ.ಕೃಷ್ಣ, ಡಾ। ಮನು ಬಳಿಗಾರ್ ಉಪಸ್ಥಿತರಿದ್ದರು.

**ಶಿಶಿರ 54ರ ಸಂಭ್ರಮ**

# 'ಕನ್ನಡ ಪರಿಚಾರಿಕೆಗೆ ತ್ರಿಕರಣ ಶುದ್ಧಿ ಅಗತ್ಯ'

• ಕನ್ನಡಪ್ರಭ ವಾರ್ತೆ ಬೆಂಗಳೂರು

ಕನ್ನಡದ ಬೆಳವಣಿಗೆಯಲ್ಲಿ ಪರಿಚಾರಿಕೆಯ ಕೆಲಸವನ್ನು ತನು, ಮನ, ಧನ ವ್ಯಯಿಸಿ ತ್ರಿಕರಣ ಶುದ್ಧಿ, ನಿರ್ಮಲ ಮನಸ್ಸಿನಿಂದ ಮಾಡಬೇಕು ಎಂದು ವಿದ್ವಾಂಸ ಡಾ। ಹಂ.ಪ.ನಾಗರಾಜಯ್ಯ ಅಭಿಪ್ರಾಯಪಟ್ಟರು.

ನಗರದ ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಡಾ। ಸಿಸಿರಾ ಸ್ನೇಹ ಬಳಗ ಆಯೋಜಿಸಿದ್ದ ಸಿಸಿರಾ ಅವರ 51ರ ಸಂಭ್ರಮ ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು. ಸರಳ ಸಜ್ಜನಿಕೆಯ ಸುಸಂಸ್ಕೃತ ಡಾ। ರಾಮಲಿಂಗೇಶ್ವರ ಅವರು (ಸಿಸಿರಾ) ಕಾವ್ಯನಾಮದಲ್ಲಿ ಕಳೆದ 26 ವರ್ಷಗಳಿಂದ ಕನ್ನಡ ನಾಡು ನುಡಿ, ಸಾಹಿತ್ಯ ಸಂಸ್ಕೃತಿ ಸಂಘಟನೆಯಲ್ಲಿ ನಿರಂತರ ಕೆಲಸ ಮಾಡುತ್ತಿದ್ದಾರೆ ಎಂದರು.

ಸಿಸಿರಾ ಅವರ ಬದುಕು ಬರಹ ಕೃತಿ 'ಕನ್ನಡ ಮಾಣಿಕ್ಯ' ಗ್ರಂಥವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಡಾ। ವೂಡೇ ಪಿ. ಕೃಷ್ಣ ಜನಾರ್ಪಣೆ ಮಾಡಿದರು. ಕಸಾಪ ನಿಕಟಪೂರ್ವ ಅಧ್ಯಕ್ಷ ಡಾ. ಮನು ಬಳಿಗಾರ್, ಸುಮಂಗಲಿ ಸೇವಾಶ್ರಮದ ಅಧ್ಯಕ್ಷರಾದ ಡಾ.ಎಸ್.ಜಿ.ಸುಶೀಲಮ್ಮ, ನಿವೃತ್ತ ತಹಸೀಲ್ದಾರ್‌ಕೆ.ಎಂ.ರೇವಣ್ಣ, ಕವಯಿತ್ರಿ ಜಯಶ್ರೀ ರಾಜು ಉಪಸ್ಥಿತರಿದ್ದರು.

ಉದಯವಾಣಿ

ಮಂಗಳವಾರ, ಏಪ್ರಿಲ್ 30, 2024

# ಸಾಹಿತ್ಯದ ಬಗ್ಗೆ ನಿರ್ಲಕ್ಷ್ಯ: ಹಂಪನಾ ಕಳವಳ

## ಹಿರಿಯ ಸಾಹಿತಿ ಡಾ.ಎಸ್.ರಾಮಲಿಂಗೇಶ್ವರ ಅಭಿನಂದನಾ ಸಮಾರಂಭದಲ್ಲಿ ಕನ್ನಡ ಮಾಣಿಕ್ಯ ಗ್ರಂಥ ಬಿಡುಗಡೆ

■ **ಉದಯವಾಣಿ ಸಮಾಚಾರ**

**ಬೆಂಗಳೂರು:** ಸಾಹಿತ್ಯದ ಕಾವ್ಯರಸ ಹೊಟ್ಟೆ ತುಂಬಿಸುತ್ತಾ ಎಂದು ಪ್ರಶ್ನಿಸುವ ಕಾಲಘಟ್ಟದಲ್ಲಿ ನಾವಿದ್ದೇವೆ. ದುಡ್ಡಿನಿಂದಲೇ ಎಲ್ಲ ಸಾಧ್ಯ ಎನ್ನುವರ ಮಧ್ಯೆ ಬದುಕುತ್ತಿದ್ದೇವೆ ಎಂದು ನಾಡೋಜ, ಸಾಹಿತಿ ಹಂಪ ನಾಗರಾಜಯ್ಯ ಕಳವಳ ವ್ಯಕ್ತಪಡಿಸಿದರು.

ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಆಯೋಜಿಸಿದ್ದ ಸಾಹಿತಿ ಹಾಗೂ ಕನ್ನಡ ಉಪನ್ಯಾಸಕ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರ 50ನೇ ಅಭಿನಂದನಾ ಸಮಾರಂಭದಲ್ಲಿ 'ಕನ್ನಡ ಮಾಣಿಕ್ಯ' ಗ್ರಂಥ ಬಿಡುಗಡೆಗೊಳಿಸಿ ಅವರು ಮಾತನಾಡಿದರು.

ಇವತ್ತು ಕನ್ನಡ, ಕನ್ನಡ ಎನ್ನಲು ಸಾಹಿತಿಗಳಿಗೂ ಕಷ್ಟವಾಗುತ್ತಿದೆ. ನಿಮ್ಮ ಸಾಹಿತ್ಯ ತೆಗೆದುಕೊಂಡು ಏನಾಗಬೇಕಿದೆ ಎಂದು ಕೇಳುವವರು ಇದ್ದಾರೆ. ಬೇಸಿಗೆ ಬಂದಿದೆ. ಬೆಂಗಳೂರಿನಲ್ಲಿ ವಾತಾವರಣ 34 ಡಿಗ್ರಿ ಸೆಲ್ಸಿಯಸ್‌ಗೆ ಹೋಗಿದೆ. ಕಾವ್ಯ ರಸ ಕುಡಿದು ಹೊಟ್ಟೆ ತುಂಬಿಸಿಕೊಳ್ಳಲು ಸಾಧ್ಯವೇ ಎಂದು ಕೇಳುವವರು ಇದ್ದಾರೆ ಎಂದು ಬೇಸರ ವ್ಯಕ್ತಪಡಿಸಿದರು.

ಡಾ.ಎಸ್.ರಾಮಲಿಂಗೇಶ್ವರ ಅವರು ಅಪಾರ ಶಿಷ್ಯರನ್ನು ಸಂಪಾದಿಸಿದ್ದಾರೆ. ತಾವು ಬೆಳೆಯುವುದರ ಜತೆಗೆ ವಿದ್ಯಾರ್ಥಿಗಳಿಗೂ ವೇದಿಕೆ ಕಲ್ಪಿಸುತ್ತಾರೆ. ಕನ್ನಡ ಕೆಲಸ ಎಂದ ಕೂಡಲೇ ತಮ್ಮೆಲ್ಲ ಕೆಲಸವನ್ನು ಬದಿಗೊತ್ತಿ ನಿಲ್ಲುತ್ತಾರೆ. ಕನ್ನಡ ಸಾಹಿತ್ಯದ ಪರಿಚಾಲಕರಾಗಿ ಕೆಲಸ ಮಾಡುತ್ತಾರೆ ಎಂದು ಶ್ಲಾಘಿಸಿದರು.

ಬರಹಗಾರ ಡಾ.ಕೆ.ಪಿ.ಪುತ್ತೂರಾಯ ಮಾತನಾಡಿ, ನಾವು ಸತ್ತ ಮೇಲೆ ನಮ್ಮ ಬಟ್ಟೆ ಬಡವರ ಪಾಲು, ನಮ್ಮ ಆಸ್ತಿ ಮಡದಿ, ಮಕ್ಕಳ ಪಾಲು, ಮಗ ಹಾಕುವ ಪಿಂಡ ಕಾಗೆಗಳ ಪಾಲು, ನನ್ನ ದೇಹ ಅಗ್ನಿಪಾಲು. ಆದರೆ, ನಾವು ಮಾಡುವ ಪರೋಪಕಾರ ಮತ್ತು ಸಮಾಜಸೇವೆ ಮಾತ್ರ ನಮ್ಮ ಪಾಲಾಗಿರುತ್ತದೆಎಂದರು.

ಹಿರಿಯ ಸಂಸ್ಕೃತ ವಿದ್ವಾಂಸ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಕನ್ನಡ ಸಾಹಿತ್ಯ ಪರಿಷತ್. ಮಾಜಿ ಅಧ್ಯಕ್ಷ ಮನು ಬಳಿಗಾರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಹಾಗೂ ಶಿಕ್ಷಣ ತಜ್ಞ ವೂಡೇ ಪಿ.ಕೃಷ್ಣ ಅವರು 'ಕನ್ನಡ ಉಪನ್ಯಾಸಕ ಡಾ.ಎಸ್. ರಾಮಲಿಂಗೇಶ್ವರ ಅವರ ಸಾಧನೆ ಬಗ್ಗೆ ಪ್ರಶಂಸಿಸಿದರು.

ಇದೇ ವೇಳೆ ಸಿಸಿರಾ ದಂಪತಿಯನ್ನು ಅಭಿನಂದಿಸಲಾಯಿತು. ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಡಾ.ಎಸ್.ಜಿ.ಸುಶೀಲಮ್ಮ ಇತರರಿದ್ದರು.



ಕಾರ್ಯಕ್ರಮದಲ್ಲಿ ಸಾಹಿತಿ ಡಾ.ಎಸ್.ರಾಮಲಿಂಗೇಶ್ವರ ದಂಪತಿಯನ್ನು ಸನ್ಮಾನಿಸಲಾಯಿತು.

ಸಂಯುಕ್ತ ಕರ್ನಾಟಕ
ಮಂಗಳವಾರ 30 ಏಪ್ರಿಲ್ 2024
ಬೆಂಗಳೂರು । BENGALURU



ಡಾ.ಸಿಸಿರಾ ಸ್ನೇಹ ಬಳಗದ ವತಿಯಿಂದ ಆಯೋಜಿಸಿದ್ದ ಸಾಂಸ್ಕೃತಿಕ ಪರಿಚಾರಕ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರ 51ರ ಸಂಭ್ರಮ ಕಾರ್ಯಕ್ರಮದಲ್ಲಿ ಸಿ.ಹೇಮಾವತಿ ಸಿಸಿರಾ ದಂಪತಿಯನ್ನು ಸನ್ಮಾನಿಸಲಾಯಿತು. ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ವೆಂಕಟೇಶ್, ಹಿರಿಯ ವಿದ್ವಾಂಸ ಪ್ರೊ.ಹಂಪನಾ, ಕಸಾಪ ನಿಕಟಪೂರ್ವ ಅಧ್ಯಕ್ಷ ಡಾ.ಮನು ಬಳಿಗಾರ್, ಶಿಕ್ಷಣ ತಜ್ಞ ಡಾ.ವೂಡೇ ಪಿ. ಕೃಷ್ಣ ಮತ್ತಿತರರಿದ್ದರು.

ವಿಜಯ ಕರ್ನಾಟಕ ಮಂಗಳವಾರ,30 ಏಪ್ರಿಲ್ 2024

# ವಿದ್ಯಾರ್ಥಿಗಳ ಜತೆ ಒಡನಾಟವಿರಲಿ

## ಅಧ್ಯಾಪಕರಿಗೆ ಪ್ರೊ.ಹಂಪ ನಾಗರಾಜಯ್ಯ ಸಲಹೆ



ಉಪನ್ಯಾಸಕ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರನ್ನು ಅಭಿನಂದಿಸಲಾಯಿತು.

**ಬೆಂಗಳೂರು:** 'ವಿದ್ಯಾರ್ಥಿಗಳ ವಿಶ್ವಾಸವೇ ಅಧ್ಯಾಪಕರ ಶ್ವಾಸವಾಗಿರಬೇಕು. ಆ ಮಟ್ಟಿಗೆ ಬೋಧಕರು ಅಧ್ಯಾಪನ, ಅಧ್ಯಯನ ಮತ್ತು ವಿದ್ಯಾರ್ಥಿಗಳಿಗೆ ಉತ್ತಮ ಒಡನಾಟ ಹೊಂದಿರಬೇಕು' ಎಂದು ಹಿರಿಯ ಸಾಹಿತಿ ನಾಡೋಜ ಪ್ರೊ.ಹಂಪ ನಾಗರಾಜಯ್ಯ ಹೇಳಿದರು.

ಡಾ.ಸಿಸಿರಾ ಸ್ನೇಹ ಬಳಗದ ವತಿಯಿಂದ ಸಾಹಿತಿ, ಪರಿಚಾರಕ, ಉಪನ್ಯಾಸಕ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರಿಗೆ 50ರ ಅಭಿನಂದನೆ, 'ಕನ್ನಡ ಮಾಣಿಕ್ಯ' ಗ್ರಂಥ ಲೋಕಾರ್ಪಣೆ ಮತ್ತು ಪ್ರಶಸ್ತಿ ಪ್ರದಾನ ಸಮಾರಂಭದಲ್ಲಿ ಗ್ರಂಥ ಬಿಡುಗಡೆಗೊಳಿಸಿ ಅವರು ಮಾತನಾಡಿದರು.

''ಸಾಹಿತ್ಯ, ಸಂಘಟನೆಯಲ್ಲಿ ತೊಡಗಿರುವ ಸಿಸಿರಾ, ಸಾಹಿತಿಗಳು, ವಿದ್ಯಾರ್ಥಿಗಳೂ ಸೇರಿದಂತೆ ಎಲ್ಲರ ವಿಶ್ವಾಸ ಗಳಿಸಿದ್ದಾರೆ. ಪ್ರತಿಫಲಾಪೇಕ್ಷೆ ಇಲ್ಲದೆ ಕನ್ನಡದ ಎಲ್ಲ ಕಾರ್ಯಕ್ರಮಗಳಿಗೆ ತಮ್ಮ ಕೈಲಾದ ನೆರವು ನೀಡುವ ಅವರು, ಸಂಘ-ಸಂಸ್ಥೆಗಳಿಗೆ ಸಹಯೋಗ ನೀಡಿ, ಮಾರ್ಗದರ್ಶನ ಮಾಡಿ ಮುಂಚೂಣಿಯಲ್ಲಿ ನಿಂತು ಪ್ರೋತ್ಸಾಹಿಸುತ್ತಾರೆ,'' ಎಂದರು.

ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಸಾಹಿತಿ ಡಾ. ಕೆ.ಪಿ.ಪುತ್ತೂರಾಯ, ಕನ್ನಡ ಸಾಹಿತ್ಯ ಪರಿಷತ್‌ನ ಮಾಜಿ ಅಧ್ಯಕ್ಷ ಮನು ಬಳಿಗಾರ್ ಮಾತನಾಡಿದರು.

ಸಾಹಿತ್ಯ, ಸಂಘಟನೆ ಕ್ಷೇತ್ರ ಸಾಧಕರಿಗೆ 'ಕನ್ನಡ ಮಾಣಿಕ್ಯ' ಪ್ರಶಸ್ತಿ ನೀಡಿ ಗೌರವಿಸಲಾಯಿತು. ಡಾ.ಎಸ್. ರಾಮಲಿಂಗೇಶ್ವರ ದಂಪತಿ, ಡಾ.ಎಸ್.ಜಿ. ಸುಶೀಲಮ್ಮ, ವೂಡೇ ಪಿ.ಕೃಷ್ಣ, ಕೆ.ಎಂ.ರೇವಣ್ಣ, ಡಾ.ಆರ್.ವಾದಿರಾಜು, ಡಾ.ಬಿ.ಕೃಷ್ಣ ಉಪಸ್ಥಿತರಿದ್ದರು.

ಸಂಜೆವಾಣಿ

Monday 29 April 2024



ಡಾ. ಸಿಸಿರಾ ಸ್ನೇಹ ಬಳಗವು ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಸಾಂಸ್ಕೃತಿಕ ಪರಿಚಾರಕ ಡಾ. ಎಸ್. ರಾಮಲಿಂಗೇಶ್ವರರವರ 51ರ ಸಂಭ್ರಮ ಕಾರ್ಯಕ್ರಮದಲ್ಲಿ ಸಿ. ಹೇಮಾವತಿ ಸಿಸಿರಾ ದಂಪತಿಯನ್ನು ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರ ವೆಂಕಟೇಶ್‌ರವರು "ಕನ್ನಡ ಮಾಣಿಕ್ಯ" ಪ್ರಶಸ್ತಿ ಪ್ರದಾನ ಮಾಡಿ ಗೌರವಿಸಿದರು. ನಾಡೋಜ ಪ್ರೊ. ಹಂಪನಾ, ನಾಡೋಜ ಡಾ. ಮನುಬಳಿಗಾರ್, ಶಿಕ್ಷಣ ತಜ್ಞ ನಾಡೋಜ ಡಾ. ವೂಡೇ ಪಿ ಕೃಷ್ಣ, ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಡಾ. ಎಸ್.ಜಿ. ಸುಶೀಲಮ್ಮ ಉಪಸ್ಥಿತರಿದ್ದರು.

ಈ ಸಂಜೆ

Apr 29, 2024



ಡಾ.ಸಿಸಿರಾ ಸ್ನೇಹ ಬಳಗದಿಂದ ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ ಸಾಂಸ್ಕೃತಿಕ ಪರಿಚಾರಕ ಡಾ.ಎಸ್.ರಾಮಲಿಂಗೇಶ್ವರ(ಸಿಸಿರಾ)-51ರ ಸಂಭ್ರಮ ಕಾರ್ಯಕ್ರಮದಲ್ಲಿ ಸಿ.ಹೇಮಾವತಿ ಸಿಸಿರಾ ದಂಪತಿಗೆ ಕನ್ನಡ ಮಾಣಿಕ್ಯ ಪ್ರಶಸ್ತಿ ಪ್ರದಾನ ಮಾಡಲಾಯಿತು. ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ವೆಂಕಟೇಶ್, ಹಿರಿಯ ವಿದ್ವಾಂಸರಾದ ನಾಡೋಜ ಪ್ರೊ.ಹಂಪನಾ, ಕಸಾಪ ನಿಕಟಪೂರ್ವ ಅಧ್ಯಕ್ಷ ನಾಡೋಜ ಡಾ.ಮನು ಬಳಿಗಾರ್, ಶಿಕ್ಷಣ ತಜ್ಞ ನಾಡೋಜ ಡಾ.ವೂಡೇ ಪಿ. ಕೃಷ್ಣ, ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಡಾ.ಎಸ್.ಜಿ.ಸುಶೀಲಮ್ಮ ಈ ಸಂದರ್ಭದಲ್ಲಿದ್ದರು.


ಜನದನಿಯ ಸಾರಥಿ
ವಾರ್ತಾ ಭಾರತಿ

Apr 29, 2024

# ‘ಸಿಸಿರಾ’ ಕನ್ನಡ ಬೆಳೆಸುವ ಕೆಲಸದಲ್ಲಿ ನಿರತರಾಗಿದ್ದಾರೆ: ಮನು ಬಳಿಗಾರ್

ಬೆಂಗಳೂರು, ಎ.28: ಉಪನ್ಯಾಸಕ ಹಾಗೂ ಲೇಖಕ ಡಾ.ಸಿಸಿರಾ ತಮ್ಮ ಜೀವನದುದ್ದಕ್ಕೂ ಕನ್ನಡ ಕಟ್ಟುವ, ಪೋಷಿಸುವ ಮತ್ತು ಬೆಳೆಸುವ ಕೆಲಸಗಳನ್ನು ನಿರಂತರವಾಗಿ ಮಾಡಿಕೊಂಡು ಬರುತ್ತಿದ್ದಾರೆ ಎಂದು ಸಾಹಿತಿ, ನಾಡೋಜ ಡಾ.ಮನು ಬಳಿಗಾರ್ ಬಣ್ಣಿಸಿದ್ದಾರೆ.

ರವಿವಾರ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ 'ಕನ್ನಡ ಮಾಣಿಕ್ಯ' ಪುಸ್ತಕ ಬಿಡುಗಡೆ ಸಮಾರಂಭದಲ್ಲಿ ಮಾತನಾಡಿದ ಅವರು, 'ಡಾ.ರಾಮಲಿಂಗೇಶ್ವರ(ಸಿಸಿರಾ) ಒಬ್ಬ ಕನ್ನಡದ ಕಟ್ಟಾಳು. ಪ್ರಾಧ್ಯಾಪಕ ವೃತ್ತಿ ಮತ್ತು ಸಾಹಿತ್ಯದ ಕೆಲಸ ಎರಡನ್ನು ಒಟ್ಟೊಟ್ಟಿಗೆ ನಿರ್ವಹಿಸಿಕೊಂಡು ಬರುತ್ತಿದ್ದಾರೆ. ಕನ್ನಡದ ಪರವಾಗಿ ಬೀದಿಗೆ ಇಳಿದು ಹೋರಾಟ ಮಾಡುವವರಲ್ಲಿ ಮೊದಲ ಸಾಲಿನಲ್ಲಿ ನಿಲ್ಲುತ್ತಾರೆ. ಅವರೊಬ್ಬ ಒಬ್ಬ ಮೇಧಾವಿ ಕನ್ನಡಿಗ, ಹೋರಾಟದ ಕನ್ನಡಿಗ, ಅಪಟ್ಟ ಕನ್ನಡಿಗ. ನಾಡಿನ ಅನೇಕ ಕಲಾವಿದರು, ಸಾಹಿತಿಗಳನ್ನು ಸನ್ಮಾನ ಮಾಡಿದ್ದಾರೆ. ಬುದ್ಧ, ಬಸವ, ಗಾಂಧಿ ಟ್ರಸ್ಟ್ ವತಿಯಿಂದ ಕಾರ್ಯಕ್ರಮಗಳನ್ನು ಆಯೋಜಿಸಿ ಪ್ರೋತ್ಸಾಹವನ್ನು ನೀಡಿದ್ದಾರೆ' ಎಂದು ಮನು ಬಳಿಗಾರ್ ತಿಳಿಸಿದರು.

ಸುಮಂಗಲಿ ಸೇವಾಶ್ರಮದ ಅಧ್ಯಕ್ಷೆ ಡಾ.ಎಸ್.ಜಿ.ಸುಶೀಲಮ್ಮ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಕೃತಿ ಸಂಪಾದಕರಾದ ಕೆ.ಎಂ.ರೇವಣ್ಣ, ಡಾ.ಆರ್.ವಾದಿರಾಜ್, ಡಾ.ಕೃಷ್ಣ ಹಾನುಬಾಳು ಉಪಸ್ಥಿತರಿದ್ದರು.



ಸರಳ ಸಜ್ಜನಿಕೆಯ ಸಿಸಿರಾ ಎಂಬ ಕಾವ್ಯನಾಮದಿಂದ ಬರವಣಿಗೆಯಲ್ಲಿ ತೊಡಗಿಸಿಕೊಂಡವರು. ಕನ್ನಡದ ಕಂಕಣ ತೊಟ್ಟು, ಕನ್ನಡ ಬಾವುಟ ಹಿಡಿದು, ಸಾರ್ವಜನಿಕ ಸೇವೆಯಲ್ಲಿ ನಿರತರಾಗಿದ್ದಾರೆ. ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸುತ್ತಿರುವ ಸಿಸಿರಾ ಸ್ನೇಹ ವಲಯ ಮತ್ತು ಸಾಹಿತ್ಯ ಬಳಗ ದೊಡ್ಡದು.

-ಪ್ರೊ.ಹಂಪನಾ, ಹಿರಿಯ ಸಾಹಿತಿ

ಈ ಸಂಜೆ

Apr 28, 2024



ಶೇಷಾದ್ರಿಪುರಂ ಕಾಲೇಜು ಸಭಾಂಗಣದಲ್ಲಿಂದು ಡಾ.ಸಿಸಿರಾ ಸ್ನೇಹಾ ಬಳಗದಿಂದ ಹಮ್ಮಿಕೊಂಡಿದ್ದ ಸಾಹಿತಿ, ಡಾ.ಎಸ್. ರಾಮಲಿಂಗೇಶ್ವರ (ಸಿಸಿರಾ) ಅವರಿಗೆ 50ರ ಅಭಿನಂದನೆ ಕಾರ್ಯಕ್ರಮದಲ್ಲಿ ಕನ್ನಡದ ಮಾಣಿಕ್ಯ ಗ್ರಂಥವನ್ನು ಹಿರಿಯ ಸಾಹಿತಿ ಪ್ರೊ. ಹಂಪನಾಗರಾಜಯ್ಯ, ಶಿಕ್ಷಣ ತಜ್ಞ ನಾಡೋಜ ಡಾ.ವೂಡೇ ಪಿ.ಕೃಷ್ಣ, ಸುಮಂಗಲಿ ಸೇವಾಶ್ರಮದ ಅಧ್ಯಕ್ಷರಾದ ಡಾ.ಎಸ್. ಜಿ.ಸುಶೀಲಮ್ಮ, ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್ ಅವರು ಬಿಡುಗಡೆ ಮಾಡಿದರು.



ಶೇಷಾದ್ರಿಪುರಂ ಕಾಲೇಜಿನಲ್ಲಿ ಆಯೋಜಿಸಿದ್ದ 'ವಿಶ್ವ ಪುಸ್ತಕ ದಿನಾಚರಣೆ' ಕಾರ್ಯಕ್ರಮವನ್ನು ಸಾಹಿತಿ ಬರಗೂರು ರಾಮಚಂದ್ರಪ್ಪ ಉದ್ಘಾಟಿಸಿದರು. ಡಾ| ವೂಡೇ ಪಿ.ಕೃಷ್ಣ, ನಿಡಸಾಲೆ ಪುಟ್ಟಸ್ವಾಮಯ್ಯ, ಆರ್.ದೊಡ್ಡೇಗೌಡ, ಅರ್ಚನಾ ತೇಜಸ್ವಿ ಹಾಜರಿದ್ದರು.

**ವಿಶ್ವ ಪುಸ್ತಕ ದಿನಾಚರಣೆ**

# ಸರ್ಕಾರದಿಂದ ಪುಸ್ತಕ ಖರೀದಿ ವಿಳಂಬ: ಬರಗೂರು ಬೇಸರ

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಸರ್ಕಾರದಿಂದ ಪುಸ್ತಕ ಖರೀದಿ, ಪ್ರಶಸ್ತಿ ಪ್ರದಾನ, ಸಿನಿಮಾಗಳಿಗೆ ಸಬ್ಸಿಡಿ ನೀಡುವಿಕೆಯಲ್ಲಿ ಬಹಳ ವಿಳಂಬವಾಗುತ್ತಿದೆ ಎಂದು ಹಿರಿಯ ಸಾಹಿತಿ ಬರಗೂರು ರಾಮಚಂದ್ರಪ್ಪ ಬೇಸರ ವ್ಯಕ್ತಪಡಿಸಿದರು.

ಕರ್ನಾಟಕ ಕನ್ನಡ ಬರಹಗಾರರ-ಪ್ರಕಾಶಕರ ಸಂಘ, ಶೇಷಾದ್ರಿಪುರಂ ಕಾಲೇಜಿನ ಕನ್ನಡ ಸಂಘದ ಕನ್ನಡ ವಿಭಾಗದ ಸಹಯೋಗದಲ್ಲಿ ಮಂಗಳವಾರ ಆಯೋಜಿಸಿದ್ದ 'ವಿಶ್ವ ಪುಸ್ತಕ ದಿನಾಚರಣೆ' ಕಾರ್ಯಕ್ರಮ ಉದ್ಘಾಟಿಸಿ ಅವರು ಮಾತನಾಡಿದರು.

**4 ವರ್ಷದಿಂದ ಸಬ್ಸಿಡಿ ಇಲ್ಲ, ಪ್ರಶಸ್ತಿ ಇಲ್ಲ:** ಸಿನಿಮಾ ಕ್ಷೇತ್ರದಲ್ಲಿ ಆಯಾ ವರ್ಷ ಪ್ರಶಸ್ತಿ ನೀಡುತ್ತಿಲ್ಲ. ಡಾ. ರಾಜ್ ಜನ್ಮದಿನದಂದು ಆಯಾ ವರ್ಷದ ಪ್ರಶಸ್ತಿ ಪ್ರದಾನ ಮಾಡಬೇಕೆಂದು ಘೋಷಣೆ ಮಾಡಿ 7 ವರ್ಷ ಸಂದಿವೆ. ಏ.24ಕ್ಕೆ ರಾಜ್ ಜನ್ಮದಿನ ವಿದೆ. ಆದರೆ, ಇನ್ನೂ 4 ವರ್ಷದ ಪ್ರಶಸ್ತಿಗಳೇ ಪ್ರಕಟವಾಗಿಲ್ಲ. 4 ವರ್ಷದಿಂದ ಸಬ್ಸಿಡಿ ನೀಡಿಲ್ಲ ಎಂದರು. ಸಿ.ಮಾಯಣ್ಣ, ಪುಸ್ತಕ ವಿನ್ಯಾಸ - ಕಾರ ರಾಮಕೃಷ್ಣರನ್ನು ಈ ವೇಳೆ ಸನ್ಮಾನಿಸಲಾಯಿತು.

ಪ್ರಜಾವಾಣಿ
ಬುಧವಾರ • ಏಪ್ರಿಲ್ 24, 2024

ವಿಶ್ವ ಪುಸ್ತಕ ದಿನಾಚರಣೆ: ಬರಗೂರು ರಾಮಚಂದ್ರಪ್ಪ ಹೇಳಿಕೆ

# 'ಪುಸ್ತಕೋದ್ಯಮ: ತಗ್ಗಿದ ಪ್ರೋತ್ಸಾಹ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಪುಸ್ತಕೋದ್ಯಮ ಮತ್ತು ಪುಸ್ತಕ ಸಂಸ್ಕೃತಿಗೆ ಸರ್ಕಾರದಿಂದ ಸಿಗಬೇಕಾದ ಮನ್ನಣೆ ಹಾಗೂ ಪ್ರೋತ್ಸಾಹ ದಿನೇ ದಿನೇ ಕಡಿಮೆಯಾಗುತ್ತಿದೆ' ಎಂದು ಸಾಹಿತಿ ಬರಗೂರು ರಾಮಚಂದ್ರಪ್ಪ ಕಳವಳ ವ್ಯಕ್ತಪಡಿಸಿದರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘ ಮಂಗಳವಾರ ಆಯೋಜಿಸಿದ್ದ 'ವಿಶ್ವ ಪುಸ್ತಕ ದಿನಾಚರಣೆ'ಯಲ್ಲಿ ಅವರು ಮಾತನಾಡಿದರು.

'ಪುಸ್ತಕ ಸಂಸ್ಕೃತಿಯನ್ನು ಉಳಿಸಿಕೊಳ್ಳುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ ಎಂಬುದನ್ನು ಪ್ರಕಾಶಕರು, ಲೇಖಕರು ಹಾಗೂ ಸರ್ಕಾರಗಳು ಅರಿಯಬೇಕು. ಉದ್ಯಮವನ್ನು ಉಳಿಸಿಕೊಳ್ಳುವ ಉಮೇದಿನಲ್ಲಿ ಸಂಸ್ಕೃತಿ ನಾಶವಾಗದಂತೆ ನೋಡಿಕೊಳ್ಳಬೇಕು' ಎಂದರು.

'ಪುಸ್ತಕಗಳಿಗೆ ಯಾವತ್ತೂ ಸಾವಿಲ್ಲ, ಆದರೆ ಸವಾಲುಗಳಿವೆ. ಸವಾಲುಗಳನ್ನು ಎದುರಿಸಿ ಅದರ ಅಸ್ತಿತ್ವ ಉಳಿಸಿಕೊಳ್ಳಲು ಹೋರಾಡಬೇಕು. ಇದು ಪುಸ್ತಕೋದ್ಯಮ ಸೇರಿದಂತೆ ಎಲ್ಲ ಮಾಧ್ಯಮಗಳಿಗೆ ಅನ್ವಯಿಸುತ್ತದೆ. ಆದರೆ, ಮಾಧ್ಯಮಗಳೆಲ್ಲ ಉದ್ಯಮವಾಗಿರುವ ಕಾಲದಲ್ಲಿ ನಾವಿದ್ದೇವೆ. ಚಲನಚಿತ್ರ ಮಾಧ್ಯಮ ಚಲನಚಿತ್ರೋದ್ಯಮವಾಗಿದೆ. ಪತ್ರಿಕಾ ಮಾಧ್ಯಮ, ಪತ್ರಿಕೋದ್ಯಮವಾಗಿದೆ. ಹಾಗೆಯೇ ಪುಸ್ತಕ ಮಾಧ್ಯಮ ಅನಿವಾರ್ಯವಾಗಿ ಪುಸ್ತಕೋದ್ಯಮವಾಗಿದೆ' ಎಂದರು.

'ಎಲ್ಲ ಕಾಲದಲ್ಲೂ ಉದ್ಯಮ ಮತ್ತು ಸಂಸ್ಕೃತಿಯ ನಡುವೆ ತಾಕಲಾಟ ನಡೆಯುತ್ತಿರುತ್ತದೆ. ಉದ್ಯಮಕ್ಕೆ ಸಂಪಾದನೆಯೇ ಪ್ರಧಾನ, ಸಂಸ್ಕೃತಿಗೆ ಸಂವೇದನೆ ಮುಖ್ಯ. ಸಂವೇದನೆ ಉಳಿಸಿಕೊಳ್ಳಬೇಕಾ, ಸಂಪಾದನೆ ಉಳಿಸಿಕೊಳ್ಳಬೇಕಾ? ಪುಸ್ತಕ ಅಚ್ಚಾಗದಿದ್ದರೆ ಸಂವೇದನೆ ಉಳಿಸಿಕೊಳ್ಳಲು ಹೇಗೆ ಸಾಧ್ಯ, ಪುಸ್ತಕವೇ ಮಾರಾಟವಾಗದಿದ್ದರೆ ಸಂಪಾದನೆ ಹೇಗೆ ಸಾಧ್ಯ? ಉದ್ಯಮದಲ್ಲಿ ಪ್ರಧಾನವಾಗಿರುವ ಸಂಪಾದನೆ, ಪುಸ್ತಕ ಸಂಸ್ಕೃತಿಯಲ್ಲಿ ಮುಖ್ಯವಾಗಿರುವ ಸಂವೇದನೆ ಇವೆರಡನ್ನು ಸಮತೋಲನಗೊಳಿಸುವ ನೀತಿಯನ್ನು ಸರ್ಕಾರ ರೂಪಿಸಬೇಕು' ಎಂದು ಹೇಳಿದರು.

'ಸರ್ಕಾರ ಮುಂದಿನ ಬಜೆಟ್‌ನಲ್ಲಿ ಗ್ರಂಥಾಲಯ ಇಲಾಖೆಗೆ ನಿರ್ದಿಷ್ಟ ಮೊತ್ತವನ್ನು ಘೋಷಿಸಬೇಕು. ಸಾಂಸ್ಕೃತಿಕ ಹಾಗೂ ಸಾಮಾಜಿಕ ಪ್ರಜ್ಞೆ ಇರುವ ಸರ್ಕಾರಗಳು ಪುಸ್ತಕ ಸಂಸ್ಕೃತಿಯನ್ನು ನಿರ್ಲಕ್ಷಿಸುವುದಿಲ್ಲ. ಗ್ರಂಥಾಲಯಗಳು ಗೋದಾಮುಗಳಲ್ಲ. ಅಲ್ಲಿ ಪ್ರತಿ ತಿಂಗಳು ಓದಿನ ಅಭಿರುಚಿ ಹೆಚ್ಚಿಸುವ ಕಾರ್ಯಕ್ರಮಗಳನ್ನು ಆಯೋಜಿಸಬೇಕಿದೆ' ಎಂದರು.

ಪುಸ್ತಕ ಪ್ರಚಾರಕರಾದ ನಿರೂಪಾ ಮತ್ತಿಕೆರೆ, ವಿ. ಮಾಯಣ್ಣ, ಪುಸ್ತಕ ವಿನ್ಯಾಸಕ ಆರ್. ರಾಮಕೃಷ್ಣ ಅವರನ್ನು ಸನ್ಮಾನಿಸಲಾಯಿತು.

ವಿಶ್ವ ಪುಸ್ತಕ ದಿನಾಚರಣೆ ಕಾರ್ಯಕ್ರಮದಲ್ಲಿ ಪುಸ್ತಕ ಪ್ರಚಾರಕ ವಿ. ಮಾಯಣ್ಣ, ವಿನ್ಯಾಸಕ ಆರ್. ರಾಮಕೃಷ್ಣ ಅವರನ್ನು ಸನ್ಮಾನಿಸಲಾಯಿತು. (ಎಡದಿಂದ) ಎಚ್.ಆರ್. ಗೀತಾ, ಶೇಷಾದ್ರಿಪುರಂ ಕಾಲೇಜಿನ ಪ್ರಾಂಶುಪಾಲ ಬಿ.ಜಿ. ಭಾಸ್ಕರ, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ, ಕರ್ನಾಟಕ ಕನ್ನಡ ಬರಹಗಾರರು ಮತ್ತು ಪ್ರಕಾಶಕರ ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಯ್ಯ, ಬರಗೂರು ರಾಮಚಂದ್ರಪ್ಪ, ಸಂಘದ ಕಾರ್ಯದರ್ಶಿ ಆರ್. ದೊಡ್ಡೇಗೌಡ, ಕೆ.ಎಸ್. ಮುರಳಿ ಭಾಗವಹಿಸಿದ್ದರು.

ಉದಯವಾಣಿ | ಬುಧವಾರ, ಏಪ್ರಿಲ್ 24, 2024



ವಿಶ್ವ ಪುಸ್ತಕ ದಿನಾಚರಣೆಯಲ್ಲಿ ಹಿರಿಯ ಸಾಹಿತಿ ಬರಗೂರು ರಾಮಚಂದ್ರಪ್ಪ ಉದ್ಘಾಟಿಸಿದರು.

# 'ಕನ್ನಡದಲ್ಲಿ ವರ್ಷಕ್ಕೆ 8000 ಪುಸ್ತಕ ಪ್ರಕಟ'

■ **ಉದಯವಾಣಿ ಸಮಾಚಾರ**

**ಬೆಂಗಳೂರು:** ಪುಸ್ತಕದ ಮೇಲಿನ ನಿಜವಾದ ಪ್ರೀತಿ ಉಳಿಸಿ ಬೆಳೆಸುವ ಮಹತ್ವದ ಜವಾಬ್ದಾರಿ ಯುವ ಪೀಳಿಗೆಯ ಮೇಲಿದೆ. ಮುಂದಿನ ಪೀಳಿಗೆಗೆ ಪುಸ್ತಕ ಸಂಸ್ಕೃತಿಯ ಮಹತ್ವವನ್ನು ರವಾನಿಸುವ ಕೆಲಸ ನಮ್ಮಿಂದಾಗಬೇಕಿದೆ, ಎಂದು ಹಿರಿಯ ಸಾಹಿತಿ ಬರಗೂರು ರಾಮಚಂದ್ರಪ್ಪ ಅಭಿಪ್ರಾಯ ಪಟ್ಟರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘದ ಸಹಯೋಗದಲ್ಲಿ ಮಂಗಳವಾರ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಹಮ್ಮಿಕೊಂಡು 'ವಿಶ್ವ ಪುಸ್ತಕ ದಿನಾಚರಣೆ' ಕಾರ್ಯಕ್ರಮ, ಉದ್ಘಾಟಿಸಿ ಮಾತನಾಡಿದರು. ಸರ್ಕಾರ ಪುಸ್ತಕದ ಕುರಿತು ಮಾತಾಡೋದು ವ್ಯರ್ಥ. ಕನ್ನಡದಲ್ಲಿ ವರ್ಷಕ್ಕೆ ಸುಮಾರು 8 ಸಾವಿರ ಪುಸ್ತಕಗಳು ಏಕೆ ಪ್ರಕಟವಾಗುತ್ತಿವೆ ಎನ್ನುವುದಾಗಿ ಒಮ್ಮೆ ಯೋಚಿಸಬೇಕು. 8 ಸಾವಿರ ಪುಸ್ತಕಗಳನ್ನು ಸುಮ್ಮನೆ ಪ್ರಕಟಿಸಲು ಸಾಧ್ಯವಿಲ್ಲ. ಇಂದು ಪುಸ್ತಕೋದ್ಯಮಕ್ಕೆ ಧಕ್ಕೆ ತರುವ ಕೆಲಸಗಳಾಗುತ್ತಿರುವುದು ನಿಜ. ಆದರೆ ಪುಸ್ತಕಗಳು ನಶಿಸುತ್ತದೆ ಎಂದು ಯೋಚಿಸಿದರೆ ಅದರ ಅಸ್ತಿತ್ವ ಇದ್ದೇ ಇರುತ್ತೆ. ಯಾವುದೇ ತಂತ್ರಜ್ಞಾನ ಬಂದರೂ ಮೊದಲು ಅಚ್ಚಾಗಬೇಕು ಎಂದರು.

ಕರ್ನಾಟಕ ಕನ್ನಡ ಬರಹಗಾರರ ಮತ್ತು ಪ್ರಕಾಶಕರ ಸಂಘದ ಅಧ್ಯಕ್ಷ ನಿಡಸಾಲೆ ಪುಟ್ಟಸ್ವಾಮಯ್ಯ, ಪುಸ್ತಕ ಪರಿಚಾರಕ ಸಿ. ಮಾಯಣ್ಣ, ಪುಸ್ತಕ ವಿನ್ಯಾಸಕ ಆರ್.ರಾಮಕೃಷ್ಣ, ಹಿರಿಯ ಲೇಖಕ ಸು. ರುದ್ರಮೂರ್ತಿ ಶಾಸ್ತ್ರಿ, ಶೇಷಾದ್ರಿಪುರಂ ಶಿಕ್ಷಣ ದತ್ತಿ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ.ಕೃಷ್ಣ ಆರ್. ದೊಡ್ಡೇಗೌಡ, ಎಂ.ಎಸ್. ನಟರಾಜ್, ಡಾ.ಬಿ.ಜಿ.ಭಾಸ್ಕರ, ಎಚ್.ಎಂ.ಗೀತಾ ಉಪಸ್ಥಿತರಿದ್ದರು.

ವಾರ್ತಾ ಭಾರತಿ



ಬೆಂಗಳೂರಿನ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಶೇಷಾದ್ರಿಪುರಂ ಇನ್‌ಸ್ಟಿಟ್ಯೂಟ್ ಆಫ್ ಕಾಮರ್ಸ್ ಆ್ಯಂಡ್ ಮ್ಯಾನೇಜ್‌ಮೆಂಟ್ ಕಾಲೇಜಿನಲ್ಲಿ ಸೋಮವಾರ ಸಂವಿಧಾನ ಶಿಲ್ಪಿ ಡಾ.ಬಿ.ಆರ್.ಅಂಬೇಡ್ಕರ್ ಜಯಂತಿ ಪ್ರಯುಕ್ತ 'ಅಂಬೇಡ್ಕರ್ ಅವರ ಜೀವನ ಮತ್ತು ಸಾಧನೆ' ಎಂಬ ವಿಷಯದ ಕುರಿತು ಗುಲ್ಬರ್ಗ ವಿವಿ ಪ್ರಾಧ್ಯಾಪಕ, ಸಾಹಿತಿ ಡಾ.ಎಚ್.ಟಿ.ಪೋತೆ ಉಪನ್ಯಾಸ ನೀಡಿದರು. ಈ ವೇಳೆ ನಾಡೋಜ ಡಾ.ವೂಡೇ ಪಿ.ಕೃಷ್ಣ, ಪ್ರೊ.ವಿದ್ಯಾ ಶಿವಣ್ಣನವರ್, ಡಾ.ಪೂರ್ಣಿಮಾ ಎಸ್. ಉಪಸ್ಥಿತರಿದ್ದರು.

Bengaluru Edition
Apr 23, 2024 Page No. 4
Powered by: erelego.com

ಈ ಸಂಜೆ



ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಇನ್ಸ್ಟಿಟ್ಯೂಟ್ ಆಫ್ ಕಾಮರ್ಸ್ ಅಂಡ್ ಮ್ಯಾನೇಜ್ಮೆಂಟ್ ಕಾಲೇಜಿನಲ್ಲಿ ನಡೆದ ಅಂಬೇಡ್ಕರ್ ಅವರ ಜೀವನ ಮತ್ತು ಸಾಧನೆ ಎಂಬ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಗುಲ್ಬರ್ಗ ವಿಶ್ವವಿದ್ಯಾಲಯದ ಪ್ರಾಧ್ಯಾಪಕ ಸಾಹಿತಿ ಡಾ.ಹೆಚ್. ಟಿ. ಪೋತೆ, ನಾಡೋಜ ಡಾ.ವೂಡೇ ಪಿ ಕೃಷ್ಣ, ಪ್ರೊ. ವಿದ್ಯಾ ಶಿವಣ್ಣನವರ್, ಡಾ.ಪೂರ್ಣಿಮಾ ಎಸ್. ಪಾಲ್ಗೊಂಡಿದ್ದರು.

Bengaluru Edition
Apr 22, 2024 Page No. 2
Powered by: erelego.com

ಈ ಸಂಜೆ



ಶೇಷಾದ್ರಿಪುರಂ ಸಂಜೆ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ 2023-24ನೇ ಶೈಕ್ಷಣಿಕ ವರ್ಷದಲ್ಲಿ ನ್ಯಾಕ್ ಮಾನ್ಯತೆ ಪಡೆದ ಹಿನ್ನೆಲೆಯಲ್ಲಿ ಹಮ್ಮಿಕೊಂಡಿದ್ದ ಅಭಿನಂದನಾ ಕಾರ್ಯಕ್ರಮವನ್ನು ಆದಿಚುಂಚನಗಿರಿ ಮಹಾಸಂಸ್ಥಾನ ಮಠದ ಪೀಠಾಧ್ಯಕ್ಷರಾದ ಡಾ.ಶ್ರೀ ನಿರ್ಮಲಾನಂದನಾಥ ಸ್ವಾಮೀಜಿ ಅವರು ಉದ್ಘಾಟಿಸಿದರು. ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೆ ಪಿ.ಕೃಷ್ಣ, ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಡಬ್ಲ್ಯು.ಡಿ.ಅಶೋಕ್, ಎನ್.ಎಸ್.ಸತೀಶ್ ಮತ್ತಿತರರು ಈ ಸಂದರ್ಭದಲ್ಲಿ ಪಾಲ್ಗೊಂಡಿದ್ದರು.

Bengaluru Edition
Apr 21, 2024 Page No. 7
Powered by: erelego.com

## ಶೇಷಾದ್ರಿಪುರಂ ಇಂಗ್ಲೀಷ್ ಶಾಲಾ ಕಟ್ಟಡ ಉದ್ಘಾಟನೆಯಲ್ಲಿ ವೀರೇಶಾನಂದ ಶ್ರೀಗಳು

# ಶಿಕ್ಷಣದ ಜೊತೆಗೆ ಸಂಸ್ಕಾರ ಕಲಿಸುತ್ತಿರುವುದು ಪ್ರಶಂಸನೀಯ

● ಪ್ರಜಾಪ್ರಗತಿ.ಕಾಂ

ತುಮಕೂರು: ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಶಿಕ್ಷಣದ ಜೊತೆಗೆ ಸಂಸ್ಕಾರವನ್ನು ಕಲಿಸುವ ಕೆಲಸ ಮಾಡುತ್ತಿದೆ ಎಂದು ರಾಮಕೃಷ್ಣ ಆಶ್ರಮದ ಶ್ರೀ ವೀರೇಶಾನಂದ ಸರಸ್ವತಿ ಸ್ವಾಮೀಜಿ ಪ್ರಶಂಸಿಸಿದರು.

ಅವರು ನಗರದ ಗಂಗಸಂದ್ರದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಆಡಳಿತ ಮಂಡಳಿಯು ಹೊಸ ಇಂಗ್ಲೀಷ್ ಶಾಲಾ ಕಟ್ಟಡ ಉದ್ಘಾಟನೆ ವೇಳೆ ಮಾತನಾಡಿದರು.

ಇಂದು ವಿದೇಶಿಗರು ನಮ್ಮ ಸಂಸ್ಕೃತಿಯನ್ನು ಅನುಕರಣೆ ಮಾಡುತ್ತಿದ್ದಾರೆ. ಇಂದಿನ ಮಕ್ಕಳಿಗೆ ಸರಿಯಾದ ಮಾರ್ಗವನ್ನು ಶಿಕ್ಷಕರು ತೋರಬೇಕು. ಒಳ್ಳೆಯ ಶಿಕ್ಷಣ ಉತ್ತಮ ಪ್ರಜೆಗಳ ನಿರ್ಮಾಣ ಇಂದಿನ ಸಮಾಜಕ್ಕೆ ಬೇಕಾಗಿದೆ. ನಗರದಲ್ಲಿ ಈಗ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯದೇ ಸುದ್ದಿಯಾಗಿದೆ. ಇಲ್ಲಿಯವರೆಗೆ ತುಮಕೂರಲಿದ್ದ ಶಿಕ್ಷಣ ಸಂಸ್ಥೆಗೆ ಹೊಸ ಶಾಲೆ ಸೇರ್ಪಡೆಯಾಗಿದೆ. ಈ ಶಾಲೆ ಎತ್ತರಕ್ಕೆ ಬೆಳೆಯಲಿ ಎಂದು ವೀರೇಶಾನಂದರು ಆಶಿಸಿದರು.

ಶೇಷಾದ್ರಿಪುರಂ, ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ. ವೂಡೆ.ಪಿ.ಕೃಷ್ಣ ಮಾತನಾಡಿ, ನಮ್ಮ ಸಂಸ್ಥೆಯನ್ನು ತುಮಕೂರಿನ ಜನತೆ ಪ್ರೀತಿಯಿಂದ ಸ್ವೀಕರಿಸುತ್ತಿರುವುದು ನಮಗೆ ಖುಷಿ ತಂದಿದೆ. ನಮ್ಮ ಸಂಸ್ಥೆಯ ಮುಖ್ಯ ಉದ್ದೇಶ ಕಡಿಮೆ ಹಣಕ್ಕೆ ಗುಣಮಟ್ಟದ ಶಿಕ್ಷಣ ಮತ್ತು ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುವುದಾಗಿದೆ. ಸುತ್ತಮುತ್ತಲಿನ ಜನತೆ ಇದರ ಸದುಪಯೋಗ ಪಡೆದುಕೊಳ್ಳಿ ಎಂದು ಹೇಳಿದರು.



ಈ ಕಾರ್ಯಕ್ರಮದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಜಂಟಿ ಕಾರ್ಯದರ್ಶಿ ಶೇಷನಾರಾಯಣ್ ಎಸ್, ಉಪಾಧ್ಯಕ್ಷರಾದ ಹೆಂಜಾರಪ್ಪ, ಧರ್ಮದರ್ಶಿಗಳಾದ ಡಬ್ಲ್ಯೂ. ಡಿ. ಅಶೋಕ್, ಕಾರ್ತಿಕ್, ಡಬ್ಲ್ಯೂ ಡಿ.ವಿಜಯಕುಮಾರ್ ಮತ್ತು ಸಂಸ್ಥೆಯ ಎಲ್ಲಾ ಪ್ರಾಂಶುಪಾಲರು ಅಧ್ಯಾಪಕರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

VK ವಿಜಯ ಕರ್ನಾಟಕ

# ಶಿಕ್ಷಣದ ಜತೆಗೆ ಸಂಸ್ಕೃತಿ ಕಲಿಸಬೇಕು

ವಿಕ ಸುದ್ದಿಲೋಕ ತುಮಕೂರು

ವಿದೇಶಿಗರು ನಮ್ಮ ಸಂಸ್ಕೃತಿ ಅನುಕರಣೆ ಮಾಡುತ್ತಿದ್ದಾರೆ. ಶಿಕ್ಷಣದ ಜತೆಗೆ ಸಂಸ್ಕೃತಿ ಕಲಿಸುವುದು ಶಿಕ್ಷಣ ಸಂಸ್ಥೆಗಳ ಜವಾಬ್ದಾರಿ ಎಂದು ಶ್ರೀ ರಾಮಕೃಷ್ಣ ಆಶ್ರಮದ ಶ್ರೀ ವೀರೇಶಾನಂದ ಸರಸ್ವತೀ ಸ್ವಾಮೀಜಿ ಹೇಳಿದರು.

ನಗರದ ಗಂಗಸಂದ್ರದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ನೂತನ ಇಂಗ್ಲಿಷ್ ಶಾಲಾ ಕಟ್ಟಡವನ್ನು ಗುರುವಾರ ಉದ್ಘಾಟಿಸಿ ಮಾತನಾಡಿದ ಅವರು, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಮಕ್ಕಳಿಗೆ ಶಿಕ್ಷಣದ ಜತೆಗೆ ಸಂಸ್ಕೃತಿ ಹೇಳಿಕೊಡುತ್ತಿದೆ. ಶೇಷಾದ್ರಿಪುರಂ ಸಂಸ್ಥೆಯ ನೂತನ ಶಾಲೆ ಎತ್ತರಕ್ಕೆ ಬೆಳೆಯಲಿ ಎಂದು ಆಶಿಸಿದರು.

ಮಕ್ಕಳಿಗೆ ಸರಿಯಾದ ಮಾರ್ಗವನ್ನು ಶಿಕ್ಷಕರು ತೋರಬೇಕು. ಒಳ್ಳೆಯ ಶಿಕ್ಷಣ ಉತ್ತಮ ಪ್ರಜೆಗಳ ನಿರ್ಮಾಣ ಸಮಾಜಕ್ಕೆ ಬೇಕಾಗಿದೆ ಎಂದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಜಂಟಿ ಕಾರ್ಯದರ್ಶಿ ಶೇಷನಾರಾಯಣ್ ಎಸ್., ಉಪಾಧ್ಯಕ್ಷ ಹೆಂಜಾರಪ್ಪ ಪ್ರಮುಖರಾದ ಅಶೋಕ್, ಕಾರ್ತಿಕ್, ವಿಜಯಕುಮಾರ್ ಮತ್ತಿತರರಿದ್ದರು.




ತುಮಕೂರಿನ ಶೇಷಾದ್ರಿಪುರಂ ನೂತನ ಇಂಗ್ಲಿಷ್ ಶಾಲೆಯ ಕಟ್ಟಡ ಉದ್ಘಾಟನಾ ಕಾರ್ಯಕ್ರಮದಲ್ಲಿ ಸ್ವಾಮಿ ವೀರೇಶಾನಂದ ಸರಸ್ವತಿ, ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೆ.ಪಿ.ಕೃಷ್ಣ ಮತ್ತಿತರರಿದ್ದರು.

> ನಮ್ಮ ಸಂಸ್ಥೆಯನ್ನು ತುಮಕೂರಿನ ಜನತೆ ಪ್ರೀತಿಯಿಂದ ಸ್ವೀಕರಿಸುತ್ತಿರುವುದು ನಮಗೆ ಖುಷಿ ತಂದಿದೆ. ನಮ್ಮ ಸಂಸ್ಥೆಯ ಮುಖ್ಯ ಉದ್ದೇಶ ಗುಣಮಟ್ಟದ ಶಿಕ್ಷಣ ಮತ್ತು ಸಮಾಜಕ್ಕೆ ಉತ್ತಮ ಪ್ರಜೆಗಳನ್ನು ಕೊಡುವುದಾಗಿದೆ. ಸುತ್ತಮುತ್ತಲಿನ ಜನತೆ ಇದರ ಸದುಪಯೋಗ ಪಡೆಯಿರಿ.
>
> -ನಾಡೋಜ ಡಾ.ವೂಡೆ.ಪಿ.ಕೃಷ್ಣ
>
> ಪ್ರಧಾನ ಕಾರ್ಯದರ್ಶಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ
ಶುಕ್ರವಾರ 12 ಏಪ್ರಿಲ್ 2024
12 APRIL 2024

### ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಬಣ್ಣನೆ 'ವಿಷನರಿ ಸ್ಟೇಟ್ಸ್‌ಮನ್ ಎಸ್. ನಿಜಲಿಂಗಪ್ಪ' ಕೃತಿ ಬಿಡುಗಡೆ

# ಕರ್ನಾಟಕದ ಸಾಂಸ್ಕೃತಿಕ ಪ್ರತೀಕವಾಗಿದ್ದ ಎಸ್. ನಿಜಲಿಂಗಪ್ಪ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಮಾಜಿ ಮುಖ್ಯಮಂತ್ರಿ ಎಸ್. ನಿಜಲಿಂಗಪ್ಪ ಅವರು ಕರ್ನಾಟಕದ ಸಾಂಸ್ಕೃತಿಕ ಪ್ರತೀಕ ಎಂದು ಸುತ್ತೂರು ವೀರಸಿಂಹಾಸನ ಮಠದ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಬಣ್ಣಿಸಿದ್ದಾರೆ.

ನಿರಂತರ ಸಾಯಿ ಕಮ್ಯೂನಿಕೇಷನ್ ಪ್ರೈ.ಲಿ.ನಿಂದ ಜಯನಗರದ ಶಿವರಾತ್ರಿ ರಾಜೇಂದ್ರ ಚಿಂತನ ಮಂಟಪದಲ್ಲಿ ಗುರುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸಾಹಿತಿ ಎನ್. ರಾಮನಾಥ್ ಇಂಗ್ಲಿಷ್‌ಗೆ ಅನುವಾದಿಸಿದ 'ವಿಷನರಿ ಸ್ಟೇಟ್ಸ್‌ಮನ್ ಎಸ್. ನಿಜಲಿಂಗಪ್ಪ' (ಕನ್ನಡ ಮೂಲ: ಬಿ.ಎ. ನಂಜುಂಡಸ್ವಾಮಿ) ಕೃತಿ ಬಿಡುಗಡೆಗೊಳಿಸಿ ಮಾತನಾಡಿದರು.

ನಿಜಲಿಂಗಪ್ಪ ಅವರು ಪ್ರಾಮಾಣಿಕ ವ್ಯಕ್ತಿತ್ವದಿಂದ ಕರ್ನಾಟಕ ಮಾತ್ರವಲ್ಲದೆ ರಾಷ್ಟ್ರದ ಅನೇಕ ನಾಯಕರ ಮನಸ್ಸುಗಳಲ್ಲಿ ಅಚ್ಚಳಿಯದ ಪ್ರಭಾವ ಬೀರಿದ್ದರು. ಉದಾರ ಗುಣ ಅವರದ್ದಾಗಿತ್ತು. ರಾಷ್ಟ್ರಪತಿ ಸೇರಿ ಅನೇಕ ಉನ್ನತ ಹುದ್ದೆಗಳು ಒಲಿದು ಬಂದರೂ ನಯವಾಗಿ ತಿರಸ್ಕರಿಸಿ ಇಡೀ ತಮ್ಮ ಬದುಕನ್ನು ಸಮಾಜ ಸೇವೆಗೆ ಸಮರ್ಪಿಸಿದರು. ಮೌಲ್ಯಯುತ ರಾಜಕಾರಣಿಯಾಗಿದ್ದ ಅವರು, ಪಾರದರ್ಶಕತೆ ಆಡಳಿತ ನಡೆಸುವ ಮೂಲಕ ಜನಪ್ರಿಯ ಯೋಜನೆಗಳನ್ನು ಕಾರ್ಯಗೊಳಿಸಿದರು ಎಂದು ಸ್ಮರಿಸಿದರು.

ಇವತ್ತಿನ ಕಲುಷಿತ ರಾಜಕೀಯದಲ್ಲಿ ಆದರ್ಶ ರಾಜಕಾರಣಿಗಳ ಹೆಸರು ಮರೆತುಹೋಗುತ್ತಿರುವುದು ದುರದೃಷ್ಟಕರ. ಚುನಾವಣೆಯಲ್ಲಿ ಗೆಲುವು ಸಾಧಿಸಲು ಅಭ್ಯರ್ಥಿಗಳು 100 ಕೋಟಿ ರೂ. ವರೆಗೆ ಖರ್ಚು ಮಾಡುವ ಪರಿಸ್ಥಿತಿ ಬಂದಿರುವುದು ವಿಷಾದಕರ. ಹಾಗಾಗಿ, ರಾಜಕೀಯ ಸ್ಥಿತಿ ಅಧೋಗತಿಗೆ ತಲುಪಿದೆ. ವಿರೋಧ ಪಕ್ಷದವರು ಸುಳ್ಳು ಅಪಾದನೆ ಮಾಡಿದ್ದ ವೇಳೆ ತುಂಬ ನೊಂದುಕೊಂಡು ನಿಜಲಿಂಗಪ್ಪ ಅಧಿವೇಶನದಿಂದ ಎದ್ದು ಹೊರಗೆ ಬಂದಿದ್ದರು. ಈ ವೇಳೆ ವಿರೋಧ ಪಕ್ಷದ ನಾಯಕರೇ ಖುದ್ದಾಗಿ ತೆರಳಿ ಕ್ಷಮಾಪಣೆ ಕೇಳಿ ನಿಜಲಿಂಗಪ್ಪ ಅವರನ್ನು ಕರೆತಂದಿದ್ದರು. ಅನೇಕ ರಾಜಕೀಯ ನಾಯಕರನ್ನು ಬೆಳೆಸಿದರು. ನಮ್ಮ ಮಠದ ಜತೆ ಅವಿನಾಭಾವ ಸಂಬಂಧ ಇಟ್ಟುಕೊಂಡಿದ್ದರು ಎಂದು ಶ್ರೀಗಳು ತಿಳಿಸಿದರು.

ನಿವೃತ್ತ ಐಎಎಸ್ ಅಧಿಕಾರಿ ಡಾ.ಸಿ. ಸೋಮಶೇಖರ್, ಗಾಂಧಿ ಸ್ಮಾರಕ ನಿಧಿ ಮುಖ್ಯಸ್ಥ ಡಾ. ವೂಡೇ ಪಿ. ಕೃಷ್ಣ, ಮಾಜಿ ಕಾರ್ಪೋರೇಟರ್ ಪಿ. ವಿಜಯಕುಮಾರ್, ಲೇಖಕರಾದ ಎನ್. ರಾಮನಾಥ್, ಬಿ.ಎ. ನಂಜುಂಡಸ್ವಾಮಿ ಮತ್ತಿತರರಿದ್ದರು.




ಜಯನಗರದ ಶಿವರಾತ್ರಿ ರಾಜೇಂದ್ರ ಚಿಂತನ ಮಂಟಪದಲ್ಲಿ ಗುರುವಾರ ಆಯೋಜಿಸಿದ್ದ ಕೃತಿ ಬಿಡುಗಡೆ ಕಾರ್ಯಕ್ರಮದಲ್ಲಿ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಡಾ.ಸಿ. ಸೋಮಶೇಖರ್, ಲೀಲಾದೇವಿ ಆರ್. ಪ್ರಸಾದ್, ವೂಡೇ ಪಿ. ಕೃಷ್ಣ ಮತ್ತಿತರರಿದ್ದರು.

> ನಾನು ಮಂತ್ರಿಯಾಗಲು ನಿಜಲಿಂಗಪ್ಪ ಕಾರಣ. ಅವರ ಆಶೀರ್ವಾದ, ಮಾರ್ಗದರ್ಶನದಿಂದ ಹಂತ ಹಂತವಾಗಿ ರಾಜಕೀಯದಲ್ಲಿ ಬೆಳೆದೆ. ಸರಳ ಜೀವಿ, ಮಾದರಿ ವ್ಯಕ್ತಿತ್ವ ಹೊಂದಿದ್ದ ಅವರು, 8 ವರ್ಷ ಕಾಲ ಸಿಎಂ ಆಗಿ ಉತ್ತಮ ಆಡಳಿತ ನಡೆಸಿದರು. ಇಂಥ ರಾಜಕಾರಣಿ ನಮಗೆ ಸಿಗುವುದೇ ಅಪರೂಪ. ಬೆಂಗಳೂರಿಗೆ ಕಾವೇರಿ ನೀರು ತಂದವರು ನಿಜಲಿಂಗಪ್ಪ.
>
> | ಡಾ. ಲೀಲಾದೇವಿ ಆರ್. ಪ್ರಸಾದ್
> ಮಾಜಿ ಸಚಿವೆ

ಕನ್ನಡಪ್ರಭ

ಶುಕ್ರವಾರ 12.04.2024

# ನಿಜಲಿಂಗಪ್ಪ ಆದರ್ಶ ರಾಜಕಾರಣಿ: ಶ್ರೀ




ನಗರದ ಶಿವರಾತ್ರಿ ರಾಜೇಂದ್ರ ಚಿಂತನ ಮಂಟಪದಲ್ಲಿ ನಡೆದ ಕಾರ್ಯಕ್ರಮದಲ್ಲಿ ಸಾಹಿತಿ ಎನ್.ರಾಮನಾಥ್ ಅನುವಾದಿಸಿರುವ 'ಮಿಷನರಿ ಸ್ಟೇಟ್ಸ್‌ಮನ್ ಎಸ್.ನಿಜಲಿಂಗಪ್ಪ' ಇಂಗ್ಲಿಷ್ ಕೃತಿಯನ್ನು ಸುತ್ತೂರು ಮಠದ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಬಿಡುಗಡೆಗೊಳಿಸಿದರು.

## 'ಮಿಷನರಿ ಸ್ಟೇಟ್ಸ್‌ಮನ್ ನಿಜಲಿಂಗಪ್ಪ' ಬಿಡುಗಡೆ

• ಕನ್ನಡಪ್ರಭ ವಾರ್ತೆ ಬೆಂಗಳೂರು

ಇಂದಿನ ರಾಜಕಾರಣದ ಅರ್ಭಟದಲ್ಲಿ ಮಾಜಿ ಮುಖ್ಯಮಂತ್ರಿ ದಿ.ಎಸ್. ನಿಜಲಿಂಗಪ್ಪ ಅವರಂತಹ ನೈಜ, ಆದರ್ಶ, ಮೌಲ್ಯಯುತ ಮತ್ತು ಪ್ರಾಮಾಣಿಕ ರಾಜಕಾರಣ ಹೆಸರು ಮರೆಯಾಗುತ್ತಿದೆ ಎಂದು ಸುತ್ತೂರು ಮಠದ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಬೇಸರ ವ್ಯಕ್ತಪಡಿಸಿದ್ದಾರೆ.

ನಿರಂತರ ಸಾಯಿ ಕಮ್ಯೂನಿಕೇಷನ್ ಪ್ರೈ.ಲಿ ಪ್ರಕಟಿಸಿರುವ ಸಾಹಿತಿ ಎನ್.ರಾಮನಾಥ್ ಅನುವಾದಿಸಿರುವ 'ಮಿಷನರಿ ಸ್ಟೇಟ್ಸ್‌ಮನ್ ಎಸ್.ನಿಜಲಿಂಗಪ್ಪ' ಇಂಗ್ಲೀಷ್ ಕೃತಿ ಬಿಡುಗಡೆಗೊಳಿಸಿ ಮಾತನಾಡಿ, ಕರ್ನಾಟಕದ ಏಕೀಕರಣಕ್ಕೆ ಕಾರಣವಾದ ಮಾಜಿ ಸಿಎಂ ಎಸ್.ನಿಜಲಿಂಗಪ್ಪ ಅವರು ಕನ್ನಡ ಸಂಸ್ಕೃತಿಯ ಪ್ರತೀಕ. ತಮ್ಮ ಅಧಿಕಾರಾವಧಿಯಲ್ಲಿ ಪ್ರಜಾಪ್ರಭುತ್ವ ವ್ಯವಸ್ಥೆಯ ಬೆಳವಣಿಗೆಗೆ ಆದ್ಯತೆ ನೀಡಿದವರು. ಆದರೆ, ಸದ್ಯ ರಾಜಕಾರಣ ಅರ್ಭಟವಾಗಿದೆ.

ಮಾಜಿ ಸಚಿವೆ ಲೀಲಾದೇವಿ ಪ್ರಸಾದ್, ಶಿಕ್ಷಣ ತಜ್ಞರ ಡಾ.ವೂಡೇ ಪಿ. ಕೃಷ್ಣ ಮಾತನಾಡಿದರು. ಲೇಖಕರಾದ ಎನ್.ರಾಮನಾಥ್, ಮಾಜಿ ಕಾರ್ಪೋರೇಟರ್ ಪಿ.ವಿಜಯಕುಮಾರ್, ಅ.ಭಾ.ಶ.ಸಾ.ಪ ಅಧ್ಯಕ್ಷ ಡಾ। ಸಿ.ಸೋಮಶೇಖರ್ ಇದ್ದರು.

ಈ ಸಂಜೆ

Apr 12, 2024



ಜಯನಗರದ ಶಿವರಾತ್ರಿ ರಾಜೇಂದ್ರ ಚಿಂತನ ಮಂಟಪದಲ್ಲಿ ನಿರಂತರ ನಾಯಿ ಕಮ್ಯುನಿಕೇಷನ್ ವತಿಯಿಂದ ಹಮ್ಮಿಕೊಂಡಿದ್ದ ಧೀಮಂತ ಮುತ್ಸದ್ಧಿ ಎಸ್.ನಿಜಲಿಂಗಪ್ಪ ಕೃತಿಯನ್ನು ಸುತ್ತೂರು ಮಠದ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಬಿಡುಗಡೆ ಮಾಡಿದರು. ಮಾಜಿ ಸಚಿವೆ ಲೀಲಾದೇವಿ ಆರ್.ಪ್ರಸಾದ್, ನಾಡೋಜ ವುಡೆ ಪಿ.ಕೃಷ್ಣ, ನಿವೃತ್ತ ಐಎಎಸ್ ಅಧಿಕಾರಿ ಡಾ.ಸಿ.ಸೋಮಶೇಖರ್, ಪಿ.ವಿಜಯ್‌ಕುಮಾರ್, ಶಾರದಾ ಭರತ್, ಬಿ.ವಿ.ನಂಜುಂಡಸ್ವಾಮಿ, ಎನ್.ರಘುನಾಥ್, ರು.ಬಸಪ್ಪ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು.

# ಭಾಷೆಯನ್ನು ಸ್ವೀಕರಿಸಲು ಮಡಿವಂತಿಕೆ ಬೇಡ : ವಿಮರ್ಶಕ ಡಾ. ಎಸ್.ಆರ್. ವಿಜಯಶಂಕರ್ ಅಭಿಮತ



ಒಂಭತ್ತನೇ ಶತಮಾನದ ಕವಿರಾಜಮಾರ್ಗಕಾರನು ಚತ್ತಾಣ, ಬೆದಂಡೆ ಎಂಬ ಕಾವ್ಯ ಪ್ರಕಾರಗಳನ್ನು ತನ್ನ ಕಾವ್ಯದಲ್ಲಿ ಬಳಸಿದ್ದು, ಕನ್ನಡದ ತ್ರಿಪದಿ, ವಚನಗಳಲ್ಲಿ 'ಲಿಮರಿಕ್ಸ್' ರೂಪದ ಹಾಡುಗಬ್ಬದ ವೈಶಿಷ್ಟ್ಯದ ಕಾವ್ಯ ಪ್ರಯೋಗಗಳನ್ನು ಕಾಣಬಹುದಾಗಿದ್ದು ಯಾವುದೇ ಭಾಷೆಯನ್ನು ಸ್ವೀಕರಿಸಲು ಮಡಿವಂತಿಕೆ ಬೇಡ ಎಂದು ಖ್ಯಾತ ಅಂಕಣಕಾರ, ವಿಮರ್ಶಕ ಡಾ. ಎಸ್.ಆರ್. ವಿಜಯಶಂಕರ್ ಅಭಿಪ್ರಾಯಪಟ್ಟರು.

ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಏರ್ಪಡಿಸಿದ್ದ ಲೇಖಕ, ನಿರೂಪಕ ಬಿ. ಶೃಂಗೇಶ್ವರ ಅವರು ಇಂಗ್ಲೀಷಿನಲ್ಲಿ ಬಳಸುತ್ತಿದ್ದ ಲಿಮರಿಕ್ಸ್ ಕಾವ್ಯ ಪ್ರಕಾರವನ್ನು ಕನ್ನಡದಲ್ಲಿ ಪಂಚ ಸಾಲಿನಲ್ಲಿ ಬರೆದಿರುವ ವಿಶೇಷ, ವಿನೂತನ ಕಾವ್ಯ ಕನಡದ ಹೊಸ ಪ್ರಯೋಗ 'ಅಭಿನವ ಲಿಮರಿಕ್' ಕೃತಿಯನ್ನು ಲೋಕಾರ್ಪಣೆ ಮಾಡಿ ಮಾತನಾಡುತ್ತಿದ್ದರು.

ಚಿಕ್ಕದಾದ ಹಾಡು, ಮಾತುಗಳಲ್ಲಿ ದೊಡ್ಡದಾದದ್ದನ್ನು ತಿಳಿಸಿಕೊಡುವ ಪ್ರಯತ್ನವೇ ಈ ಲಿಮರಿಕ್ಸ್‌ನ ವಿಶೇಷತೆ ಎಂದರು. 1800ರ ಕಾಲಘಟ್ಟದಲ್ಲಿ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯ ಆರಂಭಗೊಂಡ ಕಾಲದಲ್ಲಿ ಅಂದರೆ ಇನ್ನೂರು ವರ್ಷಗಳ ಇತಿಹಾಸವಿರುವ ಈ ಕಾವ್ಯದ ಬಳಕೆಗೊಂಡಿದೆ. ಆದರೆ ಸಂಸ್ಕೃತ, ಇಂಗ್ಲೀಷ್ ಯಾವುದೇ ಭಾಷೆಯನ್ನು ನಮ್ಮದಾಗಿಸಿಕೊಳ್ಳುವ ಸಂದರ್ಭ ಬಂದಾಗ ಅದನ್ನು ನಾವು ಸ್ವೀಕರಿಸುವ ಮೂಲಕ ನಮ್ಮ ಭಾಷೆಯಾಗಿಸಿಕೊಳ್ಳಬೇಕೆಂದು ದಿನಕರ ದೇಸಾಯಿ, ಡಿವಿಜಿ, ವೈಎನ್ಕೆ, ಡುಂಡಿರಾಜ್ ಅವರುಗಳು ಈಗಾಗಲೇ ಅಲ್ಲಲ್ಲಿ ಬಳಸಿರುವುದನ್ನು ಎಸ್.ಆರ್. ಜಯಶಂಕರ್ ಅವರು ತಿಳಿಸಿ, ಬಿ. ಶೃಂಗೇಶ್ವರ ಅವರು ಕನ್ನಡ ಕಾವ್ಯ, ಕತೆ, ನಾಟಕ ವಿವಿಧ ಲೇಖನಗಳನ್ನು ಬರೆದಿದ್ದಾರೆ. ಈ ಅಭಿನವ ಲಿಮರಿಕ್ಸ್ ಕೃತಿಯು ಕನ್ನಡದ ಮುಂಗಾಣ್ಕೆಯಾಗಿರುವುದು ಹೊಸ ಕಾವ್ಯ ಬರವಣಿಗೆಗೆ ಉತ್ತೇಜಿಸುವಂತೆ ಬರೆದಿರುವುದಕ್ಕೆ ಅಭಿನಂದಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶಿಕ್ಷಣ ತಜ್ಞ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೆ ಪಿ. ಕೃಷ್ಣ ಅವರು ತಾಯಿ ಹೃದಯದಿಂದ ಕಾವ್ಯ ರಚನೆ ಮಾಡಿದ್ದು ಕವಿಯಾದವನು ಹಮ್ಮು ಬಿಮ್ಮು ಬಿಟ್ಟು ತನ್ನ ಬದುಕನ್ನು ಕಟ್ಟಿಕೊಳ್ಳುತ್ತಲೇ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವ ಅವಶ್ಯಕತೆ ಬಹಳ ಮುಖ್ಯ ಎಂದರು.

ಕನ್ನಡ ಸಾಹಿತ್ಯ ವಿಸ್ತಾರವಾದುದು ಅದರಲ್ಲಿ ಈಜಿ ದಡ ಸೇರುವ ತವಕ ತಲ್ಲಣಗಳು ನಮ್ಮಲ್ಲಿ ಗಟ್ಟಿಯಾಗಿರಬೇಕು. ನಿರೂಪಣೆ, ಕಾರ್ಮಿಕ ಹೋರಾಟ ಹೀಗೆ ಅನೇಕ ಜನಪರ ಕ್ಷೇತ್ರದಲ್ಲಿ ದುಡಿದು ಅನುಭವವಿರುವ ಬಿ. ಶೃಂಗೇಶ್ವರ ಅವರ ಸಾರ್ಥಕತೆಯನ್ನು ಕೊಂಡಾಡಿದರು. ಬರವಣಿಗೆ ಹೊಚ್ಚ ಹೊಸತನದಿಂದ ಕೂಡಿರಬೇಕು. ಆ ಬಗೆಯಲ್ಲಿ ಅಭಿನವ ಲಿಮರಿಕ್ಸ್ ಕವಿತಾ ಸಂಕಲನವು ನೂರಾ ಆರು ಬಿಡಿಬಿಡಿ ಕವಿತೆಗಳಾಗಿ ಹರಳುಗಟ್ಟಿವೆ ಎಂದರು.

ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಖ್ಯಾತ ಕುಂಚ ಕಲಾವಿದೆ ಶ್ರೀಮತಿ ಶಾಂತಿ ವಾಸು ಅವರು ಶೃಂಗೇಶ್ವರ ಅವರು ಬರೆದಿರುವ ಅಭಿನವ ಲಿಮರಿಕ್ಸ್ ಕೃತಿಯು ಓದುಗರಲ್ಲಿ ಒಂದು ಸುಂದರ ಅನುಭವವನ್ನು ತಂದುಕೊಡುತ್ತದೆ. ತಿಳಿ ಹಾಸ್ಯವನ್ನು ಕವಿತೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಕೃತಿಯೊಳಗಿನ ನಾಲ್ಕಾರು ಕವಿತೆಗಳನ್ನು ಓದಿ ಅರ್ಥೈಸಿದರು.

ಇದೇ ಸಂದರ್ಭದಲ್ಲಿ ಬಿ. ಶೃಂಗೇಶ್ವರ ಅವರನ್ನು ಬಿಬಿಜಿಎಸ್ ಟ್ರಸ್ಟಿನ ಪರವಾಗಿ ಸನ್ಮಾನಿಸಿ ಅಭಿನಂದಿಸಲಾಯಿತು.

ಶೃಂಗೇಶ್ವರ ಅವರು ತಮ್ಮ ಕಾವ್ಯ, ಕತೆ ಸಾಹಿತ್ಯಕ್ಕೆ ಪ್ರೇರಣೆ ನೀಡಿದ ಸಂದರ್ಭ ಹಾಗೂ ಸನ್ನಿವೇಶಕ್ಕೆ ಕಾರಣರಾದವರನ್ನು ಸ್ಮರಿಸಿದರು. ಸಂಸ್ಥೆಯ ಅಧ್ಯಕ್ಷರಾದ ಡಾ. ಎಸ್. ರಾಮಲಿಂಗೇಶ್ವರ (ಸಿಸಿರಾ) ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್‌ನ ಇಪ್ಪತ್ತೈದು ವರ್ಷದ ಸಾರ್ಥಕ ಕಾರ್ಯಗಳನ್ನು ಪ್ರಾಸ್ತಾವಿಕವಾಗಿ ತಿಳಿಸಿ ವೇದಿಕೆಯ ಗಣ್ಯರನ್ನು ಸ್ವಾಗತಿಸಿದರು.

ಎಸ್.ಜೆ.ಆರ್. ಕಾಲೇಜಿನ ಕನ್ನಡ ಉಪನ್ಯಾಸಕರಾದ ಡಾ. ಕುಸುಮ ಸುಂದರವಾಗಿ ನಿರೂಪಿಸಿದ ಕಾರ್ಯಕ್ರಮದಲ್ಲಿ ಗಾಯಕರಾದ ಡಾ. ಅಂಬುಜಾಕ್ಷಿ ಬೀರೇಶ್ ಮತ್ತು ಭೀಮ್ ಜೇ ಅವರು ತಮ್ಮ ಗೀತಗಾಯನದ ಮೂಲಕ ಸೇರಿದ್ದು ಸಭಿಕರನ್ನು ರಂಜಿಸಿದರು.

ಪ್ರಜಾವಾಣಿ
ಮಂಗಳವಾರ, ಮಾರ್ಚ್ 26, 2024



# ಪುಸ್ತಕ ಬಿಡುಗಡೆ...

ಬುದ್ಧ ಬಸವ ಗಾಂಧಿ ಸಾಂಸ್ಕೃತಿ ಟ್ರಸ್ಟ್ ಭಾನುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಟಿ.ದೇ. ಸೌಮ್ಯ ಅವರು ಬರೆದಿರುವ 'ಕನ್ನಡದ ಕನ್ನಡಿಯಲ್ಲಿ' ಹಾಗೂ 'ಮಧ್ಯಕಾಲೀನ ಭಾರತದ ಸಂತ ಮಹಿಳೆಯರು' ಪುಸ್ತಕಗಳನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ, ಬಹುಭಾಷಾ ವಿದ್ವಾಂಸ ಮಲ್ಲೇಪುರಂ ಜಿ. ವೆಂಕಟೇಶ್ ಅವರು ಬಿಡುಗಡೆ ಮಾಡಿದರು. ಅಧ್ಯಾಪಕಿಯರಾದ ಎಸ್. ಪೂರ್ಣಿಮಾ, ಜಯಶ್ರೀ ರಾಜು, ಟ್ರಸ್ಟ್‌ನ ಅಧ್ಯಕ್ಷ ಎಸ್. ರಾಮಲಿಂಗೇಶ್ವರ ಭಾಗವಹಿಸಿದ್ದರು ಪ್ರಜಾವಾಣಿ ಚಿತ್ರ

ಸಂಯುಕ್ತ ಕರ್ನಾಟಕ

Mar 25, 2024

## ಚುಟುಕು ಸುದ್ದಿ

# ಸಾಹಿತ್ಯಕ್ಕೆ ಮಹಿಳೆಯರ ಕೊಡುಗೆ ಅನನ್ಯ

ಬೆಂಗಳೂರು: ಸಾಹಿತ್ಯ ಮತ್ತು ಸಂಸ್ಕೃತಿಗೆ ಮಹಿಳೆಯರ ಕೊಡುಗೆ ಅನನ್ಯ ಎಂದು ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ವೊಡೇ ಪಿ. ಕೃಷ್ಣ ಅವರು ಅಭಿಪ್ರಾಯಪಟ್ಟರು.

ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ಏರ್ಪಡಿಸಿದ ಕಾರ್ಯಕ್ರಮದಲ್ಲಿ ಚಿಕ್ಕಮಗಳೂರು ಮೂಲದ ಡಾ.ಟಿ.ದೇ.ಸೌಮ್ಯ ಅವರ ಕನ್ನಡದ ಕನ್ನಡಿಯಲ್ಲಿ ಮತ್ತು ಮಧ್ಯಕಾಲೀನ ಭಾರತದ ಸಂತ ಮಹಿಳೆಯರು ಎಂಬ ಎರಡು ಕೃತಿಗಳ ಲೋಕಾರ್ಪಣೆ ಮಾಡಿ ಮಾತನಾಡಿದರು.

ಸಮಾಜದಲ್ಲಿ ಹೆಣ್ಣು ಮಕ್ಕಳಿಗೆ ಇನ್ನು ಪುರುಷರಷ್ಟು ಸಮಾನತೆ ಸಿಕ್ಕಿಲ್ಲ. ಅವರಿಗೆ ಸಮಾನತೆ ನೀಡಬೇಕು. ವ್ಯಕ್ತಿತ್ವ ರೂಪಿಸಿಕೊಳ್ಳಲು ಗಂಡು ಮತ್ತು ಹೆಣ್ಣು ಮಕ್ಕಳಿಗೆ ಸಮಾನ ಅವಕಾಶ ಕಲ್ಪಿಸಬೇಕು.

ವಿಶ್ರಾಂತ ಕುಲಪತಿ, ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್ ಮಾತನಾಡಿ, ಮಹಿಳೆಯರ ಸಬಲೀಕರಣ ಎಂದರೆ ಅದು ಭಾರತದ ಸಬಲೀಕರಣ. ಈ ನಿಟ್ಟಿನಲ್ಲಿ ಮಹಿಳಾ ಸಬಲೀಕರಣಕ್ಕೆ ಒತ್ತು ಕೊಡಬೇಕು. ಡಾ.ಸೌಮ್ಯ ಅವರಿಗೆ ಸಾಹಿತ್ಯ ರಚನೆಯ ತುಡಿತ ಇದೆ. ಸಾಹಿತ್ಯ ಸಾಗರಕ್ಕೆ ಇನ್ನು ಅವರ ಕೃತಿಗಳು ಹರಿದು ಬರಬೇಕು. ಮಹಿಳೆಯರ ಸಾಧನೆಗೆ ಕುಟುಂಬದ ಪ್ರೋತ್ಸಾಹ ಅಗತ್ಯ. ಡಾ.ಸೌಮ್ಯ ಅವರಿಗೆ ಕುಟುಂಬದ ಒತ್ತಡ ಇದ್ದರೂ ಸಾಹಿತ್ಯ ರಚನೆ ನಿಲ್ಲಿಸದೆ ಮುಂದುವರಿಸಿದ್ದಾರೆ. ಪ್ರೋತ್ಸಾಹ ದೊರೆತರೆ ಉತ್ತಮ ಕೃತಿಗಳು ಹೊರಬರುತ್ತವೆ ಎಂದರು.

ಟ್ರಸ್ಟ್ ಅಧ್ಯಕ್ಷ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಮಾತನಾಡಿ, ಸಾಹಿತ್ಯ ರಚನೆಯಲ್ಲಿ ತೊಡಗಿಸಿಕೊಂಡು ಎಲೆಮರೆಕಾಯಿಯಂತಿರುವವರಿಗೆ ಅಕಾಡೆಮಿ ಹಾಗೂ ಮಂಡಳಿಗಳಲ್ಲಿ ಸ್ಥಾನ ದೊರೆಯುತ್ತಿಲ್ಲ. ಬದಲಿಗೆ ರಾಜಕೀಯ ಪಕ್ಷಗಳಿಗೆ ದುಡಿಯುವವರಿಗೆ ನೀಡಲಾಗುತ್ತಿದೆ ಎಂದು ಬೇಸರ ವ್ಯಕ್ತಪಡಿಸಿದರು.

ಲೇಖಕಿಯರಾದ ಡಾ.ಪೂರ್ಣಿಮಾ. ಎಸ್. ಜಯಶ್ರೀ ರಾಜು, ಟ್ರಸ್ಟ್ ಕಾರ್ಯದರ್ಶಿ ಸಿ.ಹೇಮಾವತಿ, ಸಂಚಾಲಕ ವಸಂತ್ ಕುಮಾರ್ ಹಾಗೂ ಇತರರು ಇದ್ದರು.

# ಮೇಕೆದಾಟು ಯೋಜನೆಯಿಂದ 5 ಸಾವಿರ ಹೆ. ಅರಣ್ಯ ನಾಶ

■ ವಿಕ ಸುದ್ದಿಲೋಕ ಬೆಂಗಳೂರು

ಮೇಕೆದಾಟು ಯೋಜನೆ ಅವೈಜ್ಞಾನಿಕವಾಗಿದ್ದು, ಪ್ರಕೃತಿಗೆ ವಿರುದ್ಧವಾಗಿ ಅಣೆಕಟ್ಟು ನಿರ್ಮಿಸಿದರೆ 5 ಸಾವಿರ ಹೆಕ್ಟೇರ್‌ನಷ್ಟು ಕಾಡು ನಾಶವಾಗಲಿದೆ ಎಂದು ಪರಿಸರ ವಿಜ್ಞಾನಿ ಡಾ. ಟಿ.ವಿ.ರಾಮಚಂದ್ರ ಆತಂಕ ವ್ಯಕ್ತಪಡಿಸಿದರು.

ಕರ್ನಾಟಕ ನೆಲ-ಜಲ-ಸಂರಕ್ಷಣಾ ಸಮಿತಿಯು ಗಾಂಧಿಭವನದಲ್ಲಿ ಶನಿವಾರ ಹಮ್ಮಿಕೊಂಡಿದ್ದ 'ಕುಡಿಯುವ ನೀರಿನ ಸಮಸ್ಯೆ' ಕುರಿತ ಚಿಂತನ ಮಂಥನ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

''5 ಸಾವಿರ ಹೆಕ್ಟೇರ್ ಅರಣ್ಯವು 100 ಟಿಎಂಸಿ ನೀರು ಇಂಗಿಸುತ್ತದೆ. ಅದನ್ನು ಹಾಳು ಮಾಡಿ ಕಾಂಕ್ರೀಟ್ ಅಣೆಕಟ್ಟು ನಿರ್ಮಿಸಿ 60 ಟಿಎಂಸಿ ನೀರು ನಿಲ್ಲಿಸುವ ಯೋಜನೆ ಜಾರಿಗೊಳಿಸುವುದರಲ್ಲಿ ಅರ್ಥವಿಲ್ಲ. ಇದು ಪ್ರಕೃತಿಗೆ ವಿರುದ್ಧವಾಗಿದೆ. ಇದರ ಬದಲು ಬೆಂಗಳೂರಿನಲ್ಲಿ ಮಳೆ ನೀರಿನಿಂದ ಸಿಗುವ 15 ಟಿಎಂಸಿ ನೀರನ್ನು ಪುನರ್ಬಳಕೆ ಮಾಡಿದರೆ, ಅಗತ್ಯಕ್ಕೆ ಬೇಕಿರುವ ನೀರು ಲಭ್ಯವಾಗಲಿದೆ. ಪರಿಸರ ಉಳಿಸಿಕೊಂಡು ಇಂತಹ ಯೋಜನೆ ರೂಪಿಸಬೇಕೇ ವಿನಃ ಅರಣ್ಯ ನಾಶ ಮಾಡುವುದರಲ್ಲಿ ಅರ್ಥವಿಲ್ಲ'' ಎಂದು ಹೇಳಿದರು.

## ಚಿಂತನ- ಮಂಥನ ಕಾರ್ಯಕ್ರಮದಲ್ಲಿ ಪರಿಸರ ವಿಜ್ಞಾನಿ ಕಳವಳ



ಚಿಂತನ ಮಂಥನ ಕಾರ್ಯಕ್ರಮವನ್ನು ಗಣ್ಯರು ಉದ್ಘಾಟಿಸಿದರು.

''ಕೆಂಪೇಗೌಡರು ಬೆಂಗಳೂರು ನಗರ ನಿರ್ಮಿಸಿದಾಗ 1,562 ಕೆರೆ, ಕುಂಟೆಗಳಿದ್ದವು. ಭೂ ಮಾಫಿಯಾ ಒತ್ತುವರಿಯಿಂದ 193 ಕೆರೆಗಳು ಮಾತ್ರ ಉಳಿದಿವೆ. ಆಡಳಿತ ಮಾಡುವ ಅಧಿಕಾರಸ್ಥರು ನೀರು, ಪರಿಸರದ ಬಗ್ಗೆ ಗಂಭೀರ ಚಿಂತನೆ ನಡೆಸುತ್ತಿಲ್ಲ. ಕಣ್ಣೊರೆಸುವ ತಂತ್ರಗಾರಿಕೆ ಮಾಡುತ್ತಿದ್ದಾರೆ. ಬೆಳ್ಳಂದೂರು ಕೆರೆಯಲ್ಲಿ ತ್ಯಾಜ್ಯ ತುಂಬಿದೆ. ಅದನ್ನು ಪುನರುಜ್ಜೀವನಗೊಳಿಸುವಂತೆ ವರದಿ ನೀಡಲಾಗಿದೆ. ಆದರೆ, ಅಧಿಕಾರಿಗಳು ಪುನರುಜ್ಜೀವನಗೊಳಿಸುವ ಮೊದಲೇ ಅದಕ್ಕೆ ಸಂಸ್ಕರಿಸಿದ ತ್ಯಾಜ್ಯ ನೀರು ತುಂಬಿಸಿ ಹಾಳು ಮಾಡಲು ಮುಂದಾಗಿದ್ದಾರೆ,'' ಎಂದು ಆಕ್ರೋಶ ವ್ಯಕ್ತಪಡಿಸಿದರು.

''ಜಕ್ಕೂರು ಕೆರೆ ಅಭಿವೃದ್ಧಿ ಪಡಿಸಿದ್ದೇವೆ. ಅದರ ಪರಿಣಾಮ ಸುತ್ತಮುತ್ತಲಿನ 300 ಕೊಳವೆ ಬಾವಿಗಳಲ್ಲಿ ಈಗಲೂ ನೀರಿದೆ. ಸಾರಕ್ಕಿ ಕೆರೆ ಪುನರುಜ್ಜೀವನಗೊಂಡಿದ್ದರಿಂದ ಅಲ್ಲಿನ ವಾತಾವರಣ ಚೆನ್ನಾಗಿದೆ,'' ಎಂದರು.

ರೈತ ಮುಖಂಡ ಕುರುಬೂರು ಶಾಂತಕುಮಾರ್ ಮಾತನಾಡಿ, ''ಕುಡಿಯುವ ನೀರಿಗಾಗಿ ಜನ ಪರಿತಪಿಸುತ್ತಿದ್ದಾರೆ. ಉತ್ತರ ಕರ್ನಾಟಕದಲ್ಲಿ ಕೃಷ್ಣಾ ಘಟಪ್ರಭಾ, ಮಹದಾಯಿ ನೀರು ಹರಿಸುವಂತೆ ರೈತರು ಹಲವು ವರ್ಷಗಳಿಂದ ಹೋರಾಟ ಮಾಡುತ್ತಿದ್ದಾರೆ. ಸದ್ಯ ಬೆಂಗಳೂರಿನಲ್ಲಿ ವಾರಕ್ಕೊಮ್ಮೆ ನೀರು ಸಿಗುವಂತಾಗಿದೆ. ಮೇಕೆದಾಟು ಯೋಜನೆ ರೂಪಿಸಲು ಬಿಡುವುದಿಲ್ಲವೆಂದು ಡಿಎಂಕೆ ಚುನಾವಣಾ ಪ್ರಣಾಳಿಕೆಯಲ್ಲಿ ತಿಳಿಸಿದೆ. ಕುಡಿಯುವ ನೀರಿನ ವಿವಾದ ಕೆಣಕಿ ಜನರನ್ನು ರೊಚ್ಚಿಗೆಬ್ಬಿಸುತ್ತಿರುವ ಡಿಎಂಕೆ ವಿರುದ್ಧ ರಾಜ್ಯ ಸರಕಾರ ಚುನಾವಣಾ ಆಯೋಗಕ್ಕೆ ದೂರು ನೀಡಬೇಕು,'' ಎಂದು ಒತ್ತಾಯಿಸಿದರು.

ಆಮ್ ಆದ್ಮಿ ಪಕ್ಷದ ರಾಜ್ಯಾಧ್ಯಕ್ಷ ಮುಖ್ಯಮಂತ್ರಿ ಚಂದ್ರು, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೆ ಪಿ.ಕೃಷ್ಣ, ದಾಕ್ಷಾಯಿಣಿ ಎಸ್.ದಳವಾಯಿ, ಶಿಕ್ಷಣ ತಜ್ಞ ನಿರಂಜನಾರಾಧ್ಯ, ಹೋಟೆಲ್ ಮಾಲೀಕರ ಸಂಘದ ಅಧ್ಯಕ್ಷ ಪಿ.ಸಿ.ರಾವ್ ಉಪಸ್ಥಿತರಿದ್ದರು.

ಉದಯವಾಣಿ

ಭಾನುವಾರ, ಮಾರ್ಚ್ 24, 2024

# ಬೆಂಗಳೂರಲ್ಲೇ ಸಿಗುವ 15 ಟಿಎಂಸಿ ಮಳೆ ನೀರು ಪುನರ್‌ಬಳಸಿ: ವಿಜ್ಞಾನಿ

## 'ಕುಡಿಯುವ ನೀರಿನ ಸಮಸ್ಯೆ' ಚಿಂತನ ಮಂಥನದಲ್ಲಿ ಡಾ.ರಾಮಚಂದ್ರ ಸಲಹೆ

■ **ಉದಯವಾಣಿ ಸಮಾಚಾರ**

**ಬೆಂಗಳೂರು:** ಮೇಕೆದಾಟು ಅಣೆಕಟ್ಟು ನಿರ್ಮಿಸುವ ಬದಲು ಬೆಂಗಳೂರಿನಲ್ಲಿ ಮಳೆಯಿಂದ ಸಿಗುವ 15 ಟಿಎಂಸಿ ನೀರನ್ನು ಪುನರ್ ಬಳಕೆ ಮಾಡಿದರೆ ಅಗತ್ಯಕ್ಕೆ ಬೇಕಿರುವಷ್ಟು ಸಿಗಲಿದೆ. ಪರಿಸರ ಉಳಿಸಿಕೊಂಡು ಇಂತಹ ಯೋಜನೆ ರೂಪಿಸಿಕೊಳ್ಳಬೇಕೇ ಹೊರತು, ನಾಶಮಾಡಿ ಅಲ್ಲ ಎಂದು ಭಾರತೀಯ ವಿಜ್ಞಾನ ಮಂದಿರದ ಪರಿಸರ ವಿಜ್ಞಾನಿ ಡಾ.ಟಿ.ವಿ.ರಾಮಚಂದ್ರ ಹೇಳಿದರು.

ಕರ್ನಾಟಕ ನೆಲ-ಜಲ-ಸಂರಕ್ಷಣಾ ಸಮಿತಿಯು ಗಾಂಧಿ ಭವನದಲ್ಲಿ ಶನಿವಾರ ಹಮ್ಮಿಕೊಂಡಿದ್ದ 'ಕುಡಿಯುವ ನೀರಿನ ಸಮಸ್ಯೆ' ಚಿಂತನ ಮಂಥನ ಕಾರ್ಯಕ್ರಮದಲ್ಲಿ ಮಾತನಾಡಿ, ಮೇಕೆದಾಟು ಅಣೆಕಟ್ಟು ನಿರ್ಮಿಸಿದರೆ 5 ಸಾವಿರ ಹೆಕ್ಟೇರ್ ಕಾಡು ನಾಶವಾಗಲಿದೆ. ಇದು 100 ಟಿಎಂಸಿ ನೀರನ್ನು ಇಂಗಿಸುತ್ತದೆ. ಇದನ್ನು ಹಾಳು ಮಾಡಿ ಕಾಂಕ್ರೀಟ್ ಅಣೆಕಟ್ಟು ನಿರ್ಮಿಸಿ 60 ಟಿಎಂಸಿ ನೀರು ನಿಲ್ಲಿಸುವ ಯೋಜನೆ ಜಾರಿಗೆ ತರುವುದು ಪ್ರಕೃತಿಗೆ ವಿರುದ್ಧವಾಗಿದೆ ಎಂದು ಹೇಳಿದರು.

**193 ಕೆರೆಗಳು ಮಾತ್ರ ಉಳಿದಿವೆ:** ಕೆಂಪೇಗೌಡರು ಬೆಂಗಳೂರು ನಗರ ನಿರ್ಮಾಣ ಮಾಡಿದಾಗ 1,562 ಕೆರೆ ಕುಂಟೆಗಳಿದ್ದವು. ಭೂ ಮಾಫಿಯಾ ಒತ್ತುವರಿಯಿಂದ 193 ಕೆರೆಗಳು ಮಾತ್ರ ಉಳಿದಿವೆ. ಆಡಳಿತ ಮಾಡುವವರು ಪರಿಸರದ ಬಗ್ಗೆ ಗಂಭೀರ ಚಿಂತನೆ ನಡೆಸುತ್ತಿಲ್ಲ, ಕಣ್ಣೊರೆಸುವ ತಂತ್ರಗಾರಿಕೆ ಮಾಡುತ್ತಿದ್ದಾರೆ. ವರ್ತೂರು, ಬೆಳ್ಳಂದೂರು ಕೆರೆಗಳಲ್ಲಿ ತ್ಯಾಜ್ಯ ತುಂಬಿದೆ. ಇದನ್ನು ನಿರ್ವಹಣೆ ಮಾಡುವ ಮೊದಲೇ ಪುನರ್ ಬಳಕೆ ಮಾಡಿದ ತ್ಯಾಜ್ಯ ನೀರನ್ನು ತುಂಬಿಸಿ ಹಾಳು ಮಾಡಲಾಗುತ್ತಿದೆ. ಜಕ್ಕೂರು ಕೆರೆ ಅಭಿವೃದ್ಧಿಪಡಿಸಿದ್ದೇವೆ. ಅದರ ಪರಿಣಾಮ ಸುತ್ತ-ಮುತ್ತಲಿನ 300 ಕೊಳವೆ ಬಾವಿಗಳಲ್ಲಿ ಈಗಲೂ ನೀರಿದೆ ಎಂದು ವಿವರಿಸಿದರು.



'ಕುಡಿಯುವ ನೀರಿನ ಸಮಸ್ಯೆ' ಚಿಂತನ ಮಂಥನಾ ಕಾರ್ಯಕ್ರಮವನ್ನು ಪರಿಸರ ವಿಜ್ಞಾನಿ ಡಾ.ಟಿ.ವಿ.ರಾಮಚಂದ್ರ ಉದ್ಘಾಟಿಸಿದರು. ದಾಕ್ಷಾಯಿಣೀ, ನಿರಂಜನಾರಾಧ್ಯ, ಪಿ.ಸಿ.ರಾವ್ ಇದ್ದರು.

ರೈತ ಮುಖಂಡ ಕುರುಬೂರು ಶಾಂತಕುಮಾರ್, ಆಮ್ ಆದ್ಮಿ ಪಕ್ಷದ ರಾಜ್ಯಾಧ್ಯಕ್ಷ ಮುಖ್ಯಮಂತ್ರಿ ಚಂದ್ರು, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವುಡೇ ಪಿ.ಕೃಷ್ಣ ಪ್ರತೀಕ್ಷ್ ಎನ್ವಿರೋ ಸೊಲ್ಯೂಷನ್ಸ್ ಮತ್ತು ಕಾಲ್ಸೆಂಟರ್ 4 ವಾಟರ್ಸ್ ಸಂಸ್ಥೆಯ ಎಂಡಿ ದಾಕ್ಷಾಯಿಣಿ ಎಸ್. ದಳವಾಯಿ, ಶಿಕ್ಷಣ ತಜ್ಞ ನಿರಂಜನಾರಾಧ್ಯ, ಹೋಟೆಲ್ ಮಾಲೀಕರ ಸಂಘದ ಅಧ್ಯಕ್ಷ ಪಿ.ಸಿ.ರಾವ್ ಮತ್ತಿತರರು ಉಪಸ್ಥಿತರಿದ್ದರು.

ಕನ್ನಡಪ್ರಭ ಭಾನುವಾರ 24.03.2024

**ತಜ್ಞರ ಅಭಿಪ್ರಾಯ** ಮೇಕೆದಾಟು ಡ್ಯಾಮ್‌ನಿಂದ 5000 ಹೆಕ್ಟೇರ್ ಕಾಡು ನಾಶ: ಐಐಎಸ್ಸಿ ವಿಜ್ಞಾನಿ ರಾವ್

# 'ಅಣೆಕಟ್ಟು ಕಟ್ಟುವುದು ಪ್ರಕೃತಿಗೆ ವಿರುದ್ಧ'

• ಕನ್ನಡಪ್ರಭ ವಾರ್ತೆ ಬೆಂಗಳೂರು

ಮೇಕೆದಾಟು ಅಣೆಕಟ್ಟು ಯೋಜನೆ ಅನುಷ್ಠಾನಗೊಂಡರೆ 100 ಟಿಎಂಸಿ ನೀರು ಇಂಗಿಸುವ 5 ಸಾವಿರ ಹೆಕ್ಟೇರ್ ಕಾಡು ನಾಶವಾಗಲಿದೆ ಎಂದು ಭಾರತೀಯ ವಿಜ್ಞಾನ ಮಂದಿರದ ಪರಿಸರ ವಿಜ್ಞಾನಿ ಡಾ। ಟಿ.ವಿ.ರಾಮಚಂದ್ರರಾವ್ ಅಭಿಪ್ರಾಯಪಟ್ಟಿದ್ದಾರೆ.

ಕರ್ನಾಟಕ ನೆಲ-ಜಲ-ಸಂರಕ್ಷಣಾ ಸಮಿತಿಯು ಗಾಂಧಿ ಭವನದಲ್ಲಿ ಶನಿವಾರ ಆಯೋಜಿಸಿದ್ದ 'ಕುಡಿಯುವ ನೀರಿನ ಸಮಸ್ಯೆ' ಚಿಂತನ ಮಂಥನ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಕಾಂಕ್ರೀಟ್ ಅಣೆಕಟ್ಟು ನಿರ್ಮಿಸಿ 60 ಟಿಎಂಸಿ ನೀರು ನಿಲ್ಲಿಸುವ ಮೇಕೆದಾಟು ಯೋಜನೆ ಜಾರಿಗೆ ತರುವುದು ಪ್ರಕೃತಿಗೆ ವಿರುದ್ಧವಾಗಿದೆ. ಈ ಯೋಜನೆಗೆ ಪರ್ಯಾಯವಾಗಿ ಬೆಂಗಳೂರಿನಲ್ಲಿ ಮಳೆ ನೀರಿನಿಂದ ಸಿಗುವ 15 ಟಿಎಂಸಿ ನೀರನ್ನು ಪುನರ್‌ಬಳಕೆ ಮಾಡುವುದು ಉತ್ತಮ ಎಂದರು.

ಕೆಂಪೇಗೌಡರು ಬೆಂಗಳೂರು ನಗರ ನಿರ್ಮಿಸಿದಾಗ 1,562 ಕೆರೆ ಕುಂಟೆಗಳಿದ್ದವು. ಭೂ ಮಾಫಿಯಾ ಒತ್ತುವರಿಯಿಂದ 193 ಕೆರೆಗಳು ಮಾತ್ರ ಉಳಿದಿವೆ. ಆಡಳಿತ ಮಾಡುವ ಅಧಿಕಾರಸ್ಥರು ನೀರು, ಪರಿಸರದ ಬಗ್ಗೆ ಗಂಭೀರ ಚಿಂತನೆ ನಡೆಸುತ್ತಿಲ್ಲ, ಕಣ್ಣೊರೆಸುವ ಕೆಲಸ ಮಾಡುತ್ತಿದ್ದಾರೆ. ತ್ಯಾಜ್ಯ ತುಂಬಿರುವ ವರ್ತೂರು, ಬೆಳ್ಳಂದೂರು ಕೆರೆಗಳನ್ನು ನಿರ್ವಹಣೆ ಮಾಡುವ ಬದಲು ಪುನರ್‌ಬಳಕೆ ಮಾಡಿದ ತ್ಯಾಜ್ಯ ನೀರನ್ನು ತುಂಬಿಸಿ ಹಾಳು ಮಾಡಲಾಗುತ್ತಿದೆ. ಜಕ್ಕೂರು ಕೆರೆ ಅಭಿವೃದ್ಧಿಪಡಿಸಿದ ಪರಿಣಾಮ ಸುತ್ತ-ಮುತ್ತಲಿನ 300 ಕೊಳವೆ ಬಾವಿಗಳಲ್ಲಿ ಈಗಲೂ ನೀರಿದೆ ಎಂದು ಹೇಳಿದರು.

ರೈತ ಮುಖಂಡ ಕುರುಬೂರು ಶಾಂತಕುಮಾರ್ ಮಾತನಾಡಿ, ಬೆಂಗಳೂರಿನಲ್ಲಿ ಕುಡಿಯುವ ನೀರಿಗಾಗಿ ಜನ ಹಾಹಾಕಾರ ಪಡುತ್ತಿದ್ದಾರೆ. ಇಂತಹ ಸ್ಥಿತಿಯಲ್ಲಿ ಮೇಕೆದಾಟು ಕುಡಿಯುವ ನೀರಿನ ಯೋಜನೆಯನ್ನು ಸ್ಥಗಿತಗೊಳಿಸುವ ಡಿಎಂಕೆ ಚುನಾವಣಾ ಪ್ರಣಾಳಿಕೆ ಏಕೆ ಬೇಕು. ಕುಡಿಯುವ ನೀರಿನ ವಿವಾದ ಕೆಣಕಿ ಜನರನ್ನು ರೊಚ್ಚಿಗೇಳಿಸುವ ರಾಜಕೀಯ ಪಕ್ಷದ ವಿರುದ್ಧ ಚುನಾವಣಾ ಆಯೋಗ ಕಠಿಣ ಕ್ರಮ ಕೈಗೊಳ್ಳಬೇಕು. ರಾಜ್ಯ ಸರ್ಕಾರ ಚುನಾವಣಾ ಆಯೋಗಕ್ಕೆ ಕ್ರಮ ಕೈಗೊಳ್ಳುವಂತೆ ದೂರು ಸಲ್ಲಿಸಬೇಕು. ನೀರಿನ ಸಂಕಷ್ಟ ಕಾಲದಲ್ಲಿ ರೈತರು ಕೂಡ ಬೆಳೆ ಪದ್ಧತಿ ಬದಲಾಯಿಸಿಕೊಳ್ಳಬೇಕು. ಕಾವೇರಿ ನೀರು ತಮಿಳುನಾಡಿಗೆ ಹರಿಸದಂತೆ ಸರ್ಕಾರದ ಗಮನ ಸೆಳೆದರೂ ಪ್ರಯೋಜನವಾಗಲಿಲ್ಲ. ರಾಜ್ಯ ಸರ್ಕಾರದ ವೈಫಲ್ಯದಿಂದ ಸಂಕಷ್ಟ ಪಡುವಂತಾಗಿದೆ ಎಂದು ಹೇಳಿದರು.



ಆಮ್ ಆದ್ಮಿ ಪಕ್ಷದ ರಾಜ್ಯಾಧ್ಯಕ್ಷ ಮುಖ್ಯಮಂತ್ರಿ ಚಂದ್ರು, ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ಪ್ರೊ.ಡೇ ಟಿ.ಕೃಷ್ಣ, ಪ್ರತೀಕ್ಷ ಎನ್ವಿರೋ ಸೊಲ್ಯೂಷನ್ಸ್ ಮತ್ತು ಕಾಲ್‌ಸೆಂಟರ್ 4 ವಾಟರ್ಸ್ ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕಿ ದಾಕ್ಷಾಯಿಣಿ ಎಸ್.ದಳವಾಯಿ, ಶಿಕ್ಷಣ ತಜ್ಞ ನಿರಂಜನಾರಾಧ್ಯ, ಹೋಟೆಲ್ ಮಾಲೀಕರ ಸಂಘದ ಅಧ್ಯಕ್ಷ ಪಿ.ಸಿ.ರಾವ್ ಉಪಸ್ಥಿತರಿದ್ದರು.

ವಿಜಯವಾಣಿ ನಂ.1 | Mar 24, 2024

## ಐಐಎಸ್ಸಿ ಸಂಶೋಧಕ ಡಾ. ಟಿ.ವಿ. ರಾಮಚಂದ್ರ ಅಭಿಮತ | ಮಳೆಕೊಯ್ಲು ಕಡ್ಡಾಯ ಅಗತ್ಯ

# ಅಧಿಕಾರಸ್ಥರ ನಿರ್ಲಕ್ಷ್ಯದಿಂದ ನೀರಿನ ಸಮಸ್ಯೆ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಅಧಿಕಾರಸ್ಥರು ಪರಿಸರದ ಬಗ್ಗೆ ಗಂಭೀರ ಚಿಂತನೆ ನಡೆಸದೆ, ಕಣ್ಣೊರೆಸುವ ತಂತ್ರಗಾರಿಕೆ ಮಾಡುತ್ತಿರುವುದರಿಂದ ಪ್ರಸ್ತುತ ಕುಡಿಯುವ ನೀರಿನ ತೀವ್ರ ಸಮಸ್ಯೆ ಕಾಡುತ್ತಿದೆ ಎಂದು ಭಾರತೀಯ ವಿಜ್ಞಾನ ಸಂಸ್ಥೆ (ಐಐಎಸ್ಸಿ) ಸಂಶೋಧಕ ಡಾ. ಟಿ.ವಿ. ರಾಮಚಂದ್ರ ಹೇಳಿದ್ದಾರೆ.

ಕರ್ನಾಟಕ ನೆಲ- ಜಲ ಸಂರಕ್ಷಣಾ ಸಮಿತಿ ಹಾಗೂ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಹಮ್ಮಿಕೊಂಡಿದ್ದ 'ಕುಡಿಯುವ ನೀರಿನ ಸಮಸ್ಯೆ' ಕುರಿತು ವಿಚಾರ ಮಂಥನ ಉದ್ಘಾಟಿಸಿ ಮಾತನಾಡಿದರು. ಕೆಂಪೇಗೌಡರ ಕಾಲದಲ್ಲಿ ನಗರದಲ್ಲಿ 1,562 ಕೆರೆ- ಕುಂಟೆಗಳಿದ್ದವು. ಆದರೀಗ ಒತ್ತುವರಿಯಿಂದಾಗಿ 193 ಕರೆಗಳು ಉಳಿದಿವೆ. ನೀರಿನ ಸಮಸ್ಯೆಗೆ ಪರಿಹಾರವಾಗಿ ಮಳೆಕೊಯ್ಲು ವ್ಯವಸ್ಥೆ ಕಡ್ಡಾಯ ಮಾಡಿದಲ್ಲಿ ಬಹುತೇಕ ಸಮಸ್ಯೆಗೆ ಪರಿಹಾರ ಸಿಗುತ್ತದೆ ಎಂದರು.

ಮೇಕೆದಾಟುಯೋಜನೆಅನುಷ್ಠಾನಗೊಂಡರೆ 5 ಸಾವಿರ ಹೆಕ್ಟೇರ್ ಕಾಡು ಮತ್ತು ಪರಿಸರ ನಾಶವಾಗಲಿದೆ. ಅದರ ಬದಲು ಬೆಂಗಳೂರಿನ ಅಂತರ್ಜಲ ಹೆಚ್ಚಿಸುವ ಯೋಜನೆಗಳನ್ನು ಜಾರಿಗೆ ತರಬೇಕು. ಒತ್ತುವರಿಯಾಗಿರುವ ರಾಜಕಾಲುವೆ, ಕೆರೆಗಳನ್ನು ತೆರವುಗೊಳಿಸಿದರೆ ನೀರಿನ ಸಮಸ್ಯೆ ಬಗೆಹರಿಯುತ್ತದೆ ಎಂದು ವಿವರಿಸಿದರು. ಬೆಂಗಳೂರು ಹೋಟೆಲ್ ಮಾಲೀಕರ ಸಂಘದ ಅಧ್ಯಕ್ಷ ಪಿ.ಸಿ. ರಾವ್, ಶಿಕ್ಷಣ ತಜ್ಞ ಡಾ. ವಿ.ಪಿ. ನಿರಂಜನಾರಾಧ್ಯ, ಕನ್ನಡ ಚಳವಳಿ ಮುಖಂಡ ಗುರುದೇವ್ ನಾರಾಯಣ ಕುಮಾರ್, ಮಾಜಿ ಸೈನಿಕರ ಸಂಘದ ಅಧ್ಯಕ್ಷ ಡಾ. ಶಿವಣ್ಣ, ದಾಕ್ಷಾಯಿಣಿ ಇತರರಿದ್ದರು.



ಕರ್ನಾಟಕ ನೆಲ ಜಲ ಸಂರಕ್ಷಣಾ ಸಮಿತಿ ಹಾಗೂ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಆಯೋಜಿಸಿದ್ದ 'ಕುಡಿಯುವ ನೀರು ಸಮಸ್ಯೆ' ಕುರಿತ ವಿಚಾರ ಮಂಥನದಲ್ಲಿ ಡಾ. ಟಿ.ವಿ. ರಾಮಚಂದ್ರ, ಕುರುಬೂರು ಶಾಂತಕುಮಾರ್, 'ಮುಖ್ಯಮಂತ್ರಿ' ಚಂದ್ರು, ಡಾ. ವೂಡೇ ಪಿ. ಕೃಷ್ಣ ಮತ್ತಿತರರು ಇದ್ದರು.

### ಚುನಾವಣಾ ಆಯೋಗಕ್ಕೆ ದೂರು ಸಲ್ಲಿಸಿ

ಉತ್ತರ ಕರ್ನಾಟಕದಲ್ಲಿ ಭೀಮಾ, ಕೃಷ್ಣಾ, ಘಟಪ್ರಭಾ, ಮಹದಾಯಿ ನದಿಗಳಿಂದ ನೀರು ಹರಿಸುವಂತೆ ರೈತರು ಆಗ್ರಹಿಸುತ್ತಿದ್ದಾರೆ. ಬೆಂಗಳೂರಿನಲ್ಲಿ ಜಲಸಂಕಷ್ಟ ಎದುರಾಗಿದೆ. ಇಂಥ ಸ್ಥಿತಿಯಲ್ಲಿ ಮೇಕೆದಾಟು ಕುಡಿಯುವ ನೀರಿನ ಯೋಜನೆ ಸ್ಥಗಿತಗೊಳಿಸುವ ಡಿಎಂಕೆ ಚುನಾವಣಾ ಪ್ರಣಾಳಿಕೆ ಕುರಿತು ರಾಜ್ಯ ಸರ್ಕಾರ ಚುನಾವಣಾ ಆಯೋಗಕ್ಕೆ ದೂರು ಸಲ್ಲಿಸಬೇಕು ಎಂದು ರಾಜ್ಯ ರೈತ ಸಂಘಟನೆಗಳ ಒಕ್ಕೂಟದ ಅಧ್ಯಕ್ಷ ಕುರುಬೂರು ಶಾಂತಕುಮಾರ್ ಆಗ್ರಹಿಸಿದರು.

---

ಸಂಸ್ಕರಿಸಿದ ನೀರಿನ ಮರುಬಳಕೆ ಬಗ್ಗೆ ಜನರಿಗೆ ಸರಿಯಾದ ಮಾಹಿತಿ ಇಲ್ಲ. ನೀರಿನ ಭೀಕರತೆ ಹೀಗೆಯೇ ಮುಂದುವರಿದಲ್ಲಿ ಬೆಂಗಳೂರು ನಗರ ನಿವಾಸಿಗಳು ವಲಸೆ ಹೋಗಬೇಕಾಗುತ್ತದೆ. ಇದನ್ನು ಅರಿತು ನೀರು ಸರಬರಾಜು ಮಂಡಳಿಯವರು ಸಮರೋಪಾದಿಯಲ್ಲಿ ಜಾಗೃತಿ ಮೂಡಿಸಬೇಕಿದೆ.

| 'ಮುಖ್ಯಮಂತ್ರಿ' ಚಂದ್ರು
ಆಮ್ ಆದ್ಮಿ ಪಕ್ಷದ ರಾಜ್ಯಾಧ್ಯಕ್ಷ

# ‘ವಿಶ್ವಕ್ಕೆ ಮೊದಲು ಪ್ರಜಾಪ್ರಭುತ್ವ ಕಲ್ಪನೆ ಪರಿಚಯಿಸಿದ ಬಸವಣ್ಣ’

## ಸಮಾನತೆ ಸಾರಿದ ಕಾಯಕ ಯೋಗಿ: ನಿವೃತ್ತ ನ್ಯಾಯಮೂರ್ತಿ ಶಿವರಾಜ್ ಪಾಟೀಲ್

■ ಉದಯವಾಣಿ ಸಮಾಚಾರ

ಬೆಂಗಳೂರು: ಅನುಭವ ಮಂಟಪದ ಮೂಲಕ ವಿಶ್ವಕ್ಕೆ ಪ್ರಜಾಪ್ರಭುತ್ವ ವ್ಯವಸ್ಥೆಯನ್ನು ಮೊದಲು ಪರಿಚಯಿಸಿದ ಶ್ರೇಯಸ್ಸು ಬಸವಣ್ಣ ಅವರಿಗೆ ಸಲ್ಲುತ್ತದೆ. ಅನುಭವ ಮಂಟಪದಲ್ಲಿ ಮಹಿಳೆರಿಗೂ ಸ್ಥಾನ ನೀಡುವ ಮೂಲಕ ಅವರು ಸಮ ಸಮಾಜದ ಪರಿಕಲ್ಪನೆಯನ್ನು ಬಿತ್ತಿದರು ಎಂದು ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾ. ಶಿವರಾಜ್ ಪಾಟೀಲ್ ಮೆಚ್ಚುಗೆ ವ್ಯಕ್ತಪಡಿಸಿದರು.

ಕರ್ನಾಟಕ ಪ್ರತಿಭಾವರ್ಧಕ ಅಕಾಡೆಮಿಯು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಶುಕ್ರವಾರ ಹಮ್ಮಿಕೊಂಡಿದ್ದ ವಿಶ್ವಗುರು ಬಸವೇಶ್ವರ ಜಯಂತಿ ಕಾರ್ಯಕ್ರಮದಲ್ಲಿ ವಿವಿಧ ಕ್ಷೇತ್ರಗಳ ಸಾಧಕರನ್ನು ಸನ್ಮಾನಿಸಿ ಅವರು ಮಾತನಾಡಿದರು.

ಬಸವಣ್ಣ ಅವರನ್ನು ಈಗಾಗಲೇ ರಾಜ್ಯ ಸರ್ಕಾರ ಕೂಡ ಸಾಂಸ್ಕೃತಿಕ ನಾಯಕ ಎಂದು ಘೋಷಣೆ ಮಾಡಿದೆ. ಕಾಯಕವೇ ಕೈಲಾಸ ಎಂದು ಹೇಳಿ ತಮ್ಮ ಕಾಯಕದ ಮೂಲಕ ಕೈಲಾಸ ಕಂಡರು. ಸಮಗ್ರ ಕ್ರಾಂತಿಯ ಮೂಲಕ ಸಮಾಜವನ್ನು ಸರಿದಾರಿಗೆ ತರುವ ಕಾರ್ಯಕ್ಕೆ ಮುನ್ನುಡಿ ಬರೆದರು. ಅನುಭವ ಮಂಟಪದ ಮೂಲಕ ಜಾತಿ ವ್ಯವಸ್ಥೆಯನ್ನು ಹೋಗಲಾಡಿಸುವ ನಿಟ್ಟಿನಲ್ಲಿ ಪ್ರಯತ್ನಿಸಿದರು. ಅನುಭವ ಮಂಟಪದಲ್ಲಿ ಮೇಲು ಕೀಳಿಲ್ಲದೆ ಎಲ್ಲರಿಗೂ ಬಸವಣ್ಣನವರು ಆದ್ಯತೆ ನೀಡಿದ್ದರು ಎಂದು ಸ್ಮರಿಸಿದರು.



ಕನ್ನಡ ಸಾಹಿತ್ಯ ಪರಿಷತ್‌ನಲ್ಲಿ ಆಯೋಜಿಸಿದ್ದ ಬಸವ ಜಯಂತಿ ಕಾರ್ಯಕ್ರಮವನ್ನು ಸುಪ್ರೀಂ ಕೋರ್ಟ್‌ನ ನಿವೃತ್ತ ನ್ಯಾ. ಶಿವರಾಜ್ ಪಾಟೀಲ್ ಉದ್ಘಾಟಿಸಿದರು. ಹಿರಿಯ ಹಿನ್ನೆಲೆ ಗಾಯಕಿ ಬಿ.ಕೆ ಸುಮಿತ್ರಾ ಇತರರಿದ್ದರು.

**ಪ್ರಶಸ್ತಿ ಸಾಧಕರ ಕೈ ಸೇರಬೇಕು:** ಶಿಫಾರಸು ಪತ್ರದೊಂದಿಗೆ ಪ್ರಶಸ್ತಿ ಪಡೆದರೆ ಅದರ ಮೌಲ್ಯ ಕಡಿಮೆ. ಪ್ರಶಸ್ತಿ ಯಾವಾಗಲೂ ಸಾಧಕರ ಕೈ ಸೇರಬೇಕು. ಎಲೆಮರೆ ಕಾಯಿಯಂತಿರುವವರನ್ನು ಗುರುತಿಸಿ ಗೌರವಿಸಬೇಕು. ಆಗ ಮಾತ್ರ ಪ್ರಶಸ್ತಿಯ ಮೌಲ್ಯ ಹೆಚ್ಚಾಗುತ್ತದೆ. ಪ್ರಶಸ್ತಿ ಕೊಡುವವರು ಕೂಡ ಸಾಧಕರನ್ನು ಅವರಿರುವ ಸ್ಥಳಕ್ಕೆ ಹೋಗಿ ಶೋಧನೆ ಮಾಡಬೇಕು. ಆಗ ಪ್ರಶಸ್ತಿ ಕೊಡುವ ಸಂಸ್ಥೆಗೂ ಗೌರವ, ಪ್ರಶಸ್ತಿಗೂ ಮತ್ತಷ್ಟು ಗೌರವ ಬರುತ್ತದೆ. ಈ ವಿಚಾರದಲ್ಲಿ ಕರ್ನಾಟಕ ಪ್ರತಿಭಾವರ್ಧಕ ಅಕಾಡೆಮಿ ಉತ್ತಮವಾಗಿ ಕೆಲಸ ಮಾಡುತ್ತಿದ್ದು ಹಲವು ಸಾಧಕರನ್ನು ಹುಡುಕಿ ಗೌರವಿಸಿರುವುದು ಸಂತಸ ತಂದಿದೆ ಎಂದರು.

ಹಿರಿಯ ಹಿನ್ನೆಲೆ ಗಾಯಕಿ ಬಿ.ಕೆ ಸುಮಿತ್ರಾ, ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿ ಮಾಜಿ ಅಧ್ಯಕ್ಷ ಶಾಂತ್ ತಿಮ್ಮಯ್ಯಗೆ ಪ್ರಶಸ್ತಿ ನೀಡಲಾಯಿತು. ಈ ಸಂದರ್ಭದಲ್ಲಿ ಶೇಷಾದ್ರಿಪುರಂ ಎಜುಕೇಷನಲ್ ಟ್ರಸ್ಟ್‌ನ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ. ಕೃಷ್ಣ ಸಂಸ್ಕೃತ ವಿವಿ ವಿಶ್ರಾಂತ ಕುಲಪತಿ ಪ್ರೊ. ಮಲ್ಲೇಪುರಂ ಜಿ.ವೆಂಕಟೇಶ್ ಮಾತನಾಡಿ, ಪ್ರಶಸ್ತಿ ಸಾಧಕರ ಜವಾಬ್ದಾರಿಯನ್ನು ಮತ್ತಷ್ಟು ಹೆಚ್ಚಿಸುತ್ತದೆ ಎಂದು ತಿಳಿಸಿದರು. ಓಂಕಾರ ಆಶ್ರಮದ ಮಧುಸೂದನಾನಂದಪುರಿ ಸ್ವಾಮೀಜಿ, ಮು.ಗೋವಿಂದರಾಜು ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ಈ ಸಂಜೆ

Mar 24, 2024



ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಬುದ್ಧ, ಬಸವ, ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ಡಾ.ಚಿ.ದೇ.ಸೌಮ್ಯ ಅವರ ಕನ್ನಡದ ಕನ್ನಡಿಯಲ್ಲಿ ಹಾಗೂ ಮಧ್ಯಕಾಲೀನ ಭಾರತದ ಸಂತ ಮಹಿಳೆಯರು ಎಂಬ ಕೃತಿಯನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ, ನಾಡೋಜ ಡಾ.ವೂಡೆ ಪಿ.ಕೃಷ್ಣ, ವಿಶ್ರಾಂತ ಕುಲಪತಿ ಪ್ರೊ.ಮಲ್ಲೇಪುರಂ ಜಿ.ವೆಂಕಟೇಶ್, ಲೇಖಕಿಯರಾದ ಡಾ.ಎಸ್.ಪೂರ್ಣಿಮಾ, ಜಯಶ್ರೀ, ರಾಜು, ಟ್ರಸ್ಟ್ ಅಧ್ಯಕ್ಷ ಡಾ.ಎಸ್.ರಾಮಲಿಂಗೇಶ್ವರ ಅವರು ಬಿಡುಗಡೆ ಮಾಡಿದರು.


ಜನದನಿಯ ಸಾರಥಿ
ವಾರ್ತಾ ಭಾರತಿ

Mar 24, 2024

# ಅನಾಗರಿಕ ನಗರೀಕರಣವೇ ಕೆರೆಗಳ ನಾಶಕ್ಕೆ ಕಾರಣ



## ಡಾ.ರಾಮಚಂದ್ರರಾವ್

ಬೆಂಗಳೂರು, ಮಾ.23: ಬೆಂಗಳೂರು ನಗರದಲ್ಲಿ ಎಪ್ಪತ್ತರ ದಶಕದಲ್ಲಿ 1,452 ಕೆರೆಗಳಿದ್ದವು. ಆದರೆ, ಇದೀಗ 193 ಕೆರಗಳು ಮಾತ್ರವೇ ಉಳಿದಿವೆ. ಕೆರೆಗಳ ನಾಶಕ್ಕೆ ಅನಾಗರಿಕ ನಗರೀಕರಣವೇ ಮೂಲ ಕಾರಣವಾಗಿದೆ ಎಂದು ಪರಿಸರ ವಿಜ್ಞಾನಿ ಡಾ.ಟಿ.ವಿ.ರಾಮಚಂದ್ರರಾವ್ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಶನಿವಾರ ನಗರದ ಗಾಂಧಿ ಭವನದಲ್ಲಿ ನಮ್ಮ ಭೂಮಿ-ನಮ್ಮ ಜಲ-ನಮ್ಮ ಹಕ್ಕು ಕರ್ನಾಟಕ ನೆಲ ಜಲ ಸಂರಕ್ಷಣಾ ಸಮಿತಿ, ಗಾಂಧಿ ಸ್ಮಾರಕ ನಿಧಿ ವತಿಯಿಂದ ಹಮ್ಮಿಕೊಂಡಿದ್ದ ಕುಡಿಯುವ ನೀರಿನ ಸಮಸ್ಯೆಯ ಚಿಂತನ ಮಂಥನ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಪ್ರಸ್ತುತ ಕಲುಷಿತವಾಗಿರುವ ಪರಿಸರದಲ್ಲಿ ಮುಂದಿನ ಪೀಳಿಗೆ ಉತ್ತಮ ಆರೋಗ್ಯದಿಂದ ಬದುಕಬೇಕಾದರೆ, ಶುದ್ಧವಾದ ಗಾಳಿ, ನೀರು, ಪರಿಸರ ಅನಿವಾರ್ಯವಾಗಿದೆ ಎಂದು ಪ್ರತಿಪಾದಿಸಿದರು.

ಬೆಂಗಳೂರಿನ ಸಾರಕ್ಕಿ ಕೆರೆಯಲ್ಲಿರುವ ಮತ್ತು ಸುತ್ತಮುತ್ತಲಿನಲ್ಲಿ ಅಂತರ್ಜಲ ಸಮೃದ್ಧವಾಗಿದೆ. ಇದೆ ಮಾದರಿಯನ್ನು ಎಲ್ಲ ಕೆರೆಗಳಿಗೂ ಅಳವಡಿಸಿದರೆ 15 ಟಿಎಂಸಿ ಅಡಿಗಳಷ್ಟು ನೀರಿನ ಲಭ್ಯತೆಯನ್ನು ಕಾಪಾಡಿಕೊಳ್ಳಬಹುದು. ಮುಖ್ಯವಾಗಿ ಕೆರೆಗಳಲ್ಲಿರುವ ಕಲ್ಮಶವನ್ನು ಹೊರತೆಗೆಯಬೇಕು, ಅದಕ್ಕೂ ಮೊದಲು ಕೆರೆಗೆ ಬಿಡುವ ಕಲ್ಮಶವನ್ನು ನಿಲ್ಲಿಸಬೇಕು. ಕೆರೆಗಳು ಪುನಶ್ಚೇತನ ಆಗಬೇಕು. ಇದು ಎಲ್ಲರ ಜವಾಬ್ದಾರಿ ಆಗಬೇಕು. ಆಗಷ್ಟೇ ಮುಂದಿನ ಪೀಳಿಗೆ ಆರೋಗ್ಯದಿಂದ ಬದುಕಲು ಸಾಧ್ಯವಾಗುತ್ತದೆ ಎಂದು ಅವರು ಸಲಹೆ ನೀಡಿದರು.

ಕಾರ್ಯಕ್ರಮದಲ್ಲಿ ವಿಧಾನ ಪರಿಷತ್ ಮಾಜಿ ಸದಸ್ಯ ಮುಖ್ಯಮಂತ್ರಿ ಚಂದ್ರು, ರೈತ ಸಂಘಟನೆಗಳ ಒಕ್ಕೂಟದ ಕುರುಬೂರು ಶಾಂತಕುಮಾರ್, ವಾಟರ್ ನಿರ್ದೇಶಕಿ ದಾಕ್ಷಾಯಿಣಿ ಎಸ್.ದಳವಾಯಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ.ಪಿ.ಕೃಷ್ಣ, ರೈತ ಸಂಘದ ರಾಜ್ಯಾಧ್ಯಕ್ಷ ನಾರಾಯಣ ರೆಡ್ಡಿ, ಕಬ್ಬು ಬೆಳೆಗಾರರ ಸಂಘದ ಅಧ್ಯಕ್ಷ ಪಿ.ಸಿ.ರಾವ್, ಐಟಿ ಕಂಪೆನಿಗಳ ಸಂಘದ ಆನಂದ್ ರಾವ್, ಶಿಕ್ಷಣ ತಜ್ಞ ಪ್ರೊ.ನಿರಂಜನ ಆರಾಧ್ಯ, ಕನ್ನಡ ಚಳವಳಿ ಕೇಂದ್ರ ಸಮಿತಿ ಅಧ್ಯಕ್ಷ ಗುರುದೇವ್ ನಾರಾಯಣ ಕುಮಾರ್ ಹಾಗೂ ಬಿ.ಎನ್.ಯೋಗಾನಂದ ಉಪಸ್ಥಿತರಿದ್ದರು.

ಸಂಜೆವಾಣಿ

ಶನಿವಾರ 23 ಮಾರ್ಚ್ 2024



ಕರ್ನಾಟಕ ನೆಲ-ಜಲ ಸಂರಕ್ಷಣಾ ಸಮಿತಿ ಹಾಗೂ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಂಯುಕ್ತಾಶ್ರಯದಲ್ಲಿ ಗಾಂಧಿ ಭವನದಲ್ಲಿ ಏರ್ಪಡಿಸಿದ್ದ ಚಿಂತನ ಮಂಥನ ಕಾರ್ಯಕ್ರಮದಲ್ಲಿ ಕುರುಬೂರು ಶಾಂತಕುಮಾರ್. ಡಾ. ಎ. ರಾಮಪ್ರಸಾದ್ ಮನೋಹರ್. ಪ್ರೊ. ಪಿ. ಕೃಷ್ಣ, ಡಾ. ಟಿ.ಎ. ರಾಮಚಂದ್ರರಾವ್. ಡಾ. ಮುಖ್ಯಮಂತ್ರಿ ಚಂದ್ರು, ದಾಕ್ಷಾಯಿಣಿ ಎಸ್. ದಳವಾಯಿ, ಮತ್ತಿತರರು ಉಪಸ್ಥಿತರಿದ್ದರು.

ಮೈಸೂರು ಮಿತ್ರ ಗುರುವಾರ 21 ಮಾರ್ಚ್ 2024

# ಶೇಷಾದ್ರಿಪುರಂ ಕಾಲೇಜಲ್ಲಿ ಅಭಿನಂದನಾ ಕಾರ್ಯಕ್ರಮ



ಶೇಷಾದ್ರಿಪುರಂ ಪದವಿ ಕಾಲೇಜು 2021–22ನೇ ಸಾಲಿನ B++ ಶ್ರೇಣಿ ಪಡೆದಿದ್ದು, ಇದರ ಅಂಗವಾಗಿ ಕಾಲೇಜಿನ ಸಭಾಂಗಣದಲ್ಲಿ ಅಭಿನಂದನಾ ಕಾರ್ಯಕ್ರಮ ನಡೆಯಿತು.

ಮೈಸೂರು, ಮಾ. 20– ಮೈಸೂರಿನ ಹೆಬ್ಬಾಳು ವರ್ತುಲ ರಸ್ತೆಯಲ್ಲಿರುವ ಶೇಷಾದ್ರಿಪುರಂ ಪದವಿ ಕಾಲೇಜಿಗೆ 2021–22ನೇ ಸಾಲಿನ ಶೈಕ್ಷಣಿಕ ವರ್ಷದಲ್ಲಿ ನ್ಯಾಕ್ ಸಮಿತಿಯು ಭೇಟಿ ನೀಡಿದ್ದು, ಕಾಲೇಜಿಗೆ B++ ಶ್ರೇಣಿಯನ್ನು ನೀಡಿದೆ. ಇದರ ಪ್ರಯುಕ್ತವಾಗಿ ಕಾಲೇಜಿನ ಸಭಾಂಗಣದಲ್ಲಿ ಅಭಿನಂದನಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು.

ಕಾರ್ಯಕ್ರಮವನ್ನು ಮೈಸೂರು ವಿಶ್ವವಿದ್ಯಾನಿಲಯದ ವಿಶ್ರಾಂತ ಕುಲಪತಿ ಪ್ರೊ.ಕೆ.ಎಸ್.ರಂಗಪ್ಪ ದೀಪವನ್ನು ಬೆಳಗಿಸುವುದರ ಮೂಲಕ ಉದ್ಘಾಟಿಸಿದರು.

ಬಳಿಕ ಮಾತನಾಡಿದ ಅವರು, ಮೊದಲ ಪ್ರಯತ್ನದಲ್ಲೇ ನ್ಯಾಕ್‌ನಿಂದ B++ ಶ್ರೇಣಿಯನ್ನು ಪಡೆದಿರುವುದಕ್ಕೆ ಅಭಿನಂದನೆ

ಕ್ಷೇತ್ರದಲ್ಲಿ ಸಂಶೋಧನಾ ಸಂಸ್ಥೆಗಳನ್ನು ಸ್ಥಾಪಿಸಲು ಪ್ರತಿಪಾದಿಸಿದರು ಹಾಗೂ ಅಂತರರಾಷ್ಟ್ರೀಯ ಮಟ್ಟದಲ್ಲಿ ಸ್ಥಾನಮಾನವನ್ನು ಗಳಿಸುವ ನಿಟ್ಟಿನಲ್ಲಿ ಸಂಸ್ಥೆಗಳು ಕಾರ್ಯಗತಗೊಳ್ಳಬೇಕು. ಇಂತಹ ನಿಟ್ಟಿನಲ್ಲಿ ಮುಂದೆ ಇಂತಹ ಸ್ಥಾನಮಾನವನ್ನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಗಳು ಪಡೆದುಕೊಳ್ಳಬೇಕು ಎಂದು ಆಶಯ ವ್ಯಕ್ತಪಡಿಸಿದರು.

ಅಧ್ಯಕ್ಷತೆಯನ್ನು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ.ಕೃಷ್ಣ ಅವರು ವಹಿಸಿದ್ದು, ಪ್ರೊ.ರಂಗಪ್ಪ ಅವರ ಸಾಧನೆಗಳ ಬಗ್ಗೆ ತಿಳಿಸುತ್ತಾ ಅವರ ಅಧಿಕಾರ ಅವಧಿಯಲ್ಲಿ ಮೈಸೂರಿನ ಮಾನಸಗಂಗೋತ್ರಿಯಲ್ಲಿ ಸಬರಮತಿ ಆಶ್ರಮದ ರೀತಿಯಲ್ಲಿಯೇ ಮಾದರಿ ಸಬರಿಮತಿ ಆಶ್ರಮವನ್ನು,

ಪುರಂ ಶಿಕ್ಷಣ ಸಂಸ್ಥೆಗಳು ನಿರ್ವಹಿಸುತ್ತಿರುವ ಉನ್ನತ ಮಟ್ಟದ ಕೆಲಸ ಕಾರ್ಯಗಳನ್ನು ತಿಳಿಸಿಕೊಟ್ಟರು.

ಇದೇ ವೇಳೆ ಕಾಲೇಜಿನ ಪ್ರಾಂಶುಪಾಲರಾದ ಡಾ. ಕೆ.ಸೌಮ್ಯ ಈರಪ್ಪ, IQAC ಸಂಯೋಜಕರಾದ ಪ್ರೊ. ಮೃದುಲ ಸೋಜನ ಹಾಗೂ ಆಡಳಿತ ಮಂಡಳಿ ಸದಸ್ಯ ಡಬ್ಲ್ಯೂ.ಡಿ.ಅಶೋಕ್ ಅವರನ್ನು ಅಭಿನಂದಿಸಲಾಯಿತು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಉಪಾಧ್ಯಕ್ಷ ಟಿ.ಎಸ್.ಹಂಚಾರಪ್ಪ, ಡಬ್ಲ್ಯೂಎಚ್ ಅನಿಲ್‌ಕುಮಾರ್, ಆಡಳಿತ ಮಂಡಳಿ ಅಧ್ಯಕ್ಷ ಬಿ.ಎ.ಅನಂತ್ ರಾಮ್ ಹಾಗೂ ಆಡಳಿತ ಮಂಡಳಿ ಸದಸ್ಯ ಡಬ್ಲ್ಯೂ.ಡಿ ಅಶೋಕ್ ಮತ್ತು ಶಿಕ್ಷಣ ಸಂಸ್ಥೆಯ ಅಂಗಸಂಸ್ಥೆಗಳಿಂದ

ಮೈಸೂರು ಮಿತ್ರ ಗುರುವಾರ 21 ಮಾರ್ಚ್ 2024

# ಯುವಜನತೆ ಮಹಾತ್ಮ ಗಾಂಧಿ ವಿಚಾರಧಾರೆ ಅಳವಡಿಸಿಕೊಳ್ಳಬೇಕು

ಚಾಮರಾಜನಗರ, ಮಾ.20–ಯುವಜನತೆ ಮಹಾತ್ಮ ಗಾಂಧಿ ವಿಚಾರಧಾರೆಗಳನ್ನು ಜೀವನದಲ್ಲಿ ಅಳವಡಿಸಿಕೊಳ್ಳಬೇಕು ಎಂದು ಚಿಂತಕ ಪ್ರೊ.ಜಿ.ಎಸ್.ಜಯದೇವ್ ತಿಳಿಸಿದರು.

ನಗರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಕಾಲೇಜು ಶಿಕ್ಷಣ ಇಲಾಖೆ, ಗಾಂಧಿ ಅಧ್ಯಯನ ಕೇಂದ್ರದ ಎನ್‌ಎಸ್‌ಎಸ್, ಐಕ್ಯೂಎಸಿ ಮತ್ತು ಸಾಂಸ್ಕೃತಿಕ ವೇದಿಕೆ, ಬೆಂಗಳೂರಿನ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಆಯೋಜಿಸಿದ್ದ ಗಾಂಧಿ ಅಧ್ಯಯನ ಕೇಂದ್ರ ಉದ್ಘಾಟನೆ ಹಾಗೂ ಗಾಂಧೀಜಿ ಮತ್ತು ಯುವಜನತೆ ಕುರಿತ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, ಮಹಾತ್ಮ ಗಾಂಧಿಯನ್ನು ಮರೆತು ಬೇರೆ ದಿಕ್ಕಿಗೆ ಹೋಗಲು ಸಾಧ್ಯವಿಲ್ಲ. ವಾಸ್ತವಕ್ಕೆ ದೂರವಾದ ಆಸೆಗಳು ಹಾಗೂ ಐಷಾರಾಮಿ ಬದುಕನ್ನು ವಿರೋಧಿಸಿದ ಗಾಂಧೀಜಿ ಸರಳ ಜೀವನದ ಸಂದೇಶ ಸಾರಿದ್ದಾರೆ ಎಂದು ಸ್ಮರಿಸಿದರು.

ಗಾಂಧಿಯನ್ನು ವಿರೋಧಿಸುವಂತೆ ಅವರನ್ನು ಇಷ್ಟಪಡುವವರು ಇದ್ದಾರೆ. ಗಾಂಧಿತನದ ಬಗ್ಗೆ ಕಳಕಳಿ ಇರುವ ಕಡೆ ಗಾಂಧಿ ಇದ್ದಾರೆ. ಅಹಿಂಸೆ ಬೇಕಾದರೆ ಐಷಾರಾಮಿ ಬದುಕಿನ ಅಗತ್ಯವಿಲ್ಲ. ಕೈಗಾರಿಕೆಗಳಲ್ಲಿ ಶೋಷಣೆ ಹಾಸುಹೊಕ್ಕಾಗಿದೆ. ಸಾಮಾಜೀಕರಣ ಮಾಡಿದರೂ ಕೈಗಾರೀಕರಣದ ಬೇಡಿಕೆ ಅಂತರ್ಗತವಾಗಿದೆ. ಕೈಗಾರಿಕೆಗಳಲ್ಲಿ ಮಾಲಿನ್ಯ, ಶೋಷಣೆ, ಸಂಪನ್ಮೂಲ ನಾಶ, ಭ್ರಷ್ಟಾಚಾರ ಇದೆ. ಸಾಂಸ್ಕೃತಿಕ ಗುಲಾಮಗಿರಿಯನ್ನು ಪೋಷಿಸಿಕೊಂಡು ಬಂದ ಪರಿಣಾಮ ಅಂತರಂಗದ ಸ್ವರಾಜ್ಯ ಕಳೆದುಕೊಂಡಿದ್ದೇವೆ ಎಂದರು.



ಚಾಮರಾಜನಗರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ ಆಯೋಜಿಸಿದ್ದ ಗಾಂಧೀಜಿ ಮತ್ತು ಯುವಜನತೆ ಕುರಿತ ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಗಾಂಧೀಜಿ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಲಾಯಿತು.

ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ, ಗಾಂಧಿಜೀಯವರ ಒಳ್ಳೆಯ ಚಿಂತನೆಗಳನ್ನು ವಿದ್ಯಾರ್ಥಿಗಳು ಅಳವಡಿಸಿಕೊಳ್ಳಬೇಕು. ಗಾಂಧೀಜಿಯವರು ಯಾರನ್ನು ದ್ವೇಷಿಸಲಿಲ್ಲ, ಶ್ರೀಮಂತಿಕೆಯನ್ನು ಬಯಸಲಿಲ್ಲ. ಅದರು ನಮ್ಮ ದೇಶಕ್ಕಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟವರು. ಕಾಲೇಜು ವಿದ್ಯಾರ್ಥಿಗಳು ಗಾಂಧೀಜಿಯವರ ವಿಚಾರ ಧಾರೆಗಳನ್ನು ತಿಳಿದುಕೊಳ್ಳಬೇಕು ಎಂದು ಹೇಳಿದರು.

ಇದೇ ಸಂದರ್ಭದಲ್ಲಿ ಗಾಂಧಿ ಅಧ್ಯಯನ ಕೇಂದ್ರಕ್ಕೆ ಮಹಾತ್ಮ ಗಾಂಧೀಜಿ ಅವರ ಜೀವನಾಧಾರಿತ ಪುಸ್ತಕಗಳನ್ನು ನೀಡಲಾಯಿತು. ಇಂದೋರ್‌ನ ಕಸ್ತೂರ ಬಾ ಟ್ರಸ್ಟಿ ಪ್ರೊ.ಜಿ.ಬಿ.ಶಿವರಾಜು, ಕಾಲೇಜಿನ ಪ್ರಾಂಶುಪಾಲೆ ಪ್ರೊ.ಎಸ್.ಚಂದ್ರಮ್ಮ, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕ ಎ.ಎಂ.ಶಿವಸ್ವಾಮಿ ಇತರರಿದ್ದರು.

ಆಂದೋಲನ 20/3/2024

# 'ವಿದ್ಯಾವಂತ ಯುವಜನರು ಗಾಂಧಿ ಮನಸ್ಕರಾಗಬೇಕು'

## ಗಾಂಧಿ ಅಧ್ಯಯನ ಕೇಂದ್ರ ಉದ್ಘಾಟನೆ ಕಾರ್ಯಕ್ರಮದಲ್ಲಿ ಡಾ.ವೂಡೇ ಪಿ.ಕೃಷ್ಣ ಅಭಿಪ್ರಾಯ

ಚಾಮರಾಜನಗರ: ವಿದ್ಯಾವಂತ ಯುವಜನರು ಗಾಂಧೀಜಿ ಅನುಯಾಯಿ ಹಾಗೂ ಗಾಂಧಿವಾದಿ ಆಗಬೇಕಿಲ್ಲ. ಅವರ ಅಂಧಾನುಕರಣೆಯೂ ಬೇಡ. ಬದಲಾಗಿ ಗಾಂಧಿ ವಿಚಾರಧಾರೆಗಳನ್ನು ಓದಿ ಅರ್ಥೈಸಿಕೊಂಡು ಗಾಂಧಿ ಮನಸ್ಕರಾದರೆ ಸಾಕು ಎಂದು ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಅವರು ಅಭಿಪ್ರಾಯಪಟ್ಟರು.

ನಗರದ ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ಸಭಾಂಗಣದಲ್ಲಿ ಕಾಲೇಜು ಶಿಕ್ಷಣ ಇಲಾಖೆ, ಗಾಂಧಿ ಅಧ್ಯಯನ ಕೇಂದ್ರ, ರಾಷ್ಟ್ರೀಯ ಸೇವಾ ಯೋಜನೆ, ಐಕ್ಯೂಎಸಿ ಮತ್ತು ಸಾಂಸ್ಕೃತಿಕ ವೇದಿಕೆ ಹಾಗೂ ಬೆಂಗಳೂರಿನಲ್ಲಿರುವ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಸಹಯೋಗದಲ್ಲಿ ಮಂಗಳವಾರ ಏರ್ಪಡಿಸಿದ್ದ ಗಾಂಧಿ ಅಧ್ಯಯನ ಕೇಂದ್ರ ಉದ್ಘಾಟನೆ ಹಾಗೂ ಗಾಂಧೀಜಿ ಮತ್ತು ಯುವ ಜನತೆ ಕುರಿತ ವಿಶೇಷ ಉಪನ್ಯಾಸ ಕಾರ್ಯಕ್ರಮವನ್ನು ಉದ್ಘಾಟಿಸಿ ಮಾತನಾಡಿದರು.

ಗಾಂಧೀಜಿ ಶ್ರೀಸಾಮಾನ್ಯರಲ್ಲಿ ನಂಬಿಕೆ ಇಟ್ಟವರು. ದೇಶಕ್ಕಾಗಿ ಜೈಲು ವಾಸ ಅನುಭವಿಸಿದ್ದಾರೆ. 142 ದಿನಗಳ ಕಾಲ ಉಪವಾಸ ಮಾಡಿದ್ದಾರೆ. ಗಾಂಧೀಜಿ ಹೇಗೆ ಸತ್ತರು ಎಂಬುದು ಮುಖ್ಯವಲ್ಲ. ಅವರು ಹೇಗೆ ಬದುಕಿದ್ದರು ಎಂಬುದನ್ನು ಅರಿತುಕೊಳ್ಳಬೇಕು ಎಂದು ಕಿವಿಮಾತು ಹೇಳಿದರು.




ಅಮೆರಿಕಾದ ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ಅವರು ಭಾರತಕ್ಕೆ ಭೇಟಿ ನೀಡಿದಾಗ ಗಾಂಧೀಜಿ ಭಾರತಕ್ಕಷ್ಟೆ ಅಲ್ಲ ವಿಶ್ವಕ್ಕೇ ನಾಯಕರು ಎಂದು ಹೇಳಿದ್ದರು ಎಂದ ಅವರು, ಗಾಂಧಿ ಅವರನ್ನು ಓದಿದರೆ ಭಾರತವನ್ನೇ ಅಧ್ಯಯನ ಮಾಡಿದಂತೆ ವಿಶ್ವದನಾಯಕರಿಗೆಗಾಂಧಿಸ್ಫೂರ್ತಿಯ ಚಿಲುಮೆ ಆಗಿದ್ದಾರೆ ಎಂದು ತಿಳಿಸಿದರು.

ಗಾಂಧೀಜಿ ವಿದೇಶದಲ್ಲಿ ಕಾನೂನು ಪದವಿ ಪಡೆದು ಬ್ಯಾರಿಸ್ಟರ್ ಆಗಿದ್ದಾಗಲೂ ಅಂತರಂಗದಲ್ಲಿ ಭಾರತೀಯರಾಗಿದ್ದರು. ಬದುಕಿನುದ್ದಕ್ಕೂ ಯಾವುದಕ್ಕೂ ಭೇದಭಾವ ಮಾಡಲಿಲ್ಲ. ತಮಗಾಗಿ ಏನನ್ನೂ ಬಯಸಿಲಿಲ್ಲ ಎಂದು ತಿಳಿಸಿದರು.

ದೀನಬಂಧು ಸಂಸ್ಥೆಯ ಸಂಸ್ಥಾಪಕ, ಚಿಂತಕರಾದ ಪ್ರೊ.ಜಿ.ಎಸ್. ಜಯದೇವ ಗಾಂಧೀಜಿ ಮತ್ತು ಯುವ ಜನತೆ ವಿಚಾರವಾಗಿ ಉಪನ್ಯಾಸ ನೀಡಿದರು.



ಮನುಷ್ಯ ಬದುಕಲು ಆಹಾರ, ಬಟ್ಟೆ, ವಸತಿ ಅಗತ್ಯ. ಜೊತೆಗೆ ಒಳ್ಳೆಯ ಚಿಂತನೆಗಳು ಬದುಕಲು ಪ್ರಮುಖವಾದವು. ಚಿಂತನಾ ನಾಯಕತ್ವ ಸೃಷ್ಟಿಸಲು ಅಧ್ಯಯನ ಕೇಂದ್ರಗಳ ಅಗತ್ಯವಿದೆ. ಚೀನಾ ದೇಶದಲ್ಲಿ ಶಿಶು ವಿಹಾರದಿಂದ ಹಿಡಿದು ಉನ್ನತ ಶಿಕ್ಷಣದ ತನಕ ಗಾಂಧೀಜಿ ವಿಚಾರಗಳನ್ನು ಪಠ್ಯದಲ್ಲಿ ಅಳವಡಿಸಲಾಗಿದೆ. ಆದರೆ, ನಮ್ಮ ದೇಶದಲ್ಲಿ ಅಂತಹ ಅವಕಾಶ ಲಭ್ಯವಾಗಿಲ್ಲ.

-ಡಾ.ವೂಡೇ ಪಿ.ಕೃಷ್ಣ

ಇದೇ ಸಂದರ್ಭದಲ್ಲಿ ಗಾಂಧಿ ಅಧ್ಯಯನ ಕೇಂದ್ರಕ್ಕೆ ಗಾಂಧೀಜಿ ಅವರ ಜೀವನಾಧಾರಿತ ಪುಸ್ತಕಗಳನ್ನು ವಿತರಿಸಲಾಯಿತು.

ನಿವೃತ್ತ ಐಜಿಪಿ ಅರ್ಕೇಶ್, ಇಂದೋರ್‌ನ ಕಸ್ತೂರ ಬಾ ಆಶ್ರಮದ ಟ್ರಸ್ಟಿ ಪ್ರೊ.ಜಿ.ಬಿ. ಶಿವರಾಜು ಮಾತನಾಡಿದರು. ಎನ್‌ಎಸ್‌ಎಸ್ ಕಾರ್ಯಕ್ರಮಾಧಿಕಾರಿ ಡಾ.ಜಿ.ಮಲ್ಲೇಶ್, ಐಕ್ಯೂಎಸಿಯ ಸಂಚಾಲಕ ಡಾ.ಚಿನ್ಮಯ್ ಭಟ್, ಉಪನ್ಯಾಸಕಿ ದೊಡ್ಡಮ್ಮ, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕ ಎ.ಎಂ.ಶಿವಸ್ವಾಮಿ ಮುಂತಾದವರು ಹಾಜರಿದ್ದರು.

ಕನ್ನಡಪ್ರಭ

Apr 29, 2024

28/3/2024

# ಜೀವನ ಶೈಲಿಯಲ್ಲಿ ಪರಾವಲಂಬಿಯ ಅತೀರೇಕದಲ್ಲಿದ್ದೇವೆ: ಪ್ರೊ.ಜಯದೇವ

## ಸರ್ಕಾರಿ ಕಾಲೇಜಿನಲ್ಲಿ ಗಾಂಧೀಜಿ ಮತ್ತು ಯುವಜನತೆ ಕುರಿತು ವಿಶೇಷ ಉಪನ್ಯಾಸ ಕಾರ್ಯಕ್ರಮ

• ಕನ್ನಡಪ್ರಭ ವಾರ್ತೆ ಚಾಮರಾಜನಗರ

ಆಧುನಿಕ ಜೀವನ ಶೈಲಿಯಲ್ಲಿ ಒಂದು ಪರಾವಲಂಬಿಯ ಅತೀರೇಕಕ್ಕೆ ಹೋಗಿದ್ದೇವೆ ಎಂದು ದೀನಬಂಧು ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಪ್ರೊ. ಜಿ.ಎಸ್. ಜಯದೇವ ಹೇಳಿದರು.

ನಗರದ ಸರ್ಕಾರ ಪ್ರಥಮ ದರ್ಜೆ ಕಾಲೇಜಿನಲ್ಲಿ ಗಾಂಧಿ ಅಧ್ಯಯನ ಕೇಂದ್ರ ಉದ್ಘಾಟನೆ ಹಾಗೂ ಗಾಂಧೀಜಿ ಮತ್ತು ಯುವಜನತೆ ಕುರಿತು ವಿಶೇಷ ಉಪನ್ಯಾಸ ಕಾರ್ಯಕ್ರಮದಲ್ಲಿ ಮಾತನಾಡಿದರು.

ವಿದೇಶಿ ಕೈಗಾರಿಕಾ ಉತ್ಪನ್ನಗಳನ್ನು ಹೆಚ್ಚಾಗಿ ಅವಲಂಭಿಸಿದಾಗ ಅನೈತಿಕ ಬೆಳವಣಿಗೆಗಳಾಗಿ ಅಭಿವೃದ್ಧಿ ಎನ್ನುವುದು ಮಾರಕವಾಗುವುದೇ ಹೊರತು ಮನುಷ್ಯನಿಗೆ ಸಂತೋಷವನ್ನು ಹೆಚ್ಚಿಸುವುದಿಲ್ಲ ಎಂದರು.

ಮನುಷ್ಯ ಐಷಾರಾಮಿಯಾಗಿ ಬದುಕಿದರೆ ಹಿಂಸೆ ಎನ್ನುವುದು ಅನಿವಾರ್ಯ. ಐಷಾರಾಮಿ ಬದುಕಿನಲ್ಲಿ ಬದುಕುವಂತ ಆಶೆಯ ಕಾರಣದಿಂದ ಹಿಂಸೆ ಎನ್ನುವುದು ನಿಮ್ಮ ನಡುವೆ ಬಂದೇ ಬರುತ್ತದೆ. ಹಿಂಸೆ ಎನ್ನುವುದಕ್ಕೂ ಐಶರಾಮಿ ಜೀವನಕ್ಕೂ ಸಂಬಂಧವಿದೆ. ಅಹಿಂಸೆ ಬೇಕಾದರೆ ನಗರ ಜೀವನಕ್ಕೆ ಆಶೆ ಪಡಬೇಡಿ ನಗರ ಜೀವನದಿಂದ ಹಿಂಸೆ ಕಂಡಿತವಾಗಲೂ ವಿಜೃಂಭಿಸುತ್ತದೆ ಎಂದರು.

ಕೈಗಾರಿಕೆಗಳಲ್ಲಿ ಶೋಷಣೆ ಎನ್ನುವುದು ಹಾಸುಹೋಕ್ಕಾಗಿದೆ. ಕೈಗಾರಿಕೀಕರಣವನ್ನು ಎಷ್ಟೇ ಸಾಮಾಜೀಕರಣ ಮಾಡಿದರೂ ಅದರಲ್ಲಿ ಕೆಡುಕು ಎನ್ನುವುದು ಅಂತರ್ಗತವಾಗಿರುತ್ತದೆ. ಆದರಿಂದ ತಪ್ಪಿಸಿಕೊಳ್ಳಲು ಆಗುವುದಿಲ್ಲ ಎಂದರು.

ಮೊಬೈಲ್ ಬಳಕೆಯಿಂದ ಹತ್ತಿರವಿದ್ದು ದೂರ ನಿಲ್ಲುತ್ತೇವೆ. ಮನುಷ್ಯ ಸಂಬಂಧಗಳು ಅಳಿಸಿಹೋಗಿದೆ. ಐಶರಾಮಿ ಬದುಕು ಬಾಹ್ಯ ಶ್ರೀಮಂತಕ್ಕೆ ಹೆಚ್ಚಾದಂತೆ ಅಂತರಂಗದಲ್ಲಿ ಬಡವರಾಗುತ್ತಿದ್ದೇವೆ. ಮನುಷ್ಯನ ಬದುಕಿಗೆ ಅಂತರಂಗದ ಶ್ರೀಮಂತಿಕೆ ಮುಖ್ಯ ಎಂದರು.

ಆಧುನಿಕ ಜೀವನದಲ್ಲಿ ಮನುಷ್ಯನಿಗಿಂತ ಮನುಷ್ಯ ತಯಾರಿಸಿದ ವಸ್ತುಗಳಿಗೆ ಹೆಚ್ಚು ಪ್ರಾಮುಖ್ಯತೆ ದೊರೆಯುತ್ತಿದೆ. ಇದರಿಂದ ಮನುಷ್ಯ ತನ್ನ ಅಂತಸತ್ವವನ್ನು ಕಳೆದುಕೊಳ್ಳುತ್ತಾ ಹೋಗುತ್ತಾನೆ. ಅಂತರಂಗದ ಶಕ್ತಿಯನ್ನು ಕಳೆದುಕೊಳ್ಳುತ್ತಾ ಹೋಗುತ್ತಾನೆ. ಸಹಜವಾಗಿ ಬದುಕುವ ಶಕ್ತಿ ಇದ್ದರೂ ಕೂಡ ಕಂಪನಿಯ ವಸ್ತುವಿಗೆ ಮಾರುಹೋಗಿದ್ದೇವೆ. ನಮ್ಮ ತನವನ್ನು ಕಳೆದುಕೊಳ್ಳುತ್ತಿದ್ದೇವೆ ಎಂದರು.



ಉಪನ್ಯಾಸ ಕಾರ್ಯಕ್ರಮದಲ್ಲಿ ಗಣ್ಯರು ಗಾಂಧೀಜಿ ಭಾವಚಿತ್ರಕ್ಕೆ ಪುಷ್ಪಾರ್ಚನೆ ಸಲ್ಲಿಸಿದರು.

ದೇಶಕ್ಕೆ ಒಂದು ಆತ್ಮ ಇದೆ ಐಶರಾಮಿ ಜೀವನದ ಹಿಂದೆ ಹೋಗಿ ದೇಶದ ಆತ್ಮದ ಸಂಪರ್ಕವನ್ನು ಕಳೆದುಕೊಳ್ಳುವ ಮೂಲಕ ಪ್ರಕೃತಿಯಿಂದ ದೂರ ಹೋಗುತ್ತಿದ್ದೇವೆ ಯಾವಾಗ ಪ್ರಕೃತಿಯಿಂದ ದೂರವಾಗಿ ಬದುಕಲು ಪ್ರಾರಂಭಿಸುತ್ತೇವೆ ಆಗ ದೇಶದ ಆತ್ಮಕ್ಕೂ ನಿಮಗೂ ಸಂಬಂಧವಿಲ್ಲದಂತೆ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗುತ್ತದೆ ಎಂದರು.

ಕಾಲೇಜು ಮಕ್ಕಳು ದಯವಿಟ್ಟು ತಿಳಿದುಕೊಳ್ಳಬೇಕು ನಿಮ್ಮ ಭವಿಷ್ಯ ಕೈಗಾರಿಕರಣದಲ್ಲಿಲ್ಲ, ಅಮೆರಿಕಾ ಇಂಗ್ಲೆಂಡಿನಲ್ಲಿಲ್ಲ, ಅಮೆರಿಕಾದಲ್ಲಿ ಮಾನಸಿಕ ವಿಕಲತೆಯ ಸ್ಥಿತಿ ಬಂದಿದೆ. ಎಲ್ಲಾ ದೇಶದಲ್ಲೂ ಬರುತ್ತಿದೆ. ನಮ್ಮಲ್ಲಿ ಮಾನಸಿಕ ವಿಕಲತೆ ಇನ್ನೂ ಬಂದಿಲ್ಲ ಏಕೆಂದರೆ ನಮ್ಮಲ್ಲಿ ಸಾವಿರಾರು ಬಗೆಯ ಸಂಸ್ಕೃತಿ, ಉಪಸಂಸ್ಕೃತಿಗಳಿವೆ ನಾವು ಪರಸ್ಪರ ಸಹಿಷ್ಣುತೆ ಉಳಿದಿದ್ದು, ಅದೊಂದು ದೇಶದ ಶಕ್ತಿ ಎಂದರು.

ಈ ವೇಳೆ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ಪಿ. ಕೃಷ್ಣ ಉದ್ಘಾಟಿಸಿದರು. ಕಸ್ತೂರಬಾ ಆಶ್ರಮ ಟ್ರಸ್ಟಿ ಪ್ರೊ.ಜಿ.ಬಿ.ಶಿವರಾಜು, ಗಾಂಧಿ ಅಧ್ಯಯನ ಕೇಂದ್ರದ ಸಂಚಾಲಕ ಎ.ಎಂ. ಶಿವಸ್ವಾಮಿ, ಉಪನ್ಯಾಸಕ ಜಿ.ಮಲ್ಲೇಶ್, ಡಾ.ಪಿ.ಎಂ ನಾಗೇಂದ್ರ ಕುಮಾರ್, ದೊಡ್ಡಮ್ಮ ಇದ್ದರು.

ಗಾಂಧಿವಾದ ಎನ್ನುವುದು ಭಾರತದ ನೆಲದಲ್ಲೇ ಗೆಲ್ಲಲಿಲ್ಲ ಎಂದು ಜಪಾನಿ ತಜ್ಞ ಹೇಳಿದ್ದಾರೆ. ನಮ್ಮ ಜನಗಳು ಆ ಯೋಗ್ಯತೆಯನ್ನು ಬೆಳೆಸಿಕೊಂಡಿಲ್ಲ, ಗಾಂಧಿ ವಾದಕ್ಕೆ ತಕ್ಕನಾಗುವಷ್ಟು ಅದನ್ನು ಒಳಗೊಳ್ಳುವಷ್ಟು ಅದರ ವಾರಸುದಾರರಾಗುವಷ್ಟು ಯೋಗ್ಯತೆಯನ್ನು ನಾವು ಬೆಳೆಸಿಕೊಂಡಿಲ್ಲ. ಗಾಂಧಿ ವಾದ ಗೆಲ್ಲಲಿಲ್ಲ ಎನ್ನುವುದು ನಾನ್‌ಸೆನ್ಸ್ ನಮಗೆ ಗಾಂಧಿವಾದ ಪಾಲಿಸುವಷ್ಟು ಪ್ರಭುದ್ಧತೆ ಬಂದಿಲ್ಲ, ನಮ್ಮ ಮನಸ್ಸು ಬೆಳೆದಿಲ್ಲ.

• ಪ್ರೊ. ಜಿ.ಎಸ್. ಜಯದೇವ
ಚಿಂತಕ ಹಾಗೂ ದೀನಬಂಧು ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ

ಸಂಜೆವಾಣಿ

ಸೋಮವಾರ 18 ಮಾರ್ಚ್ 2024



ವಿಶ್ವಮಾನವ ರಾಷ್ಟ್ರಕವಿ ಕುವೆಂಪು ಕಲಾನಿಕೇತನ ವತಿಯಿಂದ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ ನಟ. ಹಿರಿಯ ರಂಗಕರ್ಮಿ ಶರತ್ ಲೋಹಿತಾಶ್ವರವರಿಗೆ ರಂಗಗೌರವ. ಕುವೆಂಪು ವಿಶ್ವಮಾನ ಪ್ರಶಸ್ತಿಯನ್ನು ನಾಡೋಜ ವೂಡೆ ಪಿ. ಕೃಷ್ಣರವರ ಪ್ರದಾನ ಮಾಡಿ ಗೌರವಿಸಿದ್ದರು. ನಾಡೋಜ ಡಾ. ಕಿಕ್ಕೇರಿಕೃಷ್ಣಮೂರ್ತಿ. ಪ.ಚ. ಚನ್ನೇಗೌಡ. ಡಾ. ಸಂತೋಷ ಹಾನಗಲ್. ನಟಿ ಅಭಿನಯ. ಬಿ.ಹೆಚ್. ಸುರೇಶ್. ಸಂಸ್ಥೆ ಅಧ್ಯಕ್ಷ ಕುವೆಂಪು ಪ್ರಕಾಶ್ ಮತ್ತಿತರರು ಇದ್ದಾರೆ.

## ಯಶೋಧರಮ್ಮ ದಾಸಪ್ಪನವರ ಸೇವಾಕಾರ್ಯಗಳ ಮುಂದುವರಿಕೆಗೆ ಚಾಲನೆ

# ಮಹರ್ನವಮಿದೊಡ್ಡಿಯಲ್ಲಿ ಯುವಜನ ಪ್ರೇರಣಾ ಶಿಬಿರ

● ಹೇಮಂತ್‌ಕುಮಾರ್

ಮಂಡ್ಯ: ಕಸ್ತೂರಬಾ ಹಾಗೂ ಮಹಾತ್ಮ ಗಾಂಧೀಜಿಯವರ ಅನುಯಾಯಿಗಳಾಗಿ ನಿಸ್ವಾರ್ಥ ಬದುಕಿನ ಮೂಲಕ ಗಾಂಧಿ ಮಾರ್ಗದಲ್ಲಿ ಆದರ್ಶವಾಗಿ ಬಾಳಿದ 'ಕರ್ನಾಟಕದ ಕಸ್ತೂರ ಬಾ' ಎಂದೇ ಖ್ಯಾತರಾದ ಪದ್ಮಭೂಷಣ ಯಶೋಧರಮ್ಮ ದಾಸಪ್ಪ ಅವರು ಮಂಡ್ಯ ಜಿಲ್ಲೆಯ ಜನತೆಗೆ ನೀಡಿರುವ ಕೊಡುಗೆಯನ್ನು ಇಂದಿನ ಯುವಪೀಳಿಗೆಗೆ ತಲುಪಿಸುವ ನಿಟ್ಟಿನಲ್ಲಿ ಮಹರ್ನವಮಿ ದೊಡ್ಡಿಯಲ್ಲಿ ನಡೆದ ಗಾಂಧಿ ತತ್ವ ಪ್ರೇರಿತ ಯುವಜನ ಪ್ರೇರಣಾ ಶಿಬಿರ ಅರ್ಥಪೂರ್ಣ ಹೆಜ್ಜೆ ಇರಿಸಿದೆ.



ಮದ್ದೂರು ತಾಲ್ಲೂಕಿನ ಬೆಸಗರಹಳ್ಳಿ ಗ್ರಾಪಂ ವ್ಯಾಪ್ತಿಯ ಮಹರ್ನವಮಿದೊಡ್ಡಿ ಗ್ರಾಮದಲ್ಲಿ ಗಾಂಧಿ ಸ್ಮಾರಕ ನಿಧಿ 75ನೇ ವರ್ಷಾಚರಣೆಯ ಸವಿನೆನಪಿಗಾಗಿ ಯಶೋಧರಮ್ಮ ದಾಸಪ್ಪ ಸಂಸ್ಮರಣೆ ಹಾಗೂ 'ವ್ಯಸನ ಮುಕ್ತ ಸಮಾಜಕ್ಕಾಗಿ ಯುವ ಜನತೆ' ಎಂಬ ಧ್ಯೇಯದೊಂದಿಗೆ ಗಾಂಧಿ ತತ್ವ ಪ್ರೇರಿತ ಯುವಜನ ಪ್ರೇರಣಾ ಶಿಬಿರಕ್ಕೆ ಗಣ್ಯರು ಚಾಲನೆ ನೀಡಿದ್ದು, ಈ ಶಿಬಿರ ಮಾ.18ರವರೆಗೆ ನಡೆಯಲಿದೆ.

1948-49ರಲ್ಲಿ ಮಹರ್ನವಮಿ ದೊಡ್ಡಿಯಲ್ಲಿ ಮೂರು ಎಕರೆ, ಹರಳಹಳ್ಳಿಯಲ್ಲಿ 7 ಎಕರೆ, ಮರಳಿಗ ಗ್ರಾಮದಲ್ಲಿ 10 ಎಕರೆ, ಕೀಳಘಟ್ಟ ಗ್ರಾಮದಲ್ಲಿ 5 ಎಕರೆ, ಬೂದನೂರು ಗ್ರಾಮದಲ್ಲಿ 8 ಎಕರೆ, ಜಿ.ಕೆಬ್ಬಳ್ಳಿಯಲ್ಲಿ 5 ಎಕರೆ ಜಮೀನನ್ನು ಯಶೋಧರಮ್ಮ ದಾಸಪ್ಪ ಅವರು ಖರೀದಿಸಿ, ಮತ್ತೆ ಉಚಿತವಾಗಿ ರೈತರಿಗೆ ನೀಡಿ, ಅಲ್ಲಿ ಬೆಳೆಯನ್ನು ಬೆಳೆದು ಕಸ್ತೂರಬಾ ಗಾಂಧಿ ಆಶ್ರಮದಲ್ಲಿ ಕಲಿಯುವ ಹಾಗೂ ಸರ್ಕಾರಿ ಶಾಲೆಯಲ್ಲಿ ಕಲಿಯುವ ಹೆಣ್ಣು ಮಕ್ಕಳಿಗೆ ಉಚಿತ ಆಹಾರವನ್ನು ಪೂರೈಸಲು ವ್ಯವಸ್ಥೆ ಮಾಡಿದ್ದರು. ಜೊತೆಗೆ ಮಹರ್ನವಮಿ ದೊಡ್ಡಿ ಗ್ರಾಮದಲ್ಲಿ ಅಶ್ವತ್ಥಮ್ಮ ಅವರು ದಾನವಾಗಿ ನೀಡಿದ 5 ಗುಂಟೆ ಜಾಗದಲ್ಲಿ 1953ರಲ್ಲಿ ಕಸ್ತೂರಬಾ ಗಾಂಧಿ ಆಶ್ರಮವನ್ನು ನಿರ್ಮಿಸಿ ಬಾಲವಾಡಿ ಶಿಕ್ಷಣ ಹಾಗೂ ಮಹಿಳೆಯರಿಗೆ ಉಚಿತ ಹೊಲಿಗೆ ತರಬೇತಿ ಕೊಡಿಸಲು ಕೇಂದ್ರ ಪ್ರಾರಂಭಿಸಿದರು. ನಂತರದ ದಿನಗಳಲ್ಲಿ ಪೋಷಣೆ ಇಲ್ಲದೆ ಆಶ್ರಮ ಶಿಥಿಲಾವಸ್ಥೆಗೆ ತಲುಪಿತ್ತು. 2023ರಲ್ಲಿ ಗ್ರಾಮಕ್ಕೆ ಭೇಟಿ ನೀಡಿದ ಅಪರ ಜಿಲ್ಲಾಧಿಕಾರಿ ಡಾ.ಎಚ್. ಎಲ್.ನಾಗರಾಜು, ರೈತ ನಾಯಕಿ ಸುನಂದಾ ಜಯರಾಂ, ಗಾಂಧಿವಾದಿ ನಿವೃತ್ತ ಪ್ರಾಧ್ಯಾಪಕರಾದ ಪ್ರೊ.ಜಿ.ಬಿ.ಶಿವರಾಜ್ ಅವರು ಹಳೆಯ ಕಟ್ಟಡವನ್ನು ಕೆಡವಿ ನೂತನ ಆಶ್ರಮದ ಕಟ್ಟಡ ನಿರ್ಮಿಸಿ, ಮತ್ತೊಮ್ಮೆ ಆ ಜಾಗಕ್ಕೆ ಚೈತನ್ಯ ತುಂಬಿ ಯಶೋಧರಮ್ಮ ದಾಸಪ್ಪ ಅವರ ಸೇವಾಕಾರ್ಯಗಳನ್ನು ಮುಂದುವರಿಸುವಂತಾಗಬೇಕೆಂಬ ಉದ್ದೇಶದಿಂದ ಈ ಪ್ರೇರಣ ಶಿಬಿರ ಆಯೋಜಿಸಲಾಗಿದೆ.



ಮಹರ್ನವಮಿದೊಡ್ಡಿಯಲ್ಲಿ ಶಿಥಿಲಾವಸ್ಥೆಯಲ್ಲಿದ್ದ ಕಸ್ತೂರಬಾ ಗಾಂಧಿ ಆಶ್ರಮವನ್ನು ಪುನರ್ ನಿರ್ಮಾಣಗೊಳಿಸಲು ಅಪರ ಜಿಲ್ಲಾಧಿಕಾರಿ ಡಾ.ಎಚ್.ಎಲ್.ನಾಗರಾಜು ಹಾಗೂ ಗಣ್ಯರು ಚಾಲನೆ ನೀಡಿದರು.

ಕರ್ನಾಟಕ ಗಾಂಧಿ ಸ್ಮಾರಕ ಟ್ರಸ್ಟ್ ಅಧ್ಯಕ್ಷ, ನಾಡೋಜ ಡಾ.ವೂಡೇಪಿ.ಕೃಷ್ಣ ಅವರು ಯಶೋಧರಮ್ಮ ದಾಸಪ್ಪನವರ ಸಾಮಾಜಿಕ ಕಾಳಜಿಯ ಕುರಿತು ಮಾತನಾಡಿ, ಮಹಿಳಾ ದಿನಾಚರಣೆಯಲ್ಲಿ ಕನ್ನಡಿಗರು ನೆನೆಯಲೇಬೇಕಾದ ವಿಶೇಷ ಮಹಿಳೆ ಯಶೋಧರಮ್ಮ ಅವರು. ಆದರೆ, ಈ ದೇಶದ ದುರಂತವೆಂದರೆ ರಾಜಕೀಯ ಹೊರತಾಗಿ ಯಾರ್‍ಯಾರು ರಚನಾತ್ಮಕ ಕೆಲಸಗಳಲ್ಲಿ ತೊಡಗಿದ್ದಾರೋ ಅವರ ಸೇವೆಯನ್ನು ನಮ್ಮ ನಾಡು ಗಮನಿಸಲಿಲ್ಲ ಎಂದು ವಿಷಾದ ವ್ಯಕ್ತಪಡಿಸಿದರು.



> ಈ ಕಾಲ ಅಧಿಕಾರವನ್ನು, ಶ್ರೀಮಂತಿಕೆಯನ್ನು ಪೂಜಿಸುತ್ತಿದ್ದ ಕಾಲ. ಎಲ್ಲವನ್ನೂ ತ್ಯಜಿಸಿ ಸಮಾಜಕ್ಕೆ ತಮ್ಮನ್ನು ಅರ್ಪಣೆ ಮಾಡಿಕೊಂಡ ಇಂಥ ಮಹನೀಯರನ್ನು ಗುರುತಿಸಿ ಗೌರವಿಸುವ ಕೆಲಸ ತುಂಬಾ ಕಡಿಮೆ. ಇಂತಹ ಸನ್ನಿವೇಶದಲ್ಲಿ, ಅದೂ ಮಹಿಳಾ ದಿನಾಚರಣೆಯ ಸಂದರ್ಭದಲ್ಲಿ ಈ ಪ್ರೇರಣಾ ಶಿಬಿರ ಮಹತ್ವ ಪಡೆದಿದೆ.
>
> - ನಾಡೋಜ ಡಾ.ವೂಡೇ ಪಿ.ಕೃಷ್ಣ

ಆಯ್ದ ಕಾಲೇಜುಗಳ 180 ವಿದ್ಯಾರ್ಥಿಗಳು ಪಾಲ್ಗೊಂಡಿದ್ದ ಈ ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ರಾಜ್ಯ ಎನ್‌ಎಸ್‌ಎಸ್ ಕೋಶ ಸಂಯೋಜನಾಧಿಕಾರಿ ಡಾ.ಪ್ರತಾಪ್ ಲಿಂಗಯ್ಯ, ಯಶೋಧರಮ್ಮ ಅವರ ಸೊಸೆ ಸರೋಜಮ್ಮ ತುಳಸಿದಾಸ್, ರಾಜ್ಯ ಮದ್ಯಪಾನ ಸಂಯಮ ಮಂಡಳಿ ಕಾರ್ಯದರ್ಶಿ ಎನ್.ಎಸ್.ಮಹೇಶ್, ಕಸ್ತೂರಬಾ ಗಾಂಧಿ ಆಶ್ರಮದ ಪೋಷಕರು, ರೈತನಾಯಕಿ ಸುನಂದಾ ಜಯರಾಂ, ಗ್ರಾಪಂ ಸದಸ್ಯರಾದ ಎಂ.ಆರ್.ಬಾಬು, ಅನಿತಾ ವೆಂಕಟೇಶ್, ಇಂದೋರ್ ಕಸ್ತೂರಬಾ ಗಾಂಧಿ ಆಶ್ರಮದ ಕಾರ್ಯದರ್ಶಿ ಎನ್.ಆರ್.ವಿಶುಕುಮಾರ್, ಮದ್ದೂರು ಮಹಿಳಾ ಸರ್ಕಾರಿ ಕಾಲೇಜಿನ ಪ್ರಾಂಶುಪಾಲರಾದ ಪ್ರೊ.ಕೆ.ಬಿ.ನಾರಾಯಣ, ಕಾರ್ಯಕ್ರಮ ಅಧಿಕಾರಿ ಡಾ.ಎಂ.ಕೆಂಪಮ್ಮ, ಡಾ.ನಮ್ರತಾ ಪಾಲ್ಗೊಂಡಿದ್ದರು.

ಪ್ರಜಾವಾಣಿ
ಶುಕ್ರವಾರ ○ ಮಾರ್ಚ್ 15, 2024

# ‘ಕನ್ನಡ ಕಾದಂಬರಿಗಳಲ್ಲಿ ವಾಸ್ತವದ ನೆಲೆಗಟ್ಟು’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಆಂಗ್ಲ ಸಾಹಿತ್ಯದ ಪ್ರಭಾವದಿಂದಾಗಿ ಕನ್ನಡದ ಕಾದಂಬರಿಗಳಲ್ಲಿ ಪುರಾಣದ ಪರಿಕಲ್ಪನೆಗಳಿಗಿಂತ ವಾಸ್ತವ ಸತ್ಯದ ನೆಲೆ ಅಡಕವಾಗಿರುತ್ತದೆ’ ಎಂದು ವಿಮರ್ಶಕ ಎಸ್.ಆರ್. ವಿಜಯಶಂಕರ್ ತಿಳಿಸಿದರು.

ದ್ವಾರನಕುಂಟೆ ಪಾತಣ್ಣ ಪ್ರತಿಷ್ಠಾನ ನಗರದಲ್ಲಿ ಗುರುವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಆರ್.ಸುನಂದಮ್ಮ ಅವರಿಗೆ ‘2023ನೇ ಸಾಲಿನ ಅತ್ಯುತ್ತಮ ಕಾದಂಬರಿ ಪ್ರಶಸ್ತಿ ಪ್ರದಾನ’ ಮಾಡಿ ಅವರು ಮಾತನಾಡಿದರು. ಪ್ರಶಸ್ತಿ ₹25ಸಾವಿರ ನಗದು ಒಳಗೊಂಡಿದೆ.

‘ಭಾರತ ಸ್ವಾತಂತ್ರ್ಯ ಪಡೆಯುವ ಸಮಯದಲ್ಲಿ ಕನ್ನಡಕ್ಕೆ ಕಾದಂಬರಿ ಪ್ರಕಾರ ಪ್ರವೇಶಿಸಿತ್ತು. ಕನ್ನಡದ ಮೇಲೆ ಆಂಗ್ಲ ಸಾಹಿತ್ಯದ ಪ್ರಭಾವ ಬೀರಿತ್ತು. ಹಾಗಾಗಿ ಪುರಾಣ ಪರಂಪರೆಗೆ ಭಿನ್ನವಾಗಿ ವಾಸ್ತವ ಮತ್ತು ಆದರ್ಶಗಳು ಕಾದಂಬರಿಯ ವಸ್ತುಗಳಾದವು’ ಎಂದು ವಿಶ್ಲೇಷಿಸಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಪ್ರಧಾನ ಕಾರ್ಯದರ್ಶಿ ವೂಡೇ ಪಿ. ಕೃಷ್ಣ ಮಾತನಾಡಿ, ‘ಬರವಣಿಗೆಯಲ್ಲಿ ಎಲ್ಲ ಪಾತ್ರಗಳಿಗೂ ನ್ಯಾಯ ಕೊಡುವುದು ಕಷ್ಟ. ಆದರೂ ಭರತನನ್ನು ಪ್ರಮುಖವಾಗಿಸಿದ ಆರ್. ಸುನಂದಮ್ಮ ಅವರ ‘ಭರತಕಲ್ಪ’ ಕಾದಂಬರಿ ವಿಶಿಷ್ಟವಾಗಿದೆ. ಇದರಲ್ಲಿ ಶ್ರಮ ಸಂಸ್ಕೃತಿಯ ಬಗ್ಗೆ ತಿಳಿಸಲಾಗಿದೆ’ ಎಂದು ಹೇಳಿದರು.



ನಗರದಲ್ಲಿ ದ್ವಾರನಕುಂಟೆ ಪಾತಣ್ಣ ಪ್ರತಿಷ್ಠಾನದಿಂದ ಆರ್. ಸುನಂದಮ್ಮ ಅವರಿಗೆ ‘2024ನೇ ಅತ್ಯುತ್ತಮ ಕಾದಂಬರಿ ಪ್ರಶಸ್ತಿ’ ನೀಡಿ ಗೌರವಿಸಲಾಯಿತು. ಲೇಖಕರಾದ ದ್ವಾರನಕುಂಟೆ ಪಾತಣ್ಣ, ಮೂಡ್ನಾಕೂಡು ಚಿನ್ನಸ್ವಾಮಿ, ಲತಾಗುತ್ತಿ, ಕಾ.ತ. ಚಿಕ್ಕಣ್ಣ, ಎಸ್‌ಆರ್‌ ವಿಜಯಶಂಕರ್, ಮಾಜಿ ಸಚಿವ ಎಚ್‌.ಎಂ.ರೇವಣ್ಣ, ಪ್ರತಿಷ್ಠಾನದ ಅಧ್ಯಕ್ಷ ಬಿ.ಎಂ.ಹನೀಫ್, ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಪ್ರಧಾನ ಕಾರ್ಯದರ್ಶಿ, ವೂಡೇ ಪಿ. ಕೃಷ್ಣ ಪಾಲ್ಗೊಂಡಿದ್ದರು — ಪ್ರಜಾವಾಣಿ ಚಿತ್ರ

ಸಾಹಿತಿ ಕಾ.ತ.ಚಿಕ್ಕಣ್ಣ ಮಾತನಾಡಿ, ಸೃಜನಶೀಲ ಕೃತಿಯು ಕೇವಲ ವ್ಯಕ್ತಿ ಕೇಂದ್ರಿತ ಅಲ್ಲ. ಅದರಲ್ಲಿ ಸಮಾಜ, ಕುಟುಂಬ, ರಾಜಕೀಯ ವರ್ತಮಾನ ಎಲ್ಲವೂ ಸೇರಿರುತ್ತದೆ. ಆರ್.ಸುನಂದಮ್ಮ ಅವರ ‘ಭರತಕಲ್ಪ’ ಕಾದಂಬರಿ ವರ್ತಮಾನದ ಓದಿಗೆ ಮುಖಾಮುಖಿಯಾಗಿದೆ’ ಎಂದು ತಿಳಿಸಿದರು.

ಕವಿ ಮೂಡ್ನಾಕೂಡು ಚಿನ್ನಸ್ವಾಮಿ ಪ್ರಾಸ್ತಾವಿಕವಾಗಿ ಮಾತನಾಡಿ, ‘48 ಕಾದಂಬರಿ ಬಂದಿದ್ದವು. ಅದರಲ್ಲಿ ಸಮಿತಿಯು ಪರಿಶೀಲಿಸಿ 12 ಕೃತಿಗಳನ್ನು ನೀಡಿತ್ತು. ಆ 12ರಲ್ಲಿ ಆರ್. ಸುನಂದಮ್ಮ ಅವರ ‘ಭರತಕಲ್ಪ’ ಕಾದಂಬರಿಗೆ ಪ್ರಶಸ್ತಿಗೆ ಆಯ್ಕೆಯಾಯಿತು’ ಎಂದು ವಿವರಿಸಿದರು.

ಕಾದಂಬರಿಕಾರ ದ್ವಾರನಕುಂಟೆ ಪಾತಣ್ಣ, ಪ್ರತಿಷ್ಠಾನದ ಅಧ್ಯಕ್ಷ ಬಿ.ಎಂ. ಹನೀಫ್, ಕಾದಂಬರಿಕಾರ್ತಿ ಲತಾಗುತ್ತಿ, ಮಾಜಿ ಸಚಿವ ಎಚ್.ಎಂ.ರೇವಣ್ಣ ಭಾಗವಹಿಸಿದ್ದರು.

# 32 ಮಂದಿ ಗಣ್ಯರಿಗೆ ಸುವರ್ಣ ಸಾಧಕ ಪ್ರಶಸ್ತಿ

## ಕನ್ನಡಪ್ರಭ-ಏಷ್ಯಾನೆಟ್ ಸುವರ್ಣನ್ಯೂಸ್ ವತಿಯಿಂದ ಆರೋಗ್ಯ, ಶಿಕ್ಷಣ ಸೇರಿ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ ಗಣ್ಯರಿಗೆ ಪ್ರಶಸ್ತಿ ಪ್ರದಾನ

## ಜನಸಾಮಾನ್ಯರ ನಡುವೆಯೇ ಇದ್ದು ಅಸಾಮಾನ್ಯ ಸಾಧನೆ ಮಾಡಿದವರಿಗೆ ಸಚಿವ ಎಂಬಿಪಾ, ನಿರ್ದೇಶಕ ಪಿ.ಶೇಷಾದ್ರಿ, ನಟಿ ಚೈತ್ರಾರಿಂದ ಗೌರವ

ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ 32 ಮಂದಿ ಗಣ್ಯರಿಗೆ ಬೆಂಗಳೂರಿನಲ್ಲಿ ನಡೆದ ವರ್ಣರಂಜಿತ ಕಾರ್ಯಕ್ರಮದಲ್ಲಿ ಕನ್ನಡಪ್ರಭ-ಸುವರ್ಣ ನ್ಯೂಸ್ ವತಿಯಿಂದ ಪ್ರತಿಷ್ಠಿತ ಸುವರ್ಣ ಸಾಧಕರು ಪ್ರಶಸ್ತಿಯನ್ನು ಪ್ರದಾನ ಮಾಡಿ ಗೌರವಿಸಲಾಯಿತು.
ಕಾರ್ಯಕ್ರಮದಲ್ಲಿ ಕೈಗಾರಿಕಾ ಸಚಿವ ಎಂ.ಬಿ.ಪಾಟೀಲ್, ರಾಷ್ಟ್ರಪ್ರಶಸ್ತಿ ಪುರಸ್ಕೃತ ಖ್ಯಾತ ನಿರ್ದೇಶಕ ಪಿ.ಶೇಷಾದ್ರಿ, ನಟಿ ಚೈತ್ರಾ ಆಚಾರ್, 'ಕನ್ನಡಪ್ರಭ-ಏಷ್ಯಾನೆಟ್ ಸುವರ್ಣ ನ್ಯೂಸ್' ಪ್ರಧಾನ ಸಂಪಾದಕ ರವಿ ಹೆಗಡೆ, ಸುವರ್ಣ ನ್ಯೂಸ್ ಸಂಪಾದಕ ಅಜಿತ್ ಹನುಮಕ್ಕನವರ್ ಅವರು ಪ್ರಶಸ್ತಿ ಪ್ರದಾನ ಮಾಡಿದರು.

• ಕನ್ನಡಪ್ರಭ ವಾರ್ತೆ ಬೆಂಗಳೂರು

ದಣಿವಿಲ್ಲದ ದುಡಿಮೆಯಲ್ಲಿ ತೊಡಗಿ ವಿಶಿಷ್ಟ ಸಾಧನೆಗೈದು, ಅದೇ ವೇಳೆ ಸಮಾಜ ಸೇವೆಯಲ್ಲಿದ್ದು ಆಶಾ ಕಿರಣಗಳಾಗಿ ಕಂಗೊಳಿಸುವ, ಇತರರಿಗೆ ಪ್ರೇರಣೆ ಎನಿಸುವ ವಿವಿಧ ಕ್ಷೇತ್ರಗಳ 32 ಸಾಧಕರನ್ನು ಗುರುತಿಸಿದ 'ಕನ್ನಡಪ್ರಭ-ಏಷ್ಯಾನೆಟ್ ಸುವರ್ಣ ನ್ಯೂಸ್' ಅವರಿಗೆ ಪ್ರತಿಷ್ಠಿತ 'ಸುವರ್ಣ ಸಾಧಕರು' ಪ್ರಶಸ್ತಿ ನೀಡಿ ಗೌರವಿಸಿದೆ.

ನಗರದ ಶಾಂಗ್ರಿಲಾ ಹೋಟೆಲ್‌ನಲ್ಲಿ ನಡೆದ 'ಸುವರ್ಣ ಸಾಧಕರು'-2ನೇ ಆವೃತ್ತಿಯ ವರ್ಣರಂಜಿತ ಕಾರ್ಯಕ್ರಮದಲ್ಲಿ ಕೈಗಾರಿಕಾ ಸಚಿವ ಎಂ.ಬಿ.ಪಾಟೀಲ್, ರಾಷ್ಟ್ರಪ್ರಶಸ್ತಿ ಪುರಸ್ಕೃತ ಖ್ಯಾತ ನಿರ್ದೇಶಕ ಪಿ.ಶೇಷಾದ್ರಿ, ನಟಿ ಚೈತ್ರಾ ಆಚಾರ್, 'ಕನ್ನಡಪ್ರಭ-ಏಷ್ಯಾನೆಟ್ ಸುವರ್ಣ ನ್ಯೂಸ್' ಪ್ರಧಾನ ಸಂಪಾದಕ ರವಿ ಹೆಗಡೆ, ಸುವರ್ಣ ನ್ಯೂಸ್ ಸಂಪಾದಕ ಅಜಿತ್ ಹನುಮಕ್ಕನವರ್ ಅವರು ಪ್ರಶಸ್ತಿ ಪ್ರದಾನ ಮಾಡಿದರು.

ಶಿಕ್ಷಣ, ಆರೋಗ್ಯ, ಕೃಷಿ, ಕೈಗಾರಿಕೋದ್ಯಮ, ಸಮಾಜಸೇವೆ, ಹಾಸ್ಪಿಟಾಲಿಟಿ, ಮಹಿಳಾ ಉದ್ಯಮ, ರಿಯಲ್ ಎಸ್ಟೇಟ್ ಕ್ಷೇತ್ರಗಳಲ್ಲಿ ಸಾಧನೆಗೈದವರು ಪುರಸ್ಕೃತರಾದರು. ರಾಜ್ಯದಲ್ಲೇ ಮೊದಲ ಎನಿಸಿರುವ ನೂರು ಬೆಡ್‌ಗಳ ಐವಿಎಫ್, ಫರ್ಟಿಲಿಟಿ ಮತ್ತು ಮಹಿಳಾ ವೆಲ್‌ನೆಸ್ ದಿವ್ಯಾಯು ಹಾಸ್ಪಿಟಲ್ ತೆರೆದಿರುವ ಡಾ. ಜ್ಯೋತಿ ಬಂಡಿ, ಮೀಡಿಯಾ ಹೌಸ್ ಮತ್ತು ಪ್ಲೇ ಹೌಸ್ ಸ್ಥಾಪಕಿ, ಕ್ರಿಯೇಟರ್ ಆಗಿ ಯಶಸ್ವಿ ಮಹಿಳಾ ಉದ್ಯಮಿ ಎನ್ನಿಸಿಕೊಂಡ ದಿವ್ಯಾ ರಂಗೇನಹಳ್ಳಿ, ಬೆಂಗಳೂರಿನ ಖ್ಯಾತ ಶಿಕ್ಷಣ ಸಂಸ್ಥೆ ಶೇಷಾದ್ರಿಪುರಂ ಕಾಲೇಜಿನ ಡಾ.ವುಡೆ ಪಿ.ಕೃಷ್ಣ, ಪಾರದರ್ಶಕತೆ ಮೂಲಕ ವ್ಯಕ್ತಿ ಆರಂಭಿಸಿ ರಿಯಲ್ ಎಸ್ಟೇಟ್, ಸಾಮಾಜಿಕ ಸೇವೆಯಲ್ಲಿ ತೊಡಗಿರುವ ಅನಂತಮೂರ್ತಿ ಎಂ. ಹೆಗಡೆ, ಅತಿಥಿ ಸತ್ಕಾರದಲ್ಲಿ ಹೆಸರಾದ

### ಬೆಂಗಳೂರಿನಲ್ಲಿ ನಡೆದ ವರ್ಣರಂಜಿತ ಕಾರ್ಯಕ್ರಮದಲ್ಲಿ ಗೌರವ

ಸಕಲೇಶಪುರ ಕಾಡುಮನೆ ಟೀ ರೆಸಾರ್ಟ್‌ನ ರಾಘವೇಂದ್ರ ಪ್ರಸಾದ್, ಮೈಸೂರಿನ [illegible] ಸ್ಥಾಪಕ ಉದ್ಯಮಿ ಮಹದೇವಸ್ವಾಮಿ ಎನ್., ಆಧ್ಯಾತ್ಮಿಕ ಮತ್ತು ಸಮಾಜ ಸೇವೆಯಲ್ಲಿ ನಿರತರಾದ ಚನ್ನಬಸವಣ್ಣ ಕೆ. ಮತ್ತಿತರರು ಸೇರಿ ಒಟ್ಟಾರೆ 32 ಸಾಧಕರಿಗೆ ಪ್ರಶಸ್ತಿ ಫಲಕ ನೀಡಿ ಸನ್ಮಾನಿಸಲಾಯಿತು.

ಪ್ರಶಸ್ತಿ ಪ್ರದಾನ ಮಾಡಿದ ಸಚಿವ ಎಂ.ಬಿ.ಪಾಟೀಲ್ ಮಾತನಾಡಿ, ಸ್ಪರ್ಧಾತ್ಮಕ ಯುಗದಲ್ಲಿರುವ ನಾವು ನಮ್ಮ ಕ್ಷೇತ್ರದಲ್ಲಿ ಸಾಧನೆ ಮಾಡಬೇಕಾದರೆ ಸ್ವಅನುಭವವನ್ನು ಸದುಪಯೋಗಪಡಿಸಿಕೊಳ್ಳುವ ಗುಣವನ್ನು ಮೊದಲು ಅಳವಡಿಸಿಕೊಳ್ಳಬೇಕು. ಮಾಧ್ಯಮ ಸೇರಿ ಎಲ್ಲ ಕ್ಷೇತ್ರದಲ್ಲಿ ಕೃತಕ ಬುದ್ಧಿಮತ್ತೆಯಂತಹ ತಂತ್ರಜ್ಞಾನ ಬರುತ್ತಿರುವ ಪ್ರತಿ ಬದಲಾವಣೆಯನ್ನೂ ಅಳವಡಿಸಿಕೊಂಡರೆ ಮಾತ್ರ ಯಶಸ್ಸಿನತ್ತ ಹೆಜ್ಜೆಯಿಡಲು ಸಾಧ್ಯ ಎಂದು ಸೂಚ್ಯವಾಗಿ ಹೇಳಿದರು.

ನಿರ್ದೇಶಕ ಪಿ.ಶೇಷಾದ್ರಿ, ಕನ್ನಡದಲ್ಲಿ ಕತೆಗಳಿಲ್ಲ ಎಂದು ಹಲವರು ಹೇಳುತ್ತಾರೆ. ಆದರೆ, ಕನ್ನಡಪ್ರಭ ಕೊಡಮಾಡಿದ ಪ್ರಶಸ್ತಿ ಪ್ರತಿಯೊಬ್ಬ ಪುರಸ್ಕೃತರ ಜೀವನಗಾಥೆಯೂ ಯಶಸ್ವಿ ಚಿತ್ರವಾಗುವಂತಿದೆ. ಈ ಸಾಧಕರು ನಡೆದುಬಂದ ಬಗ್ಗೆ ಕೃತಿ ಹೊರತಂದಲ್ಲಿ ಹಲವರಿಗೆ ಪ್ರೇರಣೆಯಾಗಲಿದೆ ಎಂದು ಹೇಳಿದರು.

ಪ್ರಾಸ್ತಾವಿಕ ಮಾತನಾಡಿದ 'ಕನ್ನಡಪ್ರಭ-ಏಷ್ಯಾನೆಟ್ ಸುವರ್ಣ ನ್ಯೂಸ್' ಪ್ರಧಾನ ಸಂಪಾದಕ ರವಿ ಹೆಗಡೆ, ಕೇವಲ ಸಮಸ್ಯೆ ಬಗ್ಗೆಯೇ ಹೇಳುತ್ತ ಹೋದರೆ ಜನರಿಗೆ ನಾವು ಬರೀ ನಕಾರಾತ್ಮಕ ವಾತಾವರಣದಲ್ಲಿದ್ದೇವೆ ಎಂಬ ಭಾವನೆ ಮೂಡುತ್ತದೆ. ಬದಲಾಗಿ ಸಮಾಜದ ಸಾಧಕರನ್ನು ಗುರುತಿಸಿ ಪುರಸ್ಕರಿಸಿದರೆ ಅವರಿಗೆ ಇನ್ನಷ್ಟು ಪ್ರೋತ್ಸಾಹ, ಇತರರಿಗೆ ಪ್ರೇರಣೆ ನೀಡಿದಂತಾಗುತ್ತದೆ. ಈ ನಿಟ್ಟಿನಲ್ಲಿ 'ಕನ್ನಡಪ್ರಭ-ಏಷ್ಯಾನೆಟ್ ಸುವರ್ಣ ನ್ಯೂಸ್' ಸುವರ್ಣ ಸಾಧಕರು ಪ್ರಶಸ್ತಿ ನೀಡಿ ಗೌರವಿಸುತ್ತಿದೆ ಎಂದು ತಿಳಿಸಿದರು.

ನಟಿ ಚೈತ್ರಾ ಆಚಾರ್ ಮಾತನಾಡಿದರು. ಕಾರ್ಯಕ್ರಮದಲ್ಲಿ ನಂದಿನಿ ನಾಗರಾಜ್ ಕ್ರಿಸ್ ಮೋರ್ಸ್ ತಂಡ ಆಕರ್ಷಕ ಫ್ಯಾಷನ್ ಷೋ, ಪಾಂಡವಪುರ ಅಮ್ಮ ಡ್ಯಾನ್ಸ್ ಕಂಪನಿಯವರು ನೃತ್ಯ ಪ್ರದರ್ಶನ ನೀಡಿ ಗಮನಸೆಳೆದರು.

ಕನ್ನಡಪ್ರಭ ಪುರವಣಿ ಸಂಪಾದಕ ಗಿರೀಶ್‌ರಾವ್ ಹತ್ವಾರ್ ( ಜೋಗಿ ) ಅವರು ವಂದನಾರ್ಪಣೆ ಮಾಡಿದರು. ಸುವರ್ಣ ನ್ಯೂಸ್‌ನ ಭಾವನಾ ನಾಗಯ್ಯ ನಿರೂಪಿಸಿದರು.

ಇಂದುಸಂಜೆ
INDU SANJE, Kannada evening daily
Bangalore, Mysore, Mandya, Hassan, Kolar, Chikkaballapur, Chamarajnagara, Ramanagara, Hubballi Published simultaneously
is 26_02_2024-5
26 Feb 2024




ಕೆಂಗೇರಿಯ ಜೇನು ಗೂಡು ಕಲಾ ಬಳಗದ ವತಿಯಿಂದ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ "ಸಾಧಕರಿಗೆ ಪ್ರಶಸ್ತಿ ಪ್ರದಾನ ಮತ್ತು ಸಾಂಸ್ಕೃತಿಕ " ಕಾರ್ಯಕ್ರಮವನ್ನು ಗಾಂಧಿ ಭವನದ ಅಧ್ಯಕ್ಷರಾದ ನಾಡೋಜ ಡಾ.ವೂಡೇ ಪಿ. ಕೃಷ್ಣ ಅವರು ಉದ್ಘಾಟಿಸಿದರು. ಚಿತ್ರದಲ್ಲಿ : ಸುಮಂಗಲಿ ಸೇವಾಶ್ರಮದ ಅಧ್ಯಕ್ಷರಾದ ಡಾ.ಎಸ್.ಜಿ.ಸುಶೀಲಮ್ಮ, ಹಿರಿಯ ಪತ್ರಕರ್ತ ರು.ಬಸಪ್ಪ, ಸಂಸ್ಥೆಯ ಅಧ್ಯಕ್ಷರಾದ ವಿ.ರೇಣುಕಾ ಪ್ರಸನ್ನ , ಸಾಹಿತಿ ಡಾ.ಸಿಸಿರಾ ಮುಂತಾದವರಿದ್ದಾರೆ.

# ಭಾಷೆಯನ್ನು ಸ್ವೀಕರಿಸಲು ಮಡಿವಂತಿಕೆ ಬೇಡ : ವಿಮರ್ಶಕ ಡಾ.ಎಸ್.ಆರ್. ವಿಜಯಶಂಕರ್

ಬೆಂಗಳೂರು : 9 ನೇ ಶತಮಾನದ ಕವಿರಾಜಮಾರ್ಗಕಾರನು ಚತ್ತಾಣ. ಬೆದಂಡೆ ಎಂಬ ಕಾವ್ಯ ಪ್ರಕಾರಗಳನ್ನು ತನ್ನ ಕಾವ್ಯದಲ್ಲಿ ಬಳಸಿದ್ದು, ಕನ್ನಡದ ತ್ರಿಪದಿ, ವಚನಗಳಲ್ಲಿ " ಲಿಮರಿಕ್ಸ್ " ರೂಪದ ಹಾಡುಗಬ್ಬದ ವೈಶಿಷ್ಟ್ಯದ ಕಾವ್ಯ ಪ್ರಯೋಗಗಳನ್ನು ಕಾಣಬಹುದಾಗಿದ್ದು ಯಾವುದೇ ಭಾಷೆಯನ್ನು ಸ್ವೀಕರಿಸಲು ಮಡಿವಂತಿಕೆ ಬೇಡ ಎಂದು ಖ್ಯಾತ ಅಂಕಣಕಾರ, ವಿಮರ್ಶಕ ಡಾ.ಎಸ್. ಆರ್.ವಿಜಯಶಂಕರ್ ಅಭಿಪ್ರಾಯಪಟ್ಟರು.



ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಏರ್ಪಡಿಸಿದ್ದ ಲೇಖಕ, ನಿರೂಪಕ ಬಿ.ಶೃಂಗೇಶ್ವರ ಅವರು ಇಂಗ್ಲೀಷಿನಲ್ಲಿ ಬಳಸುತ್ತಿದ್ದ ಲಿಮರಿಕ್ಸ್ ಕಾವ್ಯ ಪ್ರಕಾರವನ್ನು ಕನ್ನಡದಲ್ಲಿ ಪಂಚ ಸಾಲಿನಲ್ಲಿ ಬರೆದಿರುವ ವಿಶೇಷ, ವಿನೂತನ ಕಾವ್ಯ ಕನಡದ ಹೊಸ ಪ್ರಯೋಗ "ಅಭಿನವ ಲಿಮರಿಕ್ ' ಕೃತಿಯನ್ನು ಲೋಕಾರ್ಪಣೆ ಮಾಡಿ ಮಾತನಾಡುತ್ತಿದ್ದರು. ಚಿಕ್ಕದಾದ ಹಾಡು, ಮಾತುಗಳಲ್ಲಿ ದೊಡ್ಡದಾದದ್ದನ್ನು ತಿಳಿಸಿಕೊಡುವ ಪ್ರಯತ್ನವೇ ಈ ಲಿಮರಿಕ್ಸ್ ನ ವಿಶೇಷತೆ ಎಂದರು. 1800 ರ ಕಾಲಘಟ್ಟದಲ್ಲಿ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯ ಆರಂಭಗೊಂಡ ಕಾಲದಲ್ಲಿ ಅಂದರೆ 200 ವರ್ಷಗಳ ಇತಿಹಾಸವಿರುವ ಈ ಕಾವ್ಯದ ಬಳಕೆಗೊಂಡಿದೆ. ಆದರೆ ಸಂಸ್ಕೃತ, ಇಂಗ್ಲೀಷ್ ಯಾವುದೇ ಭಾಷೆಯನ್ನು ನಮ್ಮದಾಗಿಸಿಕೊಳ್ಳುವ ಸಂದರ್ಭ ಬಂದಾಗ ಅದನ್ನು ನಾವು ಸ್ವೀಕರಿಸುವ ಮೂಲಕ ನಮ್ಮ ಭಾಷೆಯಾಗಿಸಿಕೊಳ್ಳಬೇಕೆಂದು ದಿನಕರ ದೇಸಾಯಿ, ಡಿವಿಜಿ, ವೈಎನ್ಕೆ, ಡುಂಡಿರಾಜ್ ಅವರುಗಳು ಈಗಾಗಲೇ ಅಲ್ಲಲ್ಲಿ ಬಳಸಿರುವುದನ್ನು ಎಸ್.ಆರ್. ಜಯಶಂಕರ್ ಅವರು ತಿಳಿಸಿ . ಬಿ.ಶೃಂಗೇಶ್ವರ ಅವರು ಕನ್ನಡ ಕಾವ್ಯ,ಕತೆ,ನಾಟಕ ವಿವಿಧ ಲೇಖನಗಳನ್ನು ಬರೆದಿದ್ದಾರೆ. ಈ ಅಭಿನವ ಲಿಮರಿಕ್ಸ್ ಕೃತಿಯು ಕನ್ನಡದ ಮುಂಗಾಣ್ಕೆಯಾಗಿರುವುದು ಹೊಸ ಕಾವ್ಯ ಬರವಣಿಗೆಗೆ ಉತ್ತೇಜಿಸುವಂತೆ ಬರೆದಿರುವುದಕ್ಕೆ ಅಭಿನಂದಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶಿಕ್ಷಣ ತಜ್ಞ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೆ ಪಿ ಕೃಷ್ಣ ಅವರು ತಾಯಿ ಹೃದಯದಿಂದ ಕಾವ್ಯ ರಚನೆ ಮಾಡಿದ್ದು ಕವಿಯಾದವನು ಹಮ್ಮು ಬಿಮ್ಮು ಬಿಟ್ಟು ತನ್ನ ಬದುಕನ್ನು ಕಟ್ಟಿಕೊಳ್ಳುತ್ತಲೇ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವ ಅವಶ್ಯಕತೆ ಬಹಳ ಮುಖ್ಯ ಎಂದರು. ಕನ್ನಡ ಸಾಹಿತ್ಯ ವಿಸ್ತಾರವಾದುದು ಅದರಲ್ಲಿ ಈಜಿ ದಡ ಸೇರುವ ತವಕ ತಲ್ಲಣಗಳು ನಮ್ಮಲ್ಲಿ ಗಟ್ಟಿಯಾಗಿರಬೇಕು. ನಿರೂಪಣೆ, ಕಾರ್ಮಿಕ ಹೋರಾಟ ಹೀಗೆ ಅನೇಕ ಜನಪರ ಕ್ಷೇತ್ರದಲ್ಲಿ ದುಡಿದು ಅನುಭವವಿರುವ ಬಿ.ಶೃಂಗೇಶ್ವರ ಅವರ ಸಾರ್ಥಕತೆಯನ್ನು ಕೊಂಡಾಡಿದರು. ಬರವಣಿಗೆ ಹೊಚ್ಚ ಹೊಸತನದಿಂದ ಕೂಡಿರಬೇಕು ಆ ಬಗೆಯಲ್ಲಿ ಅಭಿನವ ಲಿಮರಿಕ್ಸ್ ಕವಿತಾ ಸಂಕಲನವು ನೂರಾ ಆರು ಬಿಡಿಬಿಡಿ ಕವಿತೆಗಳಾಗಿ ಹರಳುಗಟ್ಟಿವೆ ಎಂದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಖ್ಯಾತ ಕುಂಚ ಕಲಾವಿದೆ ಶ್ರೀಮತಿ ಶಾಂತಿ ವಾಸು ಅವರು ಶೃಂಗೇಶ್ವರ ಅವರು ಬರೆದಿರುವ ಅಭಿನವ ಲಿಮರಿಕ್ಸ್ ಕೃತಿಯು ಓದುಗರಲ್ಲಿ ಒಂದು ಸುಂದರ ಅನುಭವವನ್ನು ತಂದು-ಕೊಡುತ್ತದೆ. ತಿಳಿ ಹಾಸ್ಯವನ್ನು ಕವಿತೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಕೃತಿಯೊಳಗಿನ ನಾಲ್ಕಾರು ಕವಿತೆಗಳನ್ನು ಓದಿ ಅರ್ಥೈಸಿದರು. ಇದೇ ಸಂದರ್ಭದಲ್ಲಿ ಬಿ.ಶೃಂಗೇಶ್ವರ ಅವರನ್ನು ಬಿಬಿಜಿಎಸ್ ಟ್ರಸ್ಟಿನ ಪರವಾಗಿ ಸನ್ಮಾನಿಸಿ ಅಭಿನಂದಿಸಲಾಯಿತು. ಶೃಂಗೇಶ್ವರ ಅವರು ತಮ್ಮ ಕಾವ್ಯ,ಕತೆ ಸಾಹಿತ್ಯಕ್ಕೇ ಪ್ರೇರಣೆ ನೀಡಿದ ಸಂದರ್ಭ ಹಾಗೂ ಸನ್ನಿವೇಶಕ್ಕೆ ಕಾರಣರಾದವರನ್ನು ಸ್ಮರಿಸಿದರು. ಸಂಸ್ಥೆಯ ಅಧ್ಯಕ್ಷರಾದ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರು . ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ನ 25 ವರ್ಷದ ಸಾರ್ಥಕ ಕಾರ್ಯಗಳನ್ನು ಪ್ರಾಸ್ತಾವಿಕವಾಗಿ ತಿಳಿಸಿ ವೇದಿಕೆಯ ಗಣ್ಯರನ್ನು ಸ್ವಾಗತಿಸಿದರು. ಎಸ್. ಜೆ.ಆರ್. ಕಾಲೇಜಿನ ಕನ್ನಡ ಉಪನ್ಯಾಸಕರಾದ ಡಾ.ಕುಸುಮ ಸುಂದರವಾಗಿ ನಿರೂಪಿಸಿದ ಕಾರ್ಯಕ್ರಮದಲ್ಲಿ ಗಾಯಕರಾದ ಡಾ.ಅಂಬುಜಾಕ್ಷಿ ಬೀರೇಶ್ ಮತ್ತು ಭೀಮ್ ಜೀ ಅವರು ತಮ್ಮ ಗೀತಗಾಯನದ ಮೂಲಕ ಸೇರಿದ್ದ ಸಭಿಕರನ್ನು ರಂಜಿಸಿದರು.

# ಭಾಷೆಯನ್ನು ಸ್ವೀಕರಿಸಲು ಮಡಿವಂತಿಕೆ ಬೇಡ : ವಿಮರ್ಶಕ ಡಾ.ಎಸ್.ಆರ್. ವಿಜಯಶಂಕರ್ ಅಭಿಮತ



ಬೆಂಗಳೂರು : 9 ನೇ ಶತಮಾನದ ಕವಿರಾಜಮಾರ್ಗಕಾರನು ಚತ್ತಾಣ, ಬೆದಂಡೆ ಎಂಬ ಕಾವ್ಯ ಪ್ರಕಾರಗಳನ್ನು ತನ್ನ ಕಾವ್ಯದಲ್ಲಿ ಬಳಸಿದ್ದು, ಕನ್ನಡದ ತ್ರಿಪದಿ, ವಚನಗಳಲ್ಲಿ "ಲಿಮರಿಕ್ಸ್" ರೂಪದ ಹಾಡುಗಬ್ಬದ ವೈಶಿಷ್ಟ್ಯದ ಕಾವ್ಯ ಪ್ರಯೋಗಗಳನ್ನು ಕಾಣಬಹುದಾಗಿದ್ದು ಯಾವುದೇ ಭಾಷೆಯನ್ನು ಸ್ವೀಕರಿಸಲು ಮಡಿವಂತಿಕೆ ಬೇಡ ಎಂದು ಖ್ಯಾತ ಅಂಕಣಕಾರ, ವಿಮರ್ಶಕ ಡಾ.ಎಸ್.ಆರ್.ವಿಜಯಶಂಕರ್ ಅಭಿಪ್ರಾಯಪಟ್ಟರು.

ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಏರ್ಪಡಿಸಿದ್ದ ಲೇಖಕ, ನಿರೂಪಕ ಬಿ.ಶೃಂಗೇಶ್ವರ ಅವರು ಇಂಗ್ಲೀಷಿನಲ್ಲಿ ಬಳಸುತ್ತಿದ್ದ ಲಿಮರಿಕ್ಸ್ ಕಾವ್ಯ ಪ್ರಕಾರವನ್ನು ಕನ್ನಡದಲ್ಲಿ ಪಂಚ ಸಾಲಿನಲ್ಲಿ ಬರೆದಿರುವ ವಿಶೇಷ, ವಿನೂತನ ಕಾವ್ಯ ಕನಡದ ಹೊಸ ಪ್ರಯೋಗ "ಅಭಿನವ ಲಿಮರಿಕ್" ಕೃತಿಯನ್ನು ಲೋಕಾರ್ಪಣೆ ಮಾಡಿ ಮಾತನಾಡುತ್ತಿದ್ದರು. ಚಿಕ್ಕದಾದ ಹಾಡು, ಮಾತುಗಳಲ್ಲಿ ದೊಡ್ಡದಾದದ್ದನ್ನು ತಿಳಿಸಿಕೊಡುವ ಪ್ರಯತ್ನವೇ ಈ ಲಿಮರಿಕ್ಸ್ ನ ವಿಶೇಷತೆ ಎಂದರು. 1800 ರ ಕಾಲಘಟ್ಟದಲ್ಲಿ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯ ಆರಂಭಗೊಂಡ ಕಾಲದಲ್ಲಿ ಅಂದರೆ 200 ವರ್ಷಗಳ ಇತಿಹಾಸವಿರುವ ಈ ಕಾವ್ಯದ ಬಳಕೆಗೊಂಡಿದೆ. ಆದರೆ ಸಂಸ್ಕೃತ, ಇಂಗ್ಲೀಷ್ ಯಾವುದೇ ಭಾಷೆಯನ್ನು ನಮ್ಮದಾಗಿಸಿಕೊಳ್ಳುವ ಸಂದರ್ಭ ಬಂದಾಗ ಅದನ್ನು ನಾವು ಸ್ವೀಕರಿಸುವ ಮೂಲಕ ನಮ್ಮ ಭಾಷೆಯಾಗಿಸಿಕೊಳ್ಳಬೇಕೆಂದು ದಿನಕರ ದೇಸಾಯಿ, ಡಿವಿಜಿ, ವೈಎನ್ಕೆ, ಡುಂಡಿರಾಜ್ ಅವರುಗಳು ಈಗಾಗಲೇ ಅಲ್ಲಲ್ಲಿ ಬಳಸಿರುವುದನ್ನು ಎಸ್.ಆರ್. ಜಯಶಂಕರ್ ಅವರು ತಿಳಿಸಿ . ಬಿ.ಶೃಂಗೇಶ್ವರ ಅವರು ಕನ್ನಡ ಕಾವ್ಯ, ಕತೆ, ನಾಟಕ ವಿವಿಧ ಲೇಖನಗಳನ್ನು ಬರೆದಿದ್ದಾರೆ. ಈ ಅಭಿನವ ಲಿಮರಿಕ್ಸ್ ಕೃತಿಯು ಕನ್ನಡದ ಮುಂಗಾಣ್ಕೆಯಾಗಿರುವುದು ಹೊಸ ಕಾವ್ಯ ಬರವಣಿಗೆಗೆ ಉತ್ತೇಜಿಸುವಂತೆ ಬರೆದಿರುವುದಕ್ಕೆ ಅಭಿನಂದಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶಿಕ್ಷಣ ತಜ್ಞ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೆ ಪಿ ಕೃಷ್ಣ ಅವರು ತಾಯಿ ಹೃದಯದಿಂದ ಕಾವ್ಯ ರಚನೆ ಮಾಡಿದ್ದು ಕವಿಯಾದವನು ಹಮ್ಮು ಬಿಮ್ಮು ಬಿಟ್ಟು ತನ್ನ ಬದುಕನ್ನು ಕಟ್ಟಿಕೊಳ್ಳುತ್ತಲೇ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವ ಅಮೃತತೆ ಬಹಳ ಮುಖ್ಯ ಎಂದರು. ಕನ್ನಡ ಸಾಹಿತ್ಯ ವಿಸ್ತಾರವಾದುದು ಅದರಲ್ಲಿ ಈಜಿ ದಡ ಸೇರುವ ತವಕ ತಲ್ಲಣಗಳು ನಮ್ಮಲ್ಲಿ ಗಟ್ಟಿಯಾಗಿರಬೇಕು. ನಿರೂಪಣೆ, ಕಾರ್ಮಿಕ ಹೋರಾಟ ಹೀಗೆ ಅನೇಕ ಜನಪರ ಕ್ಷೇತ್ರದಲ್ಲಿ ದುಡಿದು ಅನುಭವವಿರುವ ಬಿ.ಶೃಂಗೇಶ್ವರ ಅವರ ಸಾರ್ಥಕತೆಯನ್ನು ಕೊಂಡಾಡಿದರು. ಬರವಣಿಗೆ ಹೊಚ್ಚ ಹೊಸತನದಿಂದ ಕೂಡಿರಬೇಕು ಆ ಬಗೆಯಲ್ಲಿ ಅಭಿನವ ಲಿಮರಿಕ್ಸ್ ಕವಿತಾ ಸಂಕಲನವು ನೂರಾ ಆರು ಬಿಡಿಬಿಡಿ ಕವಿತೆಗಳಾಗಿ ಹರಳುಗಟ್ಟಿವೆ ಎಂದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಖ್ಯಾತ ಕುಂಚ ಕಲಾವಿದೆ ಶ್ರೀಮತಿ ಶಾಂತಿ ವಾಸು ಅವರು ಶೃಂಗೇಶ್ವರ ಅವರು ಬರೆದಿರುವ ಅಭಿನವ ಲಿಮರಿಕ್ಸ್ ಕೃತಿಯು ಓದುಗರಲ್ಲಿ ಒಂದು ಸುಂದರ ಅನುಭವವನ್ನು ತಂದುಕೊಡುತ್ತದೆ. ತಿಳಿಹಾಸ್ಯವನ್ನು ಕವಿತೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಕೃತಿಯೊಳಗಿನ ನಾಲ್ಕಾರು ಕವಿತೆಗಳನ್ನು ಓದಿ ಅರ್ಥೈಸಿದರು. ಇದೇ ಸಂದರ್ಭದಲ್ಲಿ ಬಿ.ಶೃಂಗೇಶ್ವರ ಅವರನ್ನು ಬಿಬಿಜಿಎಸ್ ಟ್ರಸ್ಟಿನ ಪರವಾಗಿ ಸನ್ಮಾನಿಸಿ ಅಭಿನಂದಿಸಲಾಯಿತು. ಶೃಂಗೇಶ್ವರ ಅವರು ತಮ್ಮ ಕಾವ್ಯ,ಕತೆ ಸಾಹಿತ್ಯಕ್ಕೆ ಪ್ರೇರಣೆ ನೀಡಿದ ಸಂದರ್ಭ ಹಾಗೂ ಸನ್ನಿವೇಶಕ್ಕೆ ಕಾರಣರಾದವರನ್ನು ಸ್ಮರಿಸಿದರು.

ಸಂಸ್ಥೆಯ ಅಧ್ಯಕ್ಷರಾದ ಡಾ.ಎಸ್. ರಾಮಲಿಂಗೇಶ್ವರ (ಸಿಸಿರಾ) ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ನ 25 ವರ್ಷದ ಸಾರ್ಥಕ ಕಾರ್ಯಗಳನ್ನು ಪ್ರಾಸ್ತಾವಿಕವಾಗಿ ತಿಳಿಸಿ ವೇದಿಕೆಯ ಗಣ್ಯರನ್ನು ಸ್ವಾಗತಿಸಿದರು. ಎಸ್. ಜೆ.ಆರ್. ಕಾಲೇಜಿನ ಕನ್ನಡ ಉಪನ್ಯಾಸಕರಾದ ಡಾ.ಕುಸುಮ ಸುಂದರವಾಗಿ ನಿರೂಪಿಸಿದ ಕಾರ್ಯಕ್ರಮದಲ್ಲಿ ಗಾಯಕರಾದ ಡಾ.ಅಂಬುಜಾಕ್ಷಿ ಬೀರೇಶ್ ಮತ್ತು ಭೀಮ್ ಜೀ ಅವರು ತಮ್ಮ ಗೀತಗಾಯನದ ಮೂಲಕ ಸೇರಿದ್ದ ಸಭಿಕರನ್ನು ರಂಜಿಸಿದರು.

ಕಲಾಪ್ರಿಯ 13-02-2024

# ಭಾಷೆ ಸ್ವೀಕಾರಕ್ಕೆ ಮಡಿವಂತಿಕೆ ಸಲ್ಲ: ಡಾ.ಎಸ್.ಆರ್ ವಿಜಯಶಂಕರ್




ಬೆಂಗಳೂರು: 9 ನೇ ಶತಮಾನದ ಕವಿರಾಜಮಾರ್ಗಕಾರನು ಚತ್ತಾಣ, ಬೆದಂಡೆ ಎಂಬ ಕಾವ್ಯ ಪ್ರಕಾರಗಳನ್ನು ತನ್ನ ಕಾವ್ಯದಲ್ಲಿ ಬಳಸಿದ್ದು, ಕನ್ನಡದ ತ್ರಿಪದಿ, ವಚನಗಳಲ್ಲಿ " ಲಿಮರಿಕ್ಸ್ " ರೂಪದ ಹಾಡುಗಬ್ಬದ ವೈಶಿಷ್ಟದ ಕಾವ್ಯ ಪ್ರಯೋಗಗಳನ್ನು ಕಾಣಬಹುದಾಗಿದ್ದು ಯಾವುದೇ ಭಾಷೆಯನ್ನು ಸ್ವೀಕರಿಸಲು ಮಡಿವಂತಿಕೆ ಬೇಡ ಎಂದು ಖ್ಯಾತ ಅಂಕಣಕಾರ, ವಿಮರ್ಶಕ ಡಾ.ಎಸ್.ಆರ್.ವಿಜಯಶಂಕರ್ ಅಭಿಪ್ರಾಯಪಟ್ಟರು.

ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜಿನ ಸಭಾಂಗಣದಲ್ಲಿ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಏರ್ಪಡಿಸಿದ್ದ ಲೇಖಕ, ನಿರೂಪಕ ಬಿ.ಶೃಂಗೇಶ್ವರ ಅವರು ಇಂಗ್ಲೀಷಿನಲ್ಲಿ ಬಳಸುತ್ತಿದ್ದ ಲಿಮರಿಕ್ಸ್ ಕಾವ್ಯ ಪ್ರಕಾರವನ್ನು ಕನ್ನಡದಲ್ಲಿ ಪಂಚ ಸಾಲಿನಲ್ಲಿ ಬರೆದಿರುವ ವಿಶೇಷ, ವಿನೂತನ ಕಾವ್ಯ ಕನಡದ ಹೊಸ ಪ್ರಯೋಗ "ಅಭಿನವ ಲಿಮರಿಕ್" ಕೃತಿಯನ್ನು ಲೋಕಾರ್ಪಣೆ ಮಾಡಿ ಮಾತನಾಡುತ್ತಿದ್ದರು. ಚಿಕ್ಕದಾದ ಹಾಡು, ಮಾತುಗಳಲ್ಲಿ ದೊಡ್ಡದಾದದ್ದನ್ನು ತಿಳಿಸಿಕೊಡುವ ಪ್ರಯತ್ನವೇ ಈ ಲಿಮರಿಕ್ಸ್ ನ ವಿಶೇಷತೆ ಎಂದರು. 1800 ರ ಕಾಲಘಟ್ಟದಲ್ಲಿ ಇಂಗ್ಲೆಂಡಿನ ಕೇಂಬ್ರಿಡ್ಜ್ ವಿಶ್ವವಿದ್ಯಾಲಯ ಆರಂಭಗೊಂಡ ಕಾಲದಲ್ಲಿ ಅಂದರೆ 200 ವರ್ಷಗಳ ಇತಿಹಾಸವಿರುವ ಈ ಕಾವ್ಯದ ಬಳಕೆಗೊಂಡಿದೆ. ಆದರೆ ಸಂಸ್ಕೃತ, ಇಂಗ್ಲೀಷ್ ಯಾವುದೇ ಭಾಷೆಯನ್ನು ನಮ್ಮದಾಗಿಸಿಕೊಳ್ಳುವ ಸಂದರ್ಭ ಬಂದಾಗ ಅದನ್ನು ನಾವು ಸ್ವೀಕರಿಸುವ ಮೂಲಕ ನಮ್ಮ ಭಾಷೆಯಾಗಿಸಿ ಕೊಳ್ಳಬೇಕೆಂದು ದಿನಕರ ದೇಸಾಯಿ, ಡಿವಿಜಿ, ವೈಎನ್ಕೆ, ಡುಂಡಿರಾಜ್ ಅವರುಗಳು ಈಗಾಗಲೇ ಅಲ್ಲಲ್ಲಿ ಬಳಸಿರುವುದನ್ನು ಎಸ್. ಆರ್. ಜಯಶಂಕರ್ ಅವರು ತಿಳಿಸಿ, ಬಿ.ಶೃಂಗೇಶ್ವರ ಅವರು ಕನ್ನಡ ಕಾವ್ಯ,ಕತೆ,ನಾಟಕ ವಿವಿಧ ಲೇಖನಗಳನ್ನು ಬರೆದಿದ್ದಾರೆ, ಈ ಅಭಿನವ ಲಿಮರಿಕ್ಸ್ ಕೃತಿಯು ಕನ್ನಡದ ಮುಂಗಾಣ್ಕೆಯಾಗಿರುವುದು ಹೊಸ ಕಾವ್ಯ ಬರವಣಿಗೆಗೆ ಉತ್ತೇಜಿಸುವಂತೆ ಬರೆದಿರುವುದಕ್ಕೆ ಅಭಿನಂದಿಸಿದರು.

ಕಾರ್ಯಕ್ರಮದ ಅಧ್ಯಕ್ಷತೆಯನ್ನು ವಹಿಸಿದ್ದ ಶಿಕ್ಷಣ ತಜ್ಞ, ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ.ವೂಡೆ ಪಿ ಕೃಷ್ಣ ಅವರು ತಾಯಿ ಹೃದಯದಿಂದ ಕಾವ್ಯ ರಚನೆ ಮಾಡಿದ್ದು ಕವಿಯಾದವನು ಹಮ್ಮು ಬಿಮ್ಮು ಬಿಟ್ಟು ತನ್ನ ಬದುಕನ್ನು ಕಟ್ಟಿಕೊಳ್ಳುತ್ತಲೇ ಸಾಮಾಜಿಕ ಜವಾಬ್ದಾರಿಯನ್ನು ನಿರ್ವಹಿಸುವ ಅವಶ್ಯಕತೆ ಬಹಳ ಮುಖ್ಯ ಎಂದರು. ಕನ್ನಡ ಸಾಹಿತ್ಯ ವಿಸ್ತಾರವಾದುದು ಅದರಲ್ಲಿ ಈಜಿ ದಡ ಸೇರುವ ತವಕ ತಲ್ಲಣಗಳು ನಮ್ಮಲ್ಲಿ ಗಟ್ಟಿಯಾಗಿರಬೇಕು. ನಿರೂಪಣೆ, ಕಾರ್ಮಿಕ ಹೋರಾಟ ಹೀಗೆ ಅನೇಕ ಜನಪರ ಕ್ಷೇತ್ರದಲ್ಲಿ ದುಡಿದು ಅನುಭವವಿರುವ ಬಿ.ಶೃಂಗೇಶ್ವರ ಅವರ ಸಾರ್ಥಕತೆಯನ್ನು ಕೊಂಡಾಡಿದರು. ಬರವಣಿಗೆ ಹೊಚ್ಚ ಹೊಸತನದಿಂದ ಕೂಡಿರಬೇಕು ಆ ಬಗೆಯಲ್ಲಿ ಅಭಿನವ ಲಿಮರಿಕ್ಸ್ ಕವಿತಾ ಸಂಕಲನವು ನೂರಾ ಆರು ಬಿಡಿಬಿಡಿ ಕವಿತೆಗಳಾಗಿ ಹರಳುಗಟ್ಟಿವೆ ಎಂದರು. ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಖ್ಯಾತ ಕುಂಚ ಕಲಾವಿದೆ ಶ್ರೀಮತಿ ಶಾಂತಿ ವಾಸು ಅವರು ಶೃಂಗೇಶ್ವರ ಅವರು ಬರೆದಿರುವ ಅಭಿನವ ಲಿಮರಿಕ್ಸ್ ಕೃತಿಯು ಓದುಗರಲ್ಲಿ ಒಂದು ಸುಂದರ ಅನುಭವವನ್ನು ತಂದುಕೊಡುತ್ತದೆ. ತಿಳಿ ಹಾಸ್ಯವನ್ನು ಕವಿತೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಕೃತಿಯೊಳಗಿನ ನಾಲ್ಕಾರು ಕವಿತೆಗಳನ್ನು ಓದಿ ಅರ್ಥೈಸಿದರು. ಇದೇ ಸಂದರ್ಭದಲ್ಲಿ ಬಿ.ಶೃಂಗೇಶ್ವರ ಅವರನ್ನು ಬಿಬಿಜಿಎಸ್ ಟ್ರಸ್ಟಿನ ಪರವಾಗಿ ಸನ್ಮಾನಿಸಿ ಅಭಿನಂದಿಸಲಾಯಿತು. ಶೃಂಗೇಶ್ವರ ಅವರು ತಮ್ಮ ಕಾವ್ಯ,ಕತೆ ಸಾಹಿತ್ಯಕ್ಕೇ ಪ್ರೇರಣೆ ನೀಡಿದ ಸಂದರ್ಭ ಹಾಗೂ ಸನ್ನಿವೇಶಕ್ಕೆ ಕಾರಣರಾದವರನ್ನು ಸ್ಮರಿಸಿದರು. ಸಂಸ್ಥೆಯ ಅಧ್ಯಕ್ಷರಾದ ಡಾ.ಎಸ್.ರಾಮಲಿಂಗೇಶ್ವರ (ಸಿಸಿರಾ) ಅವರು ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ನ 25 ವರ್ಷದ ಸಾರ್ಥಕ ಕಾರ್ಯಗಳನ್ನು ಪ್ರಾಸ್ತಾವಿಕವಾಗಿ ತಿಳಿಸಿ ವೇದಿಕೆಯ ಗಣ್ಯರನ್ನು ಸ್ವಾಗತಿಸಿದರು. ಎಸ್. ಜೆ.ಆರ್. ಕಾಲೇಜಿನ ಕನ್ನಡ ಉಪನ್ಯಾಸಕರಾದ ಡಾ.ಕುಸುಮ ಸುಂದರವಾಗಿ ನಿರೂಪಿಸಿದ ಕಾರ್ಯಕ್ರಮದಲ್ಲಿ ಗಾಯಕರಾದ ಡಾ.ಅಂಬುಜಾಕ್ಷಿ ಬೀರೇಶ್ ಮತ್ತು ಭೀಮ್ ಜೇ ಅವರು ತಮ್ಮ ಗೀತಗಾಯನದ ಮೂಲಕ ನೆರೆದಿದ್ದ ಸಭಿಕರನ್ನು ರಂಜಿಸಿದರು.

ಸಂಯುಕ್ತ ಕರ್ನಾಟಕ
02 ಭಾನುವಾರ 11 ಫೆಬ್ರವರಿ 2024
ಬೆಂಗಳೂರು | BENGALURU



ಶೇಷಾದ್ರಿಪುರ ಕಾಲೇಜಿನಲ್ಲಿ ಬುದ್ಧ ಬಸವ ಗಾಂಧಿ ಸಾಂಸ್ಕೃತಿಕ ಟ್ರಸ್ಟ್ ವತಿಯಿಂದ ಹಮ್ಮಿಕೊಂಡಿದ್ದ ಕಾರ್ಯಕ್ರಮದಲ್ಲಿ 'ಅಭಿನವ ಅಮರಿಕ್ಸ್' ಕೃತಿಯನ್ನು ವಿಮರ್ಶಕ ಡಾ.ಎನ್.ಆರ್.ವಿಜಯಶಂಕರ್ ಲೋಕಾರ್ಪಣೆಗೊಳಿಸಿದರು. ಡಾ.ವೂಡೇ ಪಿ.ಕೃಷ್ಣ, ಎಂ.ತಿಮ್ಮಯ್ಯ, ಎಸ್.ರಾಮಲಿಂಗೇಶ್ವರ ಮತ್ತಿತರರಿದ್ದರು.

ಕನ್ನಡಪ್ರಭ

ಮಂಗಳವಾರ 30.01.2024

ಚಿಂತನ - ಮಂಥನ

ಗಾಂಧಿ ತತ್ವಪ್ರೇರಿತ ವಿಚಾರ ಗೋಷ್ಠಿಯಲ್ಲಿ ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ

# ಗಾಂಧೀಜಿ ವಿಚಾರಗಳ ಓದದೆ ಟೀಕೆ ಮಾಡುವುದು ಸಲ್ಲ

• ಕನ್ನಡಪ್ರಭ ವಾರ್ತೆ ಚಿತ್ರದುರ್ಗ

ಮಹಾತ್ಮಾ ಗಾಂಧಿಯ ವಿಚಾರಗಳನ್ನು ಓದದೇ ಅವರನ್ನು ಟೀಕೆ ಮಾಡುವುದು ಸಲ್ಲವೆಂದು ಬೆಂಗಳೂರಿನ ಗಾಂಧಿ ಭವನದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಹೇಳಿದರು.

ಗಾಂಧಿ ಭವನದ ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಯುವ ಸಬಲೀಕರಣ ಇಲಾಖೆಯ ರಾಷ್ಟ್ರೀಯ ಸೇವಾ ಯೋಜನೆ ಕೋಶ ಮತ್ತು ಗಾಂಧಿ ಅಧ್ಯಯನ ಕೇಂದ್ರದ ಸಹಯೋಗದಲ್ಲಿ ಚಿತ್ರದುರ್ಗದ ಸರಸ್ವತಿ ಕಾನೂನು ಕಾಲೇಜಿನ ರಜತೋತ್ಸವ ಸಭಾಂಗಣದಲ್ಲಿ ಆಯೋಜಿಸಿದ್ದ ಗಾಂಧಿ ತತ್ವಪ್ರೇರಿತ ವಿಚಾರಗೋಷ್ಠಿ ಉದ್ಘಾಟಿಸಿ ಮಾತನಾಡಿದ ಅವರು, ಯಾರ ವಿಚಾರಕ್ಕೆ ಬದುಕುತ್ತಾರೋ ಅವರು ನಿರಂತರವಾಗಿ ಉಳಿಯುತ್ತಾರೆ ಎಂದರು.

ಇಂದು ಗಾಂಧಿಯ ವ್ಯಕ್ತಿ ದರ್ಶನ ಸಾಧ್ಯವಿಲ್ಲ. ಆದರೆ ಅವರ ವಿಚಾರ ದರ್ಶನ ಇಂದಿಗೂ ಸಾಧ್ಯವಾಗುತ್ತಿದೆ. ಹಾಗಾಗಿ ವಿದ್ಯಾರ್ಥಿಗಳು ವಿಚಾರಕ್ಕಾಗಿ ,ಬದುಕಬೇಕು, ಆಲೋಚನೆ ಮಾಡಬೇಕು. ಪದವಿ ಪಡೆದರೆ ಪ್ರಯೋಜನ ವಿಲ್ಲ, ವಿಷಯವನ್ನು ಜ್ಞಾನಕ್ಕೆ ಬದಲಾಯಿಸಿಕೊಂಡು ಅದಕ್ಕೆ ಶಕ್ತಿ ತುಂಬುವಂತಹ ಕೆಲಸ ಮಾಡಬೇಕು. ಜಾತೀಯತೆ ಮತ್ತು ಮತೀಯ ಬೇಧ ಭಾವಗಳ ವಿರುದ್ಧ ಮಹಾತ್ಮ ಗಾಂಧಿ ಅವರು ಜೀವಮಾನವಿಡೀ ಹೋರಾಡಿದರು. ಎಲ್ಲ ವರ್ಗಗಳ ಜನರನ್ನು ಒಗ್ಗೂಡಿಸುವ ಪ್ರಯತ್ನ ಮಾಡಿದರು ಎಂದರು.



ಚಿತ್ರದುರ್ಗದ ಸರಸ್ವತಿ ಕಾನೂನು ಕಾಲೇಜಿನ ಸಭಾಂಗಣದಲ್ಲಿ ಆಯೋಜಿಸಿದ್ದ ಗಾಂಧಿ ತತ್ವಪ್ರೇರಿತ ವಿಚಾರ ಗೋಷ್ಠಿ ಗಾಂಧಿ ಸ್ಮಾರಕನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಉದ್ಘಾಟಿಸಿದರು.

ಜಾತಿಯ ಪಿಡುಗು ಇಂದು ನಮ್ಮನ್ನು ಕಿತ್ತು ತಿನ್ನುತ್ತಿದೆ. ಭ್ರಷ್ಟಮುಕ್ತ ಸಮಾಜ ನಿರ್ಮಾಣ ಮಾಡಬೇಕಾದರೆ ಅನ್ಯಾಯದ ವಿರುದ್ಧ ಪ್ರತಿಭಟಿಸುವುದು ರೂಢಿಸಿಕೊಳ್ಳಬೇಕು. ತಾಂತ್ರಿಕತೆ ಭರಾಟೆಯಲ್ಲಿ ಮನುಷ್ಯ ಸಂಬಂಧ ಗಳು ನಾಶವಾಗುತ್ತಿವೆ. ಪ್ರಕೃತಿಯೊಂದಿಗಿನ ಸಂಬಂಧ ಕಳೆದುಕೊಳ್ಳುತ್ತಿದ್ದೇವೆ. ಆಹಾರ ಸಂಸ್ಕೃತಿ ಕಳೆದುಕೊಂಡರೆ ಸಂಸ್ಕೃತಿಯನ್ನೇ ತ್ಯಜಿಸಿದಂತೆ. ಸಾಮಾಜಿಕ ಜಾಲತಾಣಗಳು ಯುವ ಜನರ ದಿಕ್ಕು ತಪ್ಪಿಸುವ ಕೆಲಸದಲ್ಲಿ ಮುಳುಗಿದ್ದು, ಎಚ್ಚರವಹಿಸಬೇಕಾದ ಅಗತ್ಯವಿದೆ ಎಂದರು.

ಗಾಂಧಿ ಮಾದರಿ ವಕೀಲರಾಗಿದ್ದರು. ಅವರ ಆಟೋಬಯೋಗ್ರಫಿ ಬಗ್ಗೆ ಮುಖ್ಯವಾಗಿ ಕಾನೂನು ವಿದ್ಯಾರ್ಥಿಗಳು ಓದಲೇಬೇಕು. ಈ ಪುಸ್ತಕ ಓದಿದರೆ ಗಾಂಧಿ ಅವರ ಸೂಕ್ಷ್ಮ ಪರಿಚಯವಾಗಲಿದೆ. ಭಾರತ ಸರಕಾರ ಪ್ರಕಟಿಸಿರುವ ದಿ ಕಲೆಕ್ಟೆಡ್ ವರ್ಕ್ಸ್ ಆಫ್ ಮಹಾತ್ಮಗಾಂಧಿ ಪುಸ್ತಕ ಗಾಂಧೀಜಿವರ ಬದುಕನ್ನು ತೆರೆದಿಡುತ್ತದೆ. ಜಗತ್ತಿನಲ್ಲಿ ಈವರೆಗೆ ಯಾವ ವ್ಯಕ್ತಿಯ ಜೀವನದ ಬಗ್ಗೆಯೂ ಇಲ್ಲದಷ್ಟು ವಿಚಾರಗಳು ಗಾಂಧಿಯ ಬಗ್ಗೆ ಈ ಪುಸ್ತಕದಲ್ಲಿವೆ. ಅಂತಹ ಅಭೂತಪೂರ್ವ ವ್ಯಕ್ತಿತ್ವವನ್ನು ಗಾಂಧಿ ಹೊಂದಿದ್ದರು ಎಂದರು.

ಗಾಂಧೀಜಿ ಅವರು ಶಿಕ್ಷಣ ಮಾತೃಭಾಷೆಯಲ್ಲಿ ಆಗಬೇಕು ಎಂದಿದ್ದರು. ಒಂದೊಂದು ಗ್ರಾಮ ಗಣರಾಜ್ಯ ಆಗಬೇಕು ಎಂದು ಬಯಸಿದ್ದರು. ದೇಶದ ಕಟ್ಟಕಡೆಯ ಮನುಷ್ಯನ ಜೀವನ ಶೈಲಿ ಗಾಂಧೀಜಿ ಸ್ವೀಕಾರ ಮಾಡುತ್ತಾರೆ. ಗಾಂಧಿಯವರಲ್ಲಿ ಸರಳ ಜೀವನ ಉದಾತ್ತ ಯೋಚನೆ ಇತ್ತು. ಆದರೆ ಈಗಿನ ಪೀಳಿಗೆಯಲ್ಲಿ ಜೀವನ ವಿಷಮವಾಗಿದ್ದು, ಚಿಂತನೆ ಸರಳವಾಗಿದೆ. ಹಾಗಾಗಿಯೇ ದುಸ್ಥಿತಿ ಎದುರಾಗಿದೆ. ಈ ಕಾರಣಕ್ಕಾಗಿಯೇ ಗಾಂಧಿಯವರ ಜೀವನ ಓದಬೇಕು. ಅರ್ಥ ಮಾಡಿಕೊಳ್ಳಬೇಕು ಎಂದರು.

ಕರ್ನಾಟಕದಲ್ಲಿ ಗಾಂಧಿ ವಿಷಯ ಕುರಿತು ವೇಮಗಲ್ ಸೋಮಶೇಖರ್ ಮಾತನಾಡಿ, ಮಹಾತ್ಮ ಗಾಂಧೀಜಿಯವರ ಅವರ ತತ್ವಗಳನ್ನು ಅನುಸರಿಸೋಣ. ಅವರಂತೆ ಆಲೋಚನೆ ಮಾಡೋಣ, ಸ್ವದೇಶಿ ತತ್ವ ಪಾಲಿಸಿ ಸ್ವಾವಲಂಬಿಗಳಾಗಿ ಬದುಕೋಣ ಎಂದರು.

ರಾಜ್ಯ ಸಭೆ ಮಾಜಿ ಸದಸ್ಯ ಎಚ್. ಹನುಮಂತಪ್ಪ, ಸರಸ್ವತಿ ವಿದ್ಯಾಸಂಸ್ಥೆ ಉಪಾಧ್ಯಕ್ಷ ಘಾತ್ಯರಾಜನ್, ಕಾರ್ಯದರ್ಶಿ ಡಿ.ಕೆ.ಶೀಲಾ, ಪ್ರಾಚಾರ್ಯ ಎಂ.ಎಸ್. ಸುಧಾದೇವಿ, ಆಡಳಿತಾಧಿಕಾರಿ ಪ್ರೊ.ಡಿ.ಎಚ್.ನಟರಾಜ, ಅಬ್ದುಲ್ ರೆಹಮಾನ್, ಮುರುಗೇಶ ಇದ್ದರು.

ವಿಜಯ ಕರ್ನಾಟಕ VK

ಶನಿವಾರ,27 ಜನವರಿ 2024,
ಬೆಂಗಳೂರು



ಶೇಷಾದ್ರಿಪುರಂ ಶಿಕ್ಷಣ ದತ್ತಿ ಕಾಲೇಜಿನ ಆವರಣದಲ್ಲಿ ಶುಕ್ರವಾರ ನಡೆದ 75ನೇ ಗಣರಾಜ್ಯೋತ್ಸವದ ಸಂದರ್ಭದಲ್ಲಿ ಧ್ವಜಾರೋಹಣ ನೆರವೇರಿಸಿದ ನ್ಯಾಯಮೂರ್ತಿ ಸುಭಾಷ್ ಬಿ.ಅಡಿ ಅವರನ್ನು ಗೌರವಿಸಲಾಯಿತು.ಶೇಷಾದ್ರಿಪುರಂ ಶಿಕ್ಷಣ ದತ್ತಿ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ , ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಉಪಸ್ಥಿತರಿದ್ದರು.

ಪ್ರಜಾವಾಣಿ
ಗುರುವಾರ • ಜನವರಿ 18, 2024

ಬಾಪೂ ವ್ಯಕ್ತಿತ್ವದ ಅಪಪ್ರಚಾರ: ವ್ಯವಸ್ಥಿತ ಕುತಂತ್ರ

# ‘ಗಾಂಧೀಜಿಗೆ ಪರ್ಯಾಯ ನಾಯಕರಿಲ್ಲ’

ಪ್ರಜಾವಾಣಿ ವಾರ್ತೆ

ಕನಕಪುರ: ರಾಜಕೀಯ ಸಮಸ್ಯೆಗಳಿಗೆ ಗಾಂಧಿ ತತ್ವ ಹಾಗೂ ಸೂತ್ರದಲ್ಲಿ ಪರಿಹಾರ ಕಂಡುಕೊಳ್ಳಬಹುದಾಗಿದೆ. ಆ ನಿಟ್ಟಿನಲ್ಲಿ ನಾವು ಚಿಂತನೆ ನಡೆಸಬೇಕು ಎಂದು ಕರ್ನಾಟಕ ಮುಕ್ತ ವಿಶ್ವವಿದ್ಯಾಲಯದ ನಿವೃತ್ತ ಕುಲಪತಿ ಎಂ.ಎಸ್. ರಾಮೇಗೌಡ ಹೇಳಿದರು.

ರೂರಲ್ ಕಾಲೇಜಿನಲ್ಲಿ ಬುಧವಾರ ಗಾಂಧಿ ಚಿಂತನೆಗಳಲ್ಲಿ ಮಾನವೀಯ ಮೌಲ್ಯಗಳು ವಿಚಾರ ಸಂಕಿರಣದಲ್ಲಿ ಮಾತನಾಡಿದರು.

ಚುನಾವಣೆಗಳು ಗಾಂಧೀಜಿಯವರ ತತ್ವದ ಮೇಲೆ ನಡೆದಾಗ ಮಾತ್ರ ಸಮಾಜದಲ್ಲಿ ಶಾಂತಿ ನೆಲೆಸಲು ಸಾಧ್ಯ. ಗಾಂಧಿ ಅವರ ಸತ್ಯ, ಶಾಂತಿ, ಸಹನೆ, ಅಹಿಂಸೆ ತತ್ವ ಅಳವಡಿಸಿಕೊಂಡರೆ ರಷ್ಯಾ ಮತ್ತು ಉಕ್ರೇನ್ ಯುದ್ಧ ಕೊನೆಗೊಳ್ಳಲಿದೆ. ಅಷ್ಟು ಮೌಲ್ಯಯುತವಾದ ಚಿಂತನೆಗಳು ಗಾಂಧಿ ತತ್ವದಲ್ಲಿದೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಬೆಂಗಳೂರು, ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಮತ್ತು ಕ್ರೀಡೆ ಆಶ್ರಯದಲ್ಲಿ ಈ ವಿಚಾರ ಸಂಕಿರಣ ಹಮ್ಮಿಕೊಳ್ಳಲಾಗಿತ್ತು

ಶ್ರಮವಿಲ್ಲದ ಸಂಪತ್ತು , ಶೀಲ ರಹಿತ ಜ್ಞಾನ, ತತ್ವ ರಹಿತ ವ್ಯಾಪಾರ, ಮನುಷ್ಯತ್ವ ರಹಿತ ವಿಜ್ಞಾನ, ಸ್ವಾರ್ಥ ಸಹಿತ ಧರ್ಮ, ತತ್ವರಹಿತ ರಾಜಕೀಯ ಇವುಗಳನ್ನು ಗಾಂಧೀಜಿಯವರು ಸಾಮಾಜಿಕ ಪಾಪಗಳು ಎಂದು ಕರೆದಿದ್ದರು. ಇವುಗಳನ್ನು ದೂರ ಮಾಡಿದಾಗ ಪರಿಪೂರ್ಣ ವ್ಯಕ್ತಿಯಾಗಲು ಸಾಧ್ಯವೆಂದರು.

ಆಧ್ಯಾತ್ಮ ಈ ದೇಶದ ದೊಡ್ಡ ಶಕ್ತಿ ಎಂಬುದನ್ನು ಸ್ವಾಮಿ ವಿವೇಕಾನಂದ ಮತ್ತು ಗಾಂಧೀಜಿ ಕಂಡುಕೊಂಡಿದ್ದರು. ಇಬ್ಬರೂ ಅದನ್ನೇ ಪ್ರತಿಪಾದಿಸುತ್ತಿದ್ದರು ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೆ ಪಿ.ಕೃಷ್ಣ ಹೇಳಿದರು.

‘ಗಾಂಧೀಜಿ ಭಾರತಕ್ಕೆ ಮಾತ್ರ ನಾಯಕರಾಗಿರಲಿಲ್ಲ. ವಿಶ್ವದ ನಾಯಕ ಎಂದು ಅಮೆರಿಕ ಮಾಜಿ ಅಧ್ಯಕ್ಷ ಬರಾಕ್ ಒಬಾಮಾ ಹೇಳಿದ್ದಾರೆ. ಗಾಂಧೀಜಿ ಅವರನ್ನು ಹೊರಗಿನವರು ಅರ್ಥ ಮಾಡಿಕೊಂಡಷ್ಟು ನಾವು ಅರ್ಥ ಮಾಡಿಕೊಂಡಿಲ್ಲ’ ಎಂದು ವಿಷಾದಿಸಿದರು.

‘ಗಾಂಧಿ ಬಿಟ್ಟು ಭಾರತ ಇಲ್ಲ. ಭಾರತ ಬಿಟ್ಟು ಗಾಂಧಿ ಇಲ್ಲ. ಆದರೆ ಸಾಮಾಜಿಕ ಜಾಲತಾಣಗಳಲ್ಲಿ ಸಾಕಷ್ಟು ಅಪಪ್ರಚಾರ ಹರಡುತ್ತಿದ್ದಾರೆ. ಯುವ ಸಮೂಹ ಎಚ್ಚೆತ್ತುಕೊಳ್ಳಬೇಕು. ಸತ್ಯಾನ್ವೇಷಣೆ ಮಾಡಬೇಕು ಎಂದು ಸಲಹೆ ನೀಡಿದರು.

ಆರ್‌ಇಎಸ್ ಸಂಸ್ಥೆ ಕಾರ್ಯದರ್ಶಿ ಪುಟ್ಟಸ್ವಾಮಿ, ನಿರ್ದೇಶಕ ಕೆ.ಬಿ. ನಾಗರಾಜು, ಪ್ರಾಂಶುಪಾಲ ಎಂ.ಟಿ. ಬಾಲಕೃಷ್ಣ, ಹಂಪಿ ವಿವಿ ಪ್ರೊ.ಶಿವರೆಡ್ಡಿ, ಎನ್‌ಎಸ್‌ಎಸ್ ಅಧಿಕಾರಿ ಅಬಿದಾ ಬೇಗಂ, ಐಕ್ಯೂಎಸಿ ತಮ್ಮಣ್ಣಗೌಡ, ಉಪನ್ಯಾಸಕರಾದ ದೇವರಾಜು, ಚಿಕ್ಕಚನ್ನಯ್ಯ, ಎ.ಪಿ.ಪ್ರಕಾಶ್, ಜಗದೀಶ್ ಭಾಗವಹಿಸಿದ್ದರು.



ಕನಕಪುರ ರೂರಲ್ ಕಾಲೇಜಿನಲ್ಲಿ ನಡೆದ ಗಾಂಧಿ ಚಿಂತನೆಗಳಲ್ಲಿ ಮಾನವ ಮೌಲ್ಯಗಳು ವಿಚಾರ ಸಂಕಿರಣ ಕಾರ್ಯಕ್ರಮದಲ್ಲಿ ವೂಡೆ ಕೃಷ್ಣ ಮಾತನಾಡಿದರು

ಸಂಯುಕ್ತ ಕರ್ನಾಟಕ



# ಮಹಾತ್ಮ ಗಾಂಧೀಜಿ ಬದುಕು ಅದ್ಭುತ, ವಿಶಿಷ್ಟ

## ಅಹಿಂಸೆಯ ಮೂಲಕ ಸಮಾಜದ ಬದಲಾವಣೆಯನ್ನು ಬಯಸಿದ ಮಹಾತ್ಮ । ಸ್ವತಂತ್ರ ಪೂರ್ವದಲ್ಲೇ ಭಾರತ ದೇಶದಲ್ಲಿ ರಾಮರಾಜ್ಯದ ಕನಸು ಕಂಡಿದ್ದ ಗಾಂಧಿ । ಒಂದು ದಿನದ ವಿಚಾರ ಸಂಕಿರಣ ಕಾರ್ಯಕ್ರಮ

**ಸಂ.ಕ. ಸಮಾಚಾರ, ಕನಕಪುರ**

ಮಹಾತ್ಮ ಗಾಂಧೀಜಿಯವರ ಬದುಕಿನ ಪಯಣ ಭೂ ಮಂಡಲದಲ್ಲಿಯೇ ಅತ್ಯಂತ ಅದ್ಭುತ ಮತ್ತು ವೈಶಿಷ್ಟ್ಯಪೂರ್ಣವಾಗಿದೆ. ಗಾಂಧೀಜಿಯವರು ಸಾಮಾನ್ಯ ಕುಟುಂಬದಲ್ಲಿ ಜನಿಸಿ ಅಹಿಂಸೆಯ ಮೂಲಕ ಸಮಾಜದ ಬದಲಾವಣೆಯನ್ನು ಬಯಸಿ ತಮ್ಮನ್ನು ತಾವು ಸಮಾಜಕ್ಕೆ ಅರ್ಪಿಸಿಕೊಂಡಿದ್ದರು ಎಂದು ಮೈಸೂರು ಕೆ.ಎಸ್.ಒ.ಯು. ನಿವೃತ್ತ ಉಪಕುಲಪತಿ ಪ್ರೊ. ಡಾ.ಎನ್.ಎಸ್. ರಾಮೇಗೌಡ ಹೇಳಿದರು.

ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ 75 ವರ್ಷಾಚರಣೆ ಪ್ರಯುಕ್ತ ರೂರಲ್ ಕಾಲೇಜು ಎನ್.ಎಸ್.ಎಸ್. ಘಟಕದ ಸಂಯುಕ್ತಾಶ್ರಯದಲ್ಲಿ ಹಮ್ಮಿಕೊಳ್ಳಲಾಗಿದ್ದ ಗಾಂಧೀಜಿಯವರ ಮಾನವೀಯ ಮೌಲ್ಯಗಳು ಎಂಬ ವಿಷಯದ ಬಗ್ಗೆ ವಿದ್ಯಾರ್ಥಿಗಳಿಗೆ ಒಂದು ದಿನದ ವಿಚಾರ ಸಂಕಿರಣ ಕಾರ್ಯಕ್ರಮವನ್ನು ಉದ್ಘಾಟಿಸಿ ಅವರು ಮಾತನಾಡಿ, ಅಹಿಂಸೆ, ತ್ಯಾಗಗಳ ಮೂಲಕ ದೇಶಕ್ಕೆ ಸ್ವಾತಂತ್ರ್ಯ ತರಲು ಹೊಸ ದಿಕ್ಕನ್ನು ತೋರಿಸಿದ್ದರು. ಗಾಂಧೀಜಿಯವರು ಸಮಾಜದ ಮೇಲು-ಕೀಳೆಂಬ ತಾರತಮ್ಯ ನಿವಾರಣೆಗೆ ಶ್ರಮಿಸಿ ಮಾನವೀಯ ಮೌಲ್ಯಗಳನ್ನು ಎತ್ತಿಹಿಡಿದ ಮಹಾಪುರುಷರಾಗಿದ್ದರು ಎಂದು ಬಣ್ಣಿಸಿದರು.

ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ ಕೃಷ್ಣ ಮಾತನಾಡಿ, ರಕ್ತಪಾತವಿಲ್ಲದೆ ಅಹಿಂಸೆಯ ಮಾರ್ಗದಲ್ಲಿ ದೇಶಕ್ಕೆ ಸ್ವತಂತ್ರ ತಂದುಕೊಟ್ಟ ಗಾಂಧೀಜಿಯವರ ತತ್ವ ಆದರ್ಶಗಳು ಸಮ ಸಮಾಜ ನಿರ್ಮಾಣಕ್ಕೆ ದಾರಿದೀಪವಾಗಿವೆ. ಗಾಂಧೀಜಿಯವರ ವ್ಯಕ್ತಿತ್ವ ಸಮಾಜದಲ್ಲಿ ಶಾಶ್ವತವಾಗಿ ನೆನಪು ಉಳಿಯುವಂತೆ ಮಾಡಿವೆ. ಅವರ ಜೀವನ ಶೈಲಿಯನ್ನನು ಎಲ್ಲರೂ ಅನುಕರಿಸುವ ಹಾಗು



**ಕನಕಪುರ ರೂರಲ್ ಕಾಲೇಜಿನಲ್ಲಿ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯಿಂದ ಜರುಗಿದ ಒಂದು ದಿನದ ವಿಚಾರ ಸಂಕಿರಣದಲ್ಲಿ ಡಾ.ಎನ್.ಎಸ್. ರಾಮೇಗೌಡ, ಡಾ.ವೂಡೇ ಪಿ ಕೃಷ್ಣ, ಚಿಕ್ಕಚನ್ನಯ್ಯ, ಅಬಿದ ಬೇಗಂ, ಪುಟ್ಟಸ್ವಾಮಿ, ಎಂ.ಟಿ.ಬಾಲಕೃಷ್ಣ ಹಾಜರಿದ್ದರು.**

ಮೌಲ್ಯ ಆದರ್ಶಗಳನ್ನು ಮಕ್ಕಳಿಗೆ ಪರಿಚಯಿಸುವ ಅಗತ್ಯತೆಯಿದೆ. ಇಡೀ ಜಗತ್ತೇ ಗುರ್ತಿಸುವಂತಹ ಗಾಂಧೀಜಿಯವರು ಅಂತಹ ಕೆಲಸಗಳನ್ನು ಮಾಡಿದ್ದಾರೆ. ಆ ಮೂಲಕ ದೇಶಕ್ಕೆ ಸ್ವತಂತ್ರ ತಂದುಕೊಟ್ಟ ಮಹನೀಯರಾಗಿದ್ದಾರೆ. ಸ್ವತಂತ್ರ ಪೂರ್ವದಲ್ಲಿಯೇ ಭಾರತ ದೇಶದಲ್ಲಿ ರಾಮರಾಜ್ಯದ ಕನಸನ್ನು ಕಂಡವರಾಗಿದ್ದರು. ಜೊತೆಗೆ ಸರ್ವೋದಯದ ಮೂಲಕ ಗ್ರಾಮ ಸ್ವರಾಜ್ಯದಡಿ ಇಡೀ ಭಾರತ ಸ್ವಚ್ಛವಾಗಿರಬೇಕೆಂದು ಕನಸು ಕಂಡಿದ್ದರು.

ಕನಕಪುರದ ಗಾಂಧಿ: ಗ್ರಾಮಾಂತರ ಜಿಲ್ಲೆಯಲ್ಲಿ ಸಾಕ್ಷರತೆ ಎಂಬುದು ಕನಸಿನ ಮಾತಾಗಿದ್ದ ಕಾಲದಲ್ಲಿ ಗಾಂಧೀಜಿ ಆದರ್ಶ ಸರ್ವಕಾಲಿಕ ಶ್ರೇಷ್ಠ ಎಂದು ನಂಬಿದ್ದ ಕನಕಪುರ ಗಾಂಧಿ ಪರಮಪೂಜ್ಯ ಎಸ್.ಕರಿಯಪ್ಪನವರು ಗ್ರಾಮಾಂತರ ವಿದ್ಯಾ ಪ್ರಚಾರಕ ಸಂಸ್ಥೆಯನ್ನು ಸಣ್ಣ ಗುಡಿಸಲಿನಲ್ಲಿ ಸ್ಥಾಪಿಸಿ ಇಂದು ಬೃಹದಾಕಾರದಲ್ಲಿ ಸಾವಿರಾರು ಮಕ್ಕಳಿಗೆ ವಿದ್ಯಾದಾನ ಮಾಡುತ್ತಿರುವುದು ಗಾಂಧೀಜಿಯವರ ಮತ್ತೊಂದು ಆದರ್ಶಕ್ಕೆ ಈ ರೂರಲ್ ಕಾಲೇಜು ಸಾಕ್ಷಿಯ ಸಂಕೇತವಾಗಿ ವಿದ್ಯಾರ್ಥಿಗಳ ಜೀವನಕ್ಕೆ ದಾರಿದೀಪವಾಗಿದೆ ಎಂದು ಸಂಸ್ಥೆಯ ಸಂಸ್ಥಾಪಕ ಪೂಜ್ಯ ಎಸ್.ಕರಿಯಪ್ಪನವರ ನಿಸ್ವಾರ್ಥ ಸೇವೆಯನ್ನು ಬಣ್ಣಿಸಿದರು. ಕರಿಯಪ್ಪನವರು ಸ್ಥಾಪಿಸಿರುವ ಮರಳವಾಡಿ ಸಮೀಪದ ಗಾಂಧಿಫಾರಂ ಹೆಸರಿನಲ್ಲಿ ಕೃಷಿ ಚಟುವಟಿಕೆಯನ್ನು ನಡೆಸುವ ಮೂಲಕ ಗಾಂಧೀಜಿಯವರಿಗೆ ಪ್ರೇರಣೆಯ ವ್ಯಕ್ತಿಯಾಗಿದ್ದರು ಎಂದರು.

ಬೆಂಗಳೂರು ವಿವಿ ರಾಜಾಜಿನಗರ ಕಾಲೇಜು ಉಪನ್ಯಾಸಕ ಚಿಕ್ಕಚನ್ನಯ್ಯ, ಎನ್.ಎಸ್.ಎಸ್. ಅಧಿಕಾರಿಗಳಾದ ಅಬಿದ ಬೇಗಂ, ಪ್ರಕಾಶ್, ಜಗದೀಶ್, ಆರ್.ಇ.ಎಸ್. ಸಂಸ್ಥೆಯ ಕಾರ್ಯದರ್ಶಿ ಪುಟ್ಟಸ್ವಾಮಿ, ರೂರಲ್ ಕಾಲೇಜು ಪ್ರಾಂಶುಪಾಲ ಎಂ.ಟಿ.ಬಾಲಕೃಷ್ಣ, ಉಪನ್ಯಾಸಕರಾದ ಜಗದೀಶ್, ತಮ್ಮಣ್ಣಗೌಡ ಸೇರಿದಂತೆ ಉಪನ್ಯಾಸಕರು, ಸಿಬ್ಬಂದಿಗಳು, ವಿದ್ಯಾರ್ಥಿಗಳು ಭಾಗವಹಿಸಿದ್ದರು.

ಸಂಯುಕ್ತ ಕರ್ನಾಟಕ
ಸೋಮವಾರ 15 ಜನವರಿ 2024
ಬೆಂಗಳೂರು | BENGALURU

# ತೀರ್ಪು ಪರವಾಗಿದ್ದರೂ ರಾಜ್ಯಕ್ಕೆ ಅನ್ಯಾಯ: ಕ್ಯಾ. ರಾಜಾರಾವ್ ಅಭಿಮತ

## ಕಾವೇರಿ ನೀರು ಹಂಚಿಕೆ

ಬೆಂಗಳೂರು: ಕಾವೇರಿ ನೀರು ಹಂಚಿಕೆ ವಿವಾದದಲ್ಲಿ ನ್ಯಾಯವು ಕರ್ನಾಟಕದ ಪರವಾಗಿಯೇ ಇದೆ. ಆದರೂ ಸುಪ್ರೀಂಕೋರ್ಟ್ ತೀರ್ಪಿನ ನಂತರವೂ ರಾಜ್ಯಕ್ಕೆ ಸಂಪೂರ್ಣ ನ್ಯಾಯ ಸಿಕ್ಕಿಲ್ಲ ಎಂದು ಹೆಸರಾಂತ ನೀರಾವರಿ ತಜ್ಞ ಕ್ಯಾಪ್ಟನ್ ರಾಜಾರಾವ್ ಹೇಳಿದರು.

ಕನ್ನಡ ಗೆಳೆಯರ ಬಳಗ ಮತ್ತು ಕರ್ನಾಟಕ ವಿಕಾಸ ರಂಗ ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಸಂಯುಕ್ತವಾಗಿ ಏರ್ಪಡಿಸಿದ್ದ ಡಾ.ಎಂ. ಚಿದಾನಂದಮೂರ್ತಿ ನೆನಪಿನ ಉಪನ್ಯಾಸ ಮತ್ತು ಗೌರವ ಕಾರ್ಯಕ್ರಮದಲ್ಲಿ ಮಾತನಾಡಿದ ಅವರು, 1924ರ ಒಪ್ಪಂದವು ರಾಜ್ಯಕ್ಕೆ ಅನ್ಯಾಯ ಮಾಡಿದ್ದು ವಾಸ್ತವ. ಇನ್ನೊಂದೆಡೆ ರಾಜ್ಯದ ಕಾವೇರಿ ಅಚ್ಚುಕಟ್ಟು ಪ್ರದೇಶದ ಕೃಷಿಯ ವಿಚಾರದಲ್ಲಿ ನಮ್ಮ ಸರ್ಕಾರಗಳು ಎಡವುತ್ತಲೇ ಬಂದಿವೆ. ಇನ್ನಾದರೂ ಎಚ್ಚೆತ್ತುಕೊಳ್ಳದಿದ್ದರೆ ಮುಂದೆ ಅಪಾಯ ಕಾದಿದೆ ಎಂದು ಎಚ್ಚರಿಸಿದರು.

ತಮಿಳುನಾಡು ಸಹಜವಾಗಿಯೇ ಹೆಚ್ಚು ಅಂತರ್ಜಲ ಹೊಂದಿದೆ. ಆದರೂ ನ್ಯಾಯಾಧಿಕರಣ ಮತ್ತು ನ್ಯಾಯಾಲಯಗಳು ಇದನ್ನು ಪರಿಗಣನೆಗೆ ತೆಗೆದುಕೊಂಡೇ ಇಲ್ಲ. ಇದರ ಜತೆಗೆ ರಾಜ್ಯದ ಪರವಾಗಿ ವಾದಿಸಿದ ನ್ಯಾಯವಾದಿಗಳು ಕೂಡ ತೀಕ್ಷ್ಣವಾಗಿ ವಾದಿಸಿದ ಉದಾಹರಣೆಗಳೇ ಇಲ್ಲ ಎಂದವರು ಅಸಮಾಧಾನ ವ್ಯಕ್ತಪಡಿಸಿದರು.

ಬರಗಾಲ ಬಂದ ವರ್ಷಗಳಲ್ಲಿ ಕರ್ನಾಟಕ ಮತ್ತು ತಮಿಳುನಾಡು ಯಾವ ಸಂಕಷ್ಟ ಸೂತ್ರ ಅನುಸರಿಸಬೇಕು ಎಂಬ ಸಂಗತಿ ಸ್ಪಷ್ಟವಾಗಿಲ್ಲ. ಜತೆಗೆ ಹೆಚ್ಚುವರಿ ನೀರನ್ನು ಯಾವ ರೀತಿ ಹಂಚಿಕೊಳ್ಳಬೇಕು ಎನ್ನುವುದನ್ನೂ ಹೇಳಿಲ್ಲ. ಮೇಕೆದಾಟು ಯೋಜನೆಯ ಸಮಸ್ಯೆಯ ಮೂಲ ಇಲ್ಲಿದೆ ಎಂದು ರಾಜಾರಾವ್ ವಿಶ್ಲೇಷಿಸಿದರು.

ಪ್ರಾಸ್ತಾವಿಕವಾಗಿ ಮಾತನಾಡಿದ ರಾ. ನಂ. ಚಂದ್ರಶೇಖರ, ಕೇವಲ ಪ್ರತಿಕ್ರಿಯಾತ್ಮಕವಾಗಿದ್ದ ಕನ್ನಡ ಹೋರಾಟವನ್ನು ನಿರಂತರ ಕ್ರಿಯಾಶೀಲತೆಯ ಮಟ್ಟಕ್ಕೆ ಕೊಂಡೊಯ್ದ ಕೀರ್ತಿ ಚಿದಾನಂದಮೂರ್ತಿ ಅವರಿಗೆ ಸಲ್ಲುತ್ತದೆ ಎಂದರು.

ಕಾರ್ಯಕ್ರಮದಲ್ಲಿ ಹಿರಿಯ ಕನ್ನಡ ಹೋರಾಟಗಾರ ರಾ.ನಂ.ಚಂದ್ರಶೇಖರ; ಸಂಘಟಕ ವ. ಚ. ಚನ್ನೇಗೌಡ, ಶಿಕ್ಷಣ ತಜ್ಞ ಪ್ರೊ. ಪಿ. ಕೃಷ್ಣ, ಸಂಶೋಧಕರಾದ ಡಾ.ಆರ್. ಶೇಷಶಾಸ್ತ್ರಿ ಮತ್ತು ಡಾ.ಸ್ಮಿತಾ ರೆಡ್ಡಿ ಉಪಸ್ಥಿತರಿದ್ದರು.ಪ್ರಾ. ಹ.ಉಪೇಂದ್ರ ಸ್ವಾಗತಿಸಿದರು. ಡಾ. ಸತ್ಯಮಂಗಲ ಮಹದೇವ್ ನಿರೂಪಿಸಿದರು.

ಪ್ರಜಾವಾಣಿ

ಸೋಮವಾರ • ಜನವರಿ 15, 2024

## ಚಿದಾನಂದಮೂರ್ತಿ ಸ್ಮರಣೆ ಕಾರ್ಯಕ್ರಮದಲ್ಲಿ ನೀರಾವರಿ ತಜ್ಞ ಕ್ಯಾಪ್ಟನ್ ರಾಜಾರಾವ್ ಬೇಸರ

# ‘ಕಾವೇರಿ ನೀರು: ನಿರಂತರ ಅನ್ಯಾಯ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಕಾವೇರಿ ನೀರಿನ ಹಕ್ಕಿನಲ್ಲಿ ರಾಜ್ಯಕ್ಕೆ ನಿರಂತರ ಅನ್ಯಾಯವಾಗುತ್ತಿದ್ದು, ಜಲ ವಿವಾದಗಳ ವಿಷಯದಲ್ಲಿ ಕರ್ನಾಟಕದಷ್ಟು ನತದೃಷ್ಟ ರಾಜ್ಯ ಇನ್ನೊಂದಿಲ್ಲ’ ಎಂದು ನೀರಾವರಿ ತಜ್ಞ ಕ್ಯಾಪ್ಟನ್ ರಾಜಾರಾವ್ ಬೇಸರ ವ್ಯಕ್ತಪಡಿಸಿದರು.

ಎಂ. ಚಿದಾನಂದಮೂರ್ತಿ ಸ್ಮರಣಾರ್ಥ ಕನ್ನಡ ಗೆಳೆಯರ ಬಳಗ ಮತ್ತು ಕರ್ನಾಟಕ ವಿಕಾಸ ರಂಗ ಜಂಟಿಯಾಗಿ ನಗರದಲ್ಲಿ ಹಮ್ಮಿಕೊಂಡ ಕಾರ್ಯಕ್ರಮದಲ್ಲಿ ‘ಕರ್ನಾಟಕದ ಜಲ ವಿವಾದಗಳು:ಪರಿಹಾರ’ ವಿಷಯದ ಬಗ್ಗೆ ಅವರು ಮಾತನಾಡಿದರು.

‘ಐತಿಹಾಸಿಕವಾಗಿ ನೋಡಿದರೆ ಕಾವೇರಿ ನೀರು ಹಂಚಿಕೆ ವಿವಾದದಲ್ಲಿ ನ್ಯಾಯವು ಕರ್ನಾಟಕದ ಪರವಾಗಿಯೇ ಇದೆ. ಆದರೆ, ಸುಪ್ರೀಂಕೋರ್ಟ್ ತೀರ್ಪಿನ ನಂತರವೂ ರಾಜ್ಯಕ್ಕೆ ಸಂಪೂರ್ಣ ನ್ಯಾಯ ಸಿಕ್ಕಿಲ್ಲ. ತಮಿಳುನಾಡು ಸಹಜವಾಗಿಯೇ ಹೆಚ್ಚು ಅಂತರ್ಜಲ ಹೊಂದಿದೆ. ಆದರೂ ನ್ಯಾಯಾಧಿಕರಣ ಮತ್ತು ನ್ಯಾಯಾಲಯಗಳು ಇದನ್ನು ಪರಿಗಣನೆಗೆ ತೆಗೆದುಕೊಂಡಿಲ್ಲ. ರಾಜ್ಯದ ಪರವಾಗಿ ವಾದಿಸಿದ ವಕೀಲರೂ ಪರಿಣಾಮಕಾರಿಯಾಗಿ ವಾದಿಸಿದ ಉದಾಹರಣೆಗಳಿಲ್ಲ’ ಎಂದು ಅಸಮಾಧಾನ ವ್ಯಕ್ತಪಡಿಸಿದರು.

**ಮುಖ್ಯಾಂಶಗಳು**

- ಸುಪ್ರೀಂಕೋರ್ಟ್ ತೀರ್ಪಿನ ನಂತರವೂ ರಾಜ್ಯಕ್ಕೆ ಸಂಪೂರ್ಣ ನ್ಯಾಯ ಸಿಕ್ಕಿಲ್ಲ
- ರಾಜ್ಯದ ಪರ ವಕೀಲರೂ ಪರಿಣಾಮಕಾರಿ ವಾದಮಾಡಿಲ್ಲ
- ಸಂಕಷ್ಟ ಸೂತ್ರ, ನೀರು ಹಂಚಿಕೆಯಲ್ಲಿ ಸ್ಪಷ್ಟತೆಯಿಲ್ಲ



ಕಾರ್ಯಕ್ರಮದಲ್ಲಿ ಕ್ಯಾಪ್ಟನ್ ರಾಜಾರಾವ್ ಅವರನ್ನು ಸನ್ಮಾನಿಸಲಾಯಿತು. ಶಿಕ್ಷಣ ತಜ್ಞ ವೂಡೇ ಪಿ. ಕೃಷ್ಣ, ಕರ್ನಾಟಕ ವಿಕಾಸ ರಂಗದ ಅಧ್ಯಕ್ಷ ವ.ಚ. ಚನ್ನೇಗೌಡ, ರಾ.ನಂ. ಚಂದ್ರಶೇಖರ, ಸ್ಮಿತಾ ರೆಡ್ಡಿ ಪಾಲ್ಗೊಂಡಿದ್ದರು

‘ಬರಗಾಲ ಬಂದ ವರ್ಷಗಳಲ್ಲಿ ಕರ್ನಾಟಕ ಮತ್ತು ತಮಿಳುನಾಡು ಎಂಬ ಸಂಗತಿ ಸ್ಪಷ್ಟವಾಗಿಲ್ಲ. ಹೆಚ್ಚುವರಿ ಯಾವ ಸಂಕಷ್ಟ ಸೂತ್ರ ಅನುಸರಿಸಬೇಕು ನೀರನ್ನು ಯಾವ ರೀತಿ ಹಂಚಿಕೊಳ್ಳಬೇಕು ಎನ್ನುವುದರ ಬಗ್ಗೆಯೂ ಸ್ಪಷ್ಟತೆಯಿಲ್ಲ. ಮೇಕೆದಾಟು ಯೋಜನೆಯ ಸಮಸ್ಯೆಯ ಮೂಲ ಇಲ್ಲಿದೆ’ ಎಂದು ವಿಶ್ಲೇಷಿಸಿದರು.

ಕನ್ನಡ ಗೆಳೆಯರ ಬಳಗದ ಸಂಚಾಲಕ ರಾ.ನಂ. ಚಂದ್ರಶೇಖರ, ‘ಕೇವಲ ಪ್ರತಿಕ್ರಿಯಾತ್ಮಕವಾಗಿದ್ದ ಕನ್ನಡ ಹೋರಾಟವನ್ನು ನಿರಂತರ ಕ್ರಿಯಾಶೀಲತೆಯ ಮಟ್ಟಕ್ಕೆ ಕೊಂಡೊಯ್ದ ಕೀರ್ತಿ ಚಿದಾನಂದಮೂರ್ತಿ ಅವರಿಗೆ ಸಲ್ಲುತ್ತದೆ. ಇತ್ತೀಚೆಗೆ ಸರ್ಕಾರ ಜಾರಿಗೆ ತಂದಿರುವ ಸಮಗ್ರ ಕನ್ನಡ ಭಾಷಾ ಕಾಯ್ದೆ ಕೂಡ ಚಿದಾನಂದಮೂರ್ತಿ ಅವರ ಚಿಂತನೆಯ ಮುಂದುವರಿದ ಭಾಗವೇ ಆಗಿದೆ. ಅವರ ಕನ್ನಡಪರ ಚಿಂತನೆಯು ಕೇವಲ ಕನ್ನಡ ಭಾಷೆ ಮಾತ್ರವಲ್ಲದೆ, ರಾಜ್ಯದ ನೀರಿನ ಹಕ್ಕು, ಉದ್ಯೋಗದ ಪಾಲು, ಕನ್ನಡ ವಿಶ್ವವಿದ್ಯಾಲಯ ಮುಂತಾದ ಆಯಾಮಗಳನ್ನು ಒಳಗೊಂಡಿತ್ತು’ ಎಂದು ಸ್ಮರಿಸಿದರು.

## ಡಾ.ಎಂ.ಚಿದಾನಂದಮೂರ್ತಿ ನೆನಪಿನ ಉಪನ್ಯಾಸ, ಗೌರವ ಕಾರ್ಯಕ್ರಮದಲ್ಲಿ ಕ್ಯಾ.ರಾಜಾರಾವ್

# ಕಾವೇರಿ ಮಧ್ಯಂತರ ಆಜ್ಞೆ ವೇಳೆಯೇ ಹೋರಾಟಕ್ಕಿಳಿದಿದ್ದ ಚಿಮೂ

**ಬೆಂಗಳೂರು:** ಕಾವೇರಿ ನದಿಯ ನೀರಿನಲ್ಲಿ ರಾಜ್ಯಕ್ಕೆ ಸಿಗಬೇಕಾದ ಪಾಲಿನ ಬಗ್ಗೆ ಸಂಶೋಧಕ ಡಾ. ಚಿದಾನಂದ ಮೂರ್ತಿ ಅವರು ನ್ಯಾಯಾಧಿಕರಣದ ಮಧ್ಯಂತರ ಆಜ್ಞೆ ಬಂದ ದಿನದಿಂದಲೇ ಎಚ್ಚೆತ್ತುಕೊಂಡು ಕೆಲಸ ಮಾಡಿದ ಧೀಮಂತ ಚಿಂತಕರಾಗಿದ್ದರು ಎಂದು ನೀರಾವರಿ ತಜ್ಞ ಕ್ಯಾಪ್ಟನ್ ರಾಜಾರಾವ್ ಹೇಳಿದ್ದಾರೆ.

ಕನ್ನಡ ಗೆಳೆಯರ ಬಳಗ ಮತ್ತು ಕರ್ನಾಟಕ ಕಾಸ ರಂಗ ಶನಿವಾರ ಶೇಷಾದ್ರಿಪುರ ಕಾಲೇಜಿನಲ್ಲಿ ಸಂಯುಕ್ತವಾಗಿ ಏರ್ಪಡಿಸಿದ್ದ 'ಡಾ.ಎಂ.ಚಿದಾನಂದಮೂರ್ತಿ ನೆನಪಿನ ಉಪನ್ಯಾಸ ಮತ್ತು ಗೌರವ ಕಾರ್ಯಕ್ರಮದಲ್ಲಿ ಮಾತನಾಡಿ, ಐತಿಹಾಸಿಕವಾಗಿ ನೋಡಿದರೆ ಕಾವೇರಿ ನೀರು ಹಂಚಿಕೆ ವಾದದಲ್ಲಿ ನ್ಯಾಯವು ಕರ್ನಾಟಕದ ಪರವಾಗಿಯೇ ಇದೆ. ಆದರೂ ಸುಪ್ರೀಂಕೋರ್ಟ್ ತೀರ್ಪಿನ ನಂತರವೂ ರಾಜ್ಯಕ್ಕೆ ಸಂಪೂರ್ಣ ನ್ಯಾಯ ಸಿಕ್ಕಿಲ್ಲ ಎಂದರು. ತಮಿಳುನಾಡು ಸಹಜವಾಗಿಯೇ ಹೆಚ್ಚು ಅಂತರ್ಜಲ ಹೊಂದಿದೆ. ಆದರೂ ನ್ಯಾಯಾಧಿಕರಣ ಮತ್ತು ನ್ಯಾಯಾಲಯಗಳು ಇದನ್ನು ಪರಿಗಣನೆಗೆ ತೆಗೆದುಕೊಂಡೇ ಇಲ್ಲ. ಇದರ ಜತೆಗೆ ರಾಜ್ಯದ ಪರವಾಗಿ ವಾದಿಸಿದ ನ್ಯಾಯವಾದಿಗಳು ಕೂಡ ತೀಕ್ಷ್ಣವಾಗಿ ವಾದಿಸಿದ ಉದಾಹರಣೆಗಳೇ ಇಲ್ಲ ಎಂದು ಅಸಮಾಧಾನ ವ್ಯಕ್ತಪಡಿಸಿದರು.



'ಡಾ.ಎಂ.ಚಿದಾನಂದಮೂರ್ತಿ ನೆನಪಿನ ಉಪನ್ಯಾಸ ಮತ್ತು ಗೌರವ ಕಾರ್ಯಕ್ರಮದ ಉದ್ಘಟನಾ ಸಮಾರಂಭದಲ್ಲಿ ಎಂದು ನೀರಾವರಿ ತಜ್ಞ ಕ್ಯಾಪ್ಟನ್ ರಾಜಾರಾವ್, ಡಾ.ಆರ್. ಶೇಷಶಾಸ್ತ್ರಿ ರಾ.ನಂ.ಚಂದ್ರಶೇಖರ, ಡಾ.ಸ್ಮಿತಾ ರೆಡ್ಡಿ ಮತ್ತಿತರರು ಇದ್ದರು.

> 1924ರ ಒಪ್ಪಂದವು ರಾಜ್ಯಕ್ಕೆ ಅನ್ಯಾಯ ಮಾಡಿದ್ದು ವಾಸ್ತವವಾಗಿದೆ. ಇನ್ನೊಂದೆಡೆಯಲ್ಲಿ ರಾಜ್ಯದ ಕಾವೇರಿ ಅಚ್ಚುಕಟ್ಟು ಪ್ರದೇಶದ ಕೈಯ ಚಾರದಲ್ಲಿ ನಮ್ಮ ಸರಕಾರಗಳು ಎಡವುತ್ತಲೇ ಬಂದಿವೆ. ಇನ್ನಾದರೂ ಎಚ್ಚೆತ್ತುಕೊಳ್ಳದಿದ್ದರೆ ಮುಂದೆ ಅಪಾಯ ಕಾದಿದೆ.
>
> **-ಕ್ಯಾಪ್ಟನ್ ರಾಜಾರಾವ್** ನೀರಾವರಿ ತಜ್ಞ

ಬರಗಾಲ ಬಂದ ವರ್ಷಗಳಲ್ಲಿ ಕರ್ನಾಟಕ ಮತ್ತು ತುಳುನಾಡು ಯಾವ ಸಂಕಷ್ಟ ಸೂತ್ರ ಅನುಸರಿಸಬೇಕು ಎಂಬ ಸಂಗತಿ ಸ್ಪಷ್ಟವಾಗಿಲ್ಲ. ಜತೆಗೆ ಹೆಚ್ಚುವರಿ ನೀರನ್ನು ಯಾವ ರೀತಿ ಹಂಚಿಕೊಳ್ಳಬೇಕು ಎನ್ನುವುದನ್ನೂ ಹೇಳಿಲ್ಲ. ಮೇಕೆದಾಟು ಯೋಜನೆಯ ಸಮಸ್ಯೆಯ ಮೂಲ ಇಲ್ಲಿದೆ ಎಂದು ಅವರು ವಿಶ್ಲೇಸಿದರು. ಸಂಘಟಕ ವ.ಚ.ಚನ್ನೇಗೌಡ, ಶಿಕ್ಷಣ ತಜ್ಞ ವೂಡೇ ಪಿ ಕೃಷ್ಣ, ಸಂಶೋಧಕರಾದ ಡಾ.ಆರ್.ಶೇಷಶಾಸ್ತ್ರಿ, ಡಾ. ಸ್ಮಿತಾ ರೆಡ್ಡಿ, ಬಾ.ಹ.ಉಪೇಂದ್ರ, ಮ.ಚಂದ್ರಶೇಖರ, ಡಾ. ಸತ್ಯಮಂಗಲ ಮಹದೇವ್ ಇದ್ದರು.

## ಎಲ್ಲ ಆಯಾಮಗಳಲ್ಲಿ ಚಿಮೂ ಚಿಂತನೆ

ಪ್ರಾಸ್ತಾಕವಾಗಿ ಮಾತನಾಡಿದ ಕನ್ನಡ ಹೋರಾಟಗಾರ ರಾ.ನಂ.ಚಂದ್ರಶೇಖರ, ಕೇವಲ ಪ್ರತಿಕ್ರಿಯಾತ್ಮಕವಾಗಿದ್ದ ಕನ್ನಡ ಹೋರಾಟವನ್ನು ನಿರಂತರ ಕ್ರಿಯಾಶೀಲತೆಯ ಮಟ್ಟಕ್ಕೆ ಕೊಂಡೊಯ್ದ ಕೀರ್ತಿ ಚಿದಾನಂದಮೂರ್ತಿ ಅವರಿಗೆ ಸಲ್ಲುತ್ತದೆ. ಇತ್ತೀಚೆಗೆ ಸರಕಾರವು ಜಾರಿಗೆ ತಂದಿರುವ ಸಮಗ್ರ ಕನ್ನಡ ಭಾಷಾ ಕಾಯಿದೆ ಕೂಡ ಚಿಮೂ ಅವರ ಚಿಂತನೆಯ ಮುಂದುವರಿದ ಭಾಗವೇ ಆಗಿದೆ. ಚಿಮೂ ಅವರ ಕನ್ನಡಪರ ಚಿಂತನೆಯ ಕೇವಲ ಕನ್ನಡ ಭಾಷೆ ಮಾತ್ರವಲ್ಲದೆ ರಾಜ್ಯದ ನೀರಿನ ಹಕ್ಕು, ಉದ್ಯೋಗದ ಪಾಲು, ಕನ್ನಡ ವಿಶ್ವವಿದ್ಯಾಲಯ, ಕಿತ್ತೂರು ಮತ್ತು ಕಲ್ಯಾಣ ಕರ್ನಾಟಕ ಮುಂತಾದ ಆಯಾಮಗಳನ್ನು ಒಳಗೊಂಡಿತ್ತು ಎಂದು ಅವರು ಸ್ಮರಿಸಿದರು.

## ಶೇಷಾದ್ರಿಪುರಂ ಪಪೂ ಕಾಲೇಜಿನ ಯುವ ದಿನಾಚರಣೆಯಲ್ಲಿ ನಾಡೋಜ ಡಾ. ಮೂಡೇ ಪಿ. ಕೃಷ್ಣ

# ಮಾನವ ಸಂಪನ್ಮೂಲ ಅಭಿವೃದ್ಧಿ ರಾಷ್ಟ್ರದ ಸಂಪತ್ತು

• ಪ್ರಜಾಪ್ರಗತಿ.ಕಾಂ



**ತುಮಕೂರು:** ಮಾನವ ಸಂಪನ್ಮೂಲದ ಅಭಿವೃದ್ಧಿಯೇ ನಿಜವಾದ ರಾಷ್ಟ್ರದ ಸಂಪತ್ತಾಗಿದೆ. ನಿಮ್ಮ ಸಾಧನೆ ಕೇವಲ ನಿಮ್ಮ ಸಾಧನೆಯಲ್ಲ, ಸಮಾಜದ ಸಾಧನೆಯಾಗಿದೆ. ವಿದ್ಯಾರ್ಥಿಗಳು ಅಧ್ಯಯನ ಮಾಡಬೇಕು. ಏಕಾಗ್ರತೆ ಹೊಂದುವ ಮೂಲಕ ಗುರಿಯನ್ನು ಮುಟ್ಟಬೇಕು ಎಂದು ನಾಡೋಜ ಡಾ. ಮೂಡೇ ಪಿ. ಕೃಷ್ಣ ಕರೆ ನೀಡಿದರು.

ಅವರು ನಗರದ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನಲ್ಲಿ 7 ನೆಯ ವಾರ್ಷಿಕೋತ್ಸವ, ಯುವ ದಿನಾಚರಣೆ ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದರು.

ಮಾತೃದೇವೋಭವ, ಪಿತೃದೇವೋಭವ, ಆಚಾರ್ಯದೇವೋಭವ, ಅತಿಥಿದೇವೋಭವ, ಎಂಬುದು ನಮ್ಮ ಸಂಸ್ಕೃತಿ, ಆದರೆ ಸ್ವಾಮಿ ವಿವೇಕಾನಂದರು ದರಿದ್ರ ದೇವೋಭವ, ಮೂರ್ಖದೇವೋಭವ, ಪಾಪಿ ದೇವೋಭವ, ಸಂಪತ್ತಿನಿಂದವಂಚಿರಾದವರಲ್ಲಿ, ದಡ್ಡರಲ್ಲಿ ಪಾಪಿಗಳಲ್ಲಿ ನಾವು ದೇವರನ್ನು ಕಾಣಬೇಕು ಎಂದವರು ಸ್ವಾಮಿ ವಿವೇಕಾನಂದರು. ಶಿಕ್ಷಣ ಎನ್ನುವುದು ಜೀವನದ ನಿರಂತರ ಕಲಿಕೆ. ಕ್ಷಣ ಕ್ಷಣ ಕಲಿಯುವುದೇ ಶಿಕ್ಷಣ. ನಾವೂ ಯಾವತ್ತಿಗೂ ಕೂಡ ವಿದ್ಯಾರ್ಥಿಗಳಾಗಿ ಬದುಕಬೇಕು. ಇಂದಿಗೆ ಮನುಷ್ಯ ನಿರ್ಮಾಣದ ಶಿಕ್ಷಣಬೇಕು, ರಾಷ್ಟ್ರ ನಿರ್ಮಾಣದ ಶಿಕ್ಷಣ ಬೇಕು. ಮನುಷ್ಯನನ್ನು ನಿರ್ಮಾಣ ಮಾಡಬೇಕಾಗಿದೆ.

ಕಾರ್ಯಕ್ರಮಕ್ಕೆ ಮುಖ್ಯ ಅತಿಥಿಗಳಾಗಿ ಬೆಂಗಳೂರಿನ ಸದಾಶಿವನಗರ ಯೂಥ್ ಅಸೋಸಿಯೇಷನ್ ಕಾಲೇಜಿನ ಸ್ಥಾಪಕ ಕಾರ್ಯದರ್ಶಿಗಳಾದ ಎಸ್. ವೀರಭದ್ರಯ್ಯನವರು ಮಾತನಾಡಿ, ಮಕ್ಕಳ ಏಳಿಗೆಗಾಗಿ ಶ್ರಮಿಸುವವರು ತಂದೆ ತಾಯಿಗಳು ಮಾತ್ರ. ಬೆಂಗಳೂರಿನ ಆಟೋ ಚಾಲಕ ಮಗನ ಓದಿಗಾಗಿ ಭಾನುವಾರವೂ ಕೆಲಸ ಮಾಡುತ್ತಿದ್ದ ಆ ತಂದೆಯ ತ್ಯಾಗ, ಪರಿಶ್ರಮದಿಂದ ಆತನ ಮಗ ವೈದ್ಯಕೀಯ ವಿದ್ಯಾರ್ಥಿಯಾದ ಘಟನೆಯನ್ನು ಉದಾಹರಿಸುತ್ತಾ, ತಂದೆ ತಾಯಿಯರ ಪರಿಶ್ರಮ ಮತ್ತು ಆಸೆಯನ್ನು ಪ್ರತಿ ಮಕ್ಕಳು ತಿಳಿದುಕೊಳ್ಳಬೇಕು ಎಂದರು.

ನಂತರ ಶೇಷಾದ್ರಿಪುರಂ ಪದವಿ ಕಾಲೇಜಿನ ಪ್ರಾಂಶುಪಾಲರಾದ ಡಾ. ಜಗದೀಶ ಜಿ ಟಿ ಅವರು ಮಾತನಾಡಿ, ಸಾರ್ಥಕತೆ ಎಂಬುದು ಪ್ರತಿಯೊಬ್ಬರ ಜೀವನಕ್ಕೂ ಭಿನ್ನವಾಗಿರುತ್ತದೆ. ವಿದ್ಯಾರ್ಥಿಗಳು ತಂದೆ ತಾಯಿಗಳ ಗುರಿ ಉದ್ದೇಶವನ್ನು ಅರ್ಥಮಾಡಿಕೊಂಡು ಸಾರ್ಥಕತೆಯೆಡೆಗೆ ಸಾಗಬೇಕು. ನಿಮ್ಮ ಜೀವನವನ್ನು ಉತ್ತಮ ರೀತಿಯಲ್ಲಿ ಕಟ್ಟಿಕೊಳ್ಳಿ ಎಂದರು. ಕಾರ್ಯಕ್ರಮದಲ್ಲಿ ಭಾನುಪ್ರಕಾಶ್ ಎಸ್ ಡಿ ಹಾಗೂ ಶೇಷಾದ್ರಿಪುರಂ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರಾದ ಪ್ರೋ.ಬಸವರಾಜು ಬಿ.ವಿ ಅವರು ಉಪಸ್ಥಿತರಿದ್ದರು.

ಶನಿವಾರ 13 ಜನವರಿ 2024
13 JANUARY 2024
VIJAYAVANI » BENGALURU

## ಶೇಷಾದ್ರಿಪುರಂ ಪಿಯು ಕಾಲೇಜು ವಾರ್ಷಿಕೋತ್ಸವದಲ್ಲಿ ವೂಡೇ ಪಿ.ಕೃಷ್ಣ ಹೇಳಿಕೆ

# ಮಾನವ ಸಂಪನ್ಮೂಲ ಅಭಿವೃದ್ಧಿಯೇ ರಾಷ್ಟ್ರದ ಸಂಪತ್ತು

**ತುಮಕೂರು :** ನಗರದ ಶೇಷಾದ್ರಿಪುರಂ ಪಿಯು ಕಾಲೇಜು 7ನೇ ವಾರ್ಷಿಕೋತ್ಸವ ಇತ್ತೀಚಿಗೆ ನಡೆಯಿತು. ದರಿದ್ರ ದೇವೋಭವ, ಮೂರ್ಖದೇವೋಭವ, ಪಾಪಿ ದೇವೋಭವ, ಸಂಪತ್ತಿನಿಂದ ವಂಚಿರಾದವರಲ್ಲಿ, ದಡ್ಡರಲ್ಲಿ ಪಾಪಿಗಳಲ್ಲಿ ದೇವರನ್ನು ಕಾಣಬೇಕು ಎಂದು ಸ್ವಾಮಿ ವಿವೇಕಾನಂದರು ತಿಳಿಸಿದ್ದಾರೆ ಎಂದು ನಾಡೋಜ ವೂಡೇ ಪಿ.ಕೃಷ್ಣ ಹೇಳಿದರು. ಶಿಕ್ಷಣ ಜೀವನದ ನಿರಂತರ ಕಲಿಕೆ. ಕ್ಷಣಕ್ಷಣ ಕಲಿಯುವುದೇ ಶಿಕ್ಷಣ, ನಾವೂ ಯಾವತ್ತಿಗೂ ವಿದ್ಯಾರ್ಥಿಗಳಾಗಿ ಬದುಕಬೇಕು. ಇಂದಿಗೆ ಮನುಷ್ಯ ನಿರ್ಮಾಣದ ಶಿಕ್ಷಣಬೇಕು, ರಾಷ್ಟ ನಿರ್ಮಾಣದ ಶಿಕ್ಷಣಬೇಕು ಮನುಷ್ಯನನ್ನು ನಿರ್ಮಾಣ ಮಾಡಬೇಕಾಗಿದೆ ಎಂದರು. ನಿಜವಾದ ಮಾನವ ಸಂಪನ್ಮೂಲದ ಅಭಿವೃದ್ಧಿಯೇ ರಾಷ್ಟ್ರದ ಸಂಪತ್ತಾಗಿದೆ, ನಿಮ್ಮ ಸಾಧನೆ ಕೇವಲ ನಿಮ್ಮ ಸಾಧನೆಯಲ್ಲ ಸಮಾಜದ ಸಾಧನೆಯಾಗಿದೆ. ಏಕಾಗ್ರತೆ ಹೊಂದುವ ಮೂಲಕ ಗುರಿ ಮುಟ್ಟಬೇಕು ಎಂದರು. ಯೂತ್ ಅಸೋಸಿಯೇಷನ್ ಕಾಲೇಜು ಸ್ಥಾಪಕ ಕಾರ್ಯದರ್ಶಿ ಎಸ್.ವೀರಭದ್ರಯ್ಯ, ಶೇಷಾದ್ರಿಪುರಂ ಪದವಿ ಕಾಲೇಜು ಪ್ರಾಚಾರ್ಯ ಡಾ.ಜಿ.ಟಿ.ಜಗದೀಶ, ಎಸ್.ಡಿ.ಭಾನುಪ್ರಕಾಶ್, ಪ್ರಾಚಾರ್ಯ ಬಿ.ವಿ.ಬಸವರಾಜು ಇದ್ದರು.




ತುಮಕೂರಿನ ಶೇಷಾದ್ರಿಪುರಂ ಪಿಯು ಕಾಲೇಜು 7ನೇ ವಾರ್ಷಿಕೋತ್ಸವದಲ್ಲಿ ಡಾ.ವೂಡೇ ಪಿ.ಕೃಷ್ಣ, ಎಸ್.ವೀರಭದ್ರಯ್ಯ, ಬಿ.ವಿ.ಬಸವರಾಜು ಮತ್ತಿತರರು ಇದ್ದರು.

ಉದಯವಾಣಿ ಬೆಂಗಳೂರು
ಶುಕ್ರವಾರ, ಜನವರಿ 12, 2024

# ಪೋಷಕರನ್ನು ಚೆನ್ನಾಗಿ ನೋಡಿಕೊಳ್ಳಿ: ಶೇಷಾದ್ರಿ

■ ಉದಯವಾಣಿ ಸಮಾಚಾರ

ಕೆಂಗೇರಿ: ಯಾವುದೇ ಕೆಲಸವನ್ನು ಮಾಡಬೇಕಾದರೂ ಶ್ರದ್ಧೆ ಆಸಕ್ತಿಯಿಂದ ಮಾಡಬೇಕಾಗಿದೆ ಎಂದು ಸರ್ ಎಂ. ವಿಶ್ವೇಶ್ವರಯ್ಯ ಅವರ ಮರಿ ಮೊಮ್ಮಗ ಶೇಷಾದ್ರಿ ಮೋಕ್ಷಗುಂಡಂ ತಿಳಿಸಿದರು.

ಕೆಂಗೇರಿ ಉಪನಗರದ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ 19ನೇ ವರ್ಷದ 'ಅನುಬಂಧ 2023-24 ವಾರ್ಷಿಕೋತ್ಸವ' ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ವಿದ್ಯಾರ್ಥಿಗಳು ದೇಶದ ಕೀರ್ತಿ ಪತಾಕಿಯನ್ನು ಮುಗಿಲೆತ್ತರಕ್ಕೆ ಹಾರಿಸುವ ಸಂಕಲ್ಪವನ್ನು ತೊಡಬೇಕು. ಶಿಕ್ಷಣ ಕಲಿಸಿದ ಶಾಲೆ -ಕಾಲೇಜಿನ ಶಿಕ್ಷಕರಿಗೆ ಗೌರವ ನೀಡಬೇಕು. ಪೋಷಕರನ್ನು ಚೆನ್ನಾಗಿ ನೋಡಿಕೊಂಡು ಉತ್ತಮ ಪ್ರಜೆಗಳಾಗಿ ಬಾಳಬೇಕು ಎಂದು ಸಲಹೆ ನೀಡಿದರು.

ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ. ವೂಡೇ ಪಿ. ಕೃಷ್ಣ ಮಾತನಾಡಿ, ವಿದ್ಯಾರ್ಥಿಗಳು ಸರ್ ಎಂ.ವಿಶ್ವೇಶ್ವರಯ್ಯನವರ ಬದ್ಧತೆ, ಶಿಸ್ತು, ನಡವಳಿಕೆಗಳನ್ನು ಮೈಗೂಡಿಸಿಕೊಂಡು ರಾಷ್ಟ್ರಕ್ಕೆ ತಮ್ಮದೇ ಆದ ಕೊಡುಗೆ ನೀಡಬೇಕು ಎಂದರು.

ಸಮಾರಂಭದಲ್ಲಿ ವಿದ್ಯಾರ್ಥಿಗಳು ಸಾಂಸ್ಕೃತಿಕ ಕಾರ್ಯಕ್ರಮ ನಡೆಸಿಕೊಟ್ಟರು. ವಿವಿಧ ಕ್ರೀಡೆಗಳಲ್ಲಿ ವಿಜೇತರಾದವರಿಗೆ ಬಹುಮಾನ ವಿತರಿಸಲಾಯಿತು. ಈ ವೇಳೆ ಶಿಕ್ಷಣ ದತ್ತಿಯ ಧರ್ಮದರ್ಶಿಗಳಾದ ಎಂ.ಎಸ್ .ನಟರಾಜು, ಬಿ.ಎ. ಅನಂತರಾಮು, ಕೆ.ಕೃಷ್ಣಸ್ವಾಮಿ, ಕಾಲೇಜಿನ ಆಡಳಿತ ಮಂಡಳಿ ಅಧ್ಯಕ್ಷ ಸಿ.ಪ್ರಶಾಂತ್ ಕುಮಾರ್, ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲ ಡಾ|ಆರ್.ಮಂಜುನಾಥ್, ಪದವಿ ಕಾಲೇಜಿನ ಪ್ರಾಂಶುಪಾಲ ಪ್ರೊ.ಜಯ ರಾಮ ಇತರರಿದ್ದರು.



ಕೆಂಗೇರಿ ಉಪನಗರದ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನಲ್ಲಿ ವಾರ್ಷಿಕೋತ್ಸವ' ಕಾರ್ಯಕ್ರಮ ನಡೆಯಿತು.



ಕನ್ನಡಪ್ರಭ

Jan 11, 2024


**ಶ್ಲಾಘನೀಯ** ನಿಷ್ಕಲ ಮಠದ ಶ್ರೀ ನಿಜಗುಣಾನಂದ ಸ್ವಾಮೀಜಿ ಶ್ಲಾಘನೆ | ಶಿವರಾತ್ರೀಶ್ವರ ಶಿವಯೋಗಿಗಳ ಜಯಂತಿ ಮಹೋತ್ಸವ

# ಲಿಂಗಾಯತ ಮಠಗಳು ಅನ್ನ, ಅಕ್ಷರ ದಾನ ನಡೆಸುತ್ತಿವೆ

• **ಕನ್ನಡಪ್ರಭ ವಾರ್ತೆ** ನಂಜನಗೂಡು

ರಾಜ್ಯದ ಲಿಂಗಾಯತ ಮಠಗಳು ಕೇವಲ ಗುಡಿ, ಗುಂಡಾರಗಳಿಗೆ ಮೀಸಲಾಗದೆ, ಮನುಕುಲದ ಉದ್ಧಾರಕ್ಕಾಗಿ ಶಾಲಾ ಕಾಲೇಜುಗಳನ್ನು ತೆರೆದು ಅನ್ನ, ಅಕ್ಷರ ದಾನವನ್ನು ನಡೆಸುತ್ತಿವೆ ಎಂದು ನಿಷ್ಕಲ ಮಠದ ಶ್ರೀ ನಿಜಗುಣಾನಂದ ಸ್ವಾಮೀಜಿ ಹೇಳಿದರು.

ತಾಲೂಕಿನ ಸುತ್ತೂರು ಶ್ರೀಮಠದ ಆವರಣದಲ್ಲಿ ಬುಧವಾರ ನಡೆದ ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳ 1064 ನೇಯ ಜಯಂತಿ ಮಹೋತ್ಸವದಲ್ಲಿ ಸನ್ಮಾನ ಸ್ವೀಕರಿಸಿ ಅವರು ಮಾತನಾಡಿದರು.

ಅನ್ನ, ಅರಿವು, ಆಶ್ರಯ ನೀಡಿ ಮನುಷ್ಯರನ್ನು ಮನುಷ್ಯರನ್ನಾಗಿ ಕಾಣುವುದೇ ಲಿಂಗಾಯತ ಧರ್ಮ ಇದಕ್ಕೆ ಬಸವಾದಿ ಶರಣರ ಸಂದೇಶಗಳೇ ಕಾರಣ, ಆಧ್ಯಾತ್ಮ ಮತ್ತು ಧರ್ಮದ ಕಡೆ ಬಂದಾಗ ಬಸವ ತತ್ವದಂತೆ ವ್ಯಸನಗಳನ್ನು ಬಿಟ್ಟು ಬದುಕು ಕಟ್ಟಿಕೊಳ್ಳಬಹುದಾಗಿದೆ. ಎಂದರಲ್ಲದೆ ಸುತ್ತೂರಿನ ರಾಜೇಂದ್ರ ಶ್ರೀಗಳು ತಮ್ಮ ಚಿನ್ನದ ಕರಡಿಗೆಯನ್ನು ವಿಕ್ರಯಿಸಿ ವಿದ್ಯಾರ್ಥಿಗಳ ಹೊಟ್ಟೆತುಂಬಿಸಿದ ಪುಣ್ಯಾತ್ಮರು, ಕೊರೋನಾ ಸಂಕಷ್ಟದ ಪರಿಸ್ಥಿತಿಯಲ್ಲಿ 2 ವರ್ಷಗಳ ಕಾಲ ನನ್ನ ಪ್ರವಚನ ಕಾರ್ಯಕ್ರಮಗಳು ನಿಂತು ಹೋಗಿ ಕಷ್ಟದ ಪರಿಸ್ಥಿತಿಯಲ್ಲಿದ್ದಾಗ, ಅನೇಕ ಸ್ವಾಮಿಜಿಗಳಿಗೆ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಆರ್ಥಿಕ ಸಹಾಯ ಮಾಡಿದ ಮಾತೃ ಹೃದಯಿಗಳು, ಶ್ರೀ ಮಠ ರಾಜ್ಯದಲ್ಲಿ ಜನ ಸಂಕಷ್ಟಕ್ಕೀಡಾದ ಪರಿಸ್ಥಿತಿಯಲ್ಲಿ ಸಹಾಯ ಹಸ್ತ ಚಾಚುವ ಮೂಲಕ ಹೃದಯ ವೈಶಾಲ್ಯ ಮೆರೆದಿದೆ ಎಂದು ಹೇಳಿದರು.



ನಂಜನಗೂಡಿನ ಸುತ್ತೂರು ಶ್ರೀಮಠದ ಆವರಣದಲ್ಲಿ ಬುಧವಾರ ನಡೆದ ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳ 1064 ನೆಯ ಜಯಂತಿ ಮಹೋತ್ಸವ ಕಾರ್ಯಕ್ರಮದಲ್ಲಿ ಪ್ರಶಸ್ತಿ ಪುರಸ್ಕೃತರನ್ನು ಸನ್ಮಾನಿಸಲಾಯಿತು, ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಇದ್ದಾರೆ.

ಪತ್ರಕರ್ತ ಕೆ.ಬಿ. ಗಣಪತಿ ಮಾತನಾಡಿ, 50 ವರ್ಷಗಳ ನನ್ನ ಪತ್ರಿಕೋದ್ಯಮ ಸೇವೆಯಲ್ಲಿ ಶ್ರೀ ಮಠ ಗುರುತಿಸಿ ಪ್ರೋತ್ಸಾಹಿಸಿದೆ, ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಶ್ರೀರಂಗಪಟ್ಟಣದ ಬಳಿಯ ಹಳ್ಳಿಯಲ್ಲಿ ಜೀತ ಪದ್ಧತಿಯಿಂದ ನಲುಗಿದವರ ಮಕ್ಕಳು ದಿಕ್ಕ ತೋಚದ ಪರಿಸ್ಥಿತಿಯಲ್ಲಿದ್ದಾಗ, ಆ ಮಕ್ಕಳಿಗೆ ತಮ್ಮ ಮಠದಲ್ಲಿ ಉಚಿತ ಶಿಕ್ಷಣ, ಆಹಾರ, ಆಶ್ರಯದ ವ್ಯವಸ್ಥೆ ಮಾಡುವ ಮೂಲಕ ಬದುಕಿನ ದಾರಿ ತೋರಿದ್ದರು. ಈ ರೀತಿಯ ಅನೇಕ ಸೇವಾ ಕಾರ್ಯಗಳು ಶ್ರೀಮಠದಿಂದ ನಡೆಯುತ್ತಿವೆ ಎಂದು ಹೇಳಿದರು.

ನಾಡೋಜ ಪ್ರಶಸ್ತಿ ಪುರಸ್ಕೃತ ರಮಣಶ್ರೀ ಪ್ರತಿಷ್ಠಾನ ಹಾಗೂ ಸಮೂಹ ಸಂಸ್ಥೆಯ ಅಧ್ಯಕ್ಷ ಎಸ್. ಷಡಕ್ಷರಿ, ಗೌರವ ಡಾಕ್ಟರೇಟ್ ಪುರಸ್ಕೃತರಾದ ಮಾಜಿ ಕ್ರಿಕೆಟಿಗ ಜಾವಗಲ್ ಶ್ರೀನಾಥ್, ಅರವಿಂದಜತ್ತಿ, ಕೆ.ಬಿ. ಗಣಪತಿ, ವ್ಯಾಡೇ ಪಿ. ಕೃಷ್ಣ, ಪ್ರಸಕ್ತ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ನಿಷ್ಕಲ ಮಂಟಪದ ನಿಜಗುಣಾನಂದ ಸ್ವಾಮೀಜಿ, ಬೆಂಗಳೂರಿನ ಮಿಥಿಕ್ ಸೊಸೈಟಿ, ಡಾ.ಸಿ. ರಾಮಚಂದ್ರ, ಕೆ.ಟಿ. ಚಂದು, ಪ್ರೊ.ಸಿ. ನಾಗಣ್ಣ, ಡಾ. ಕಬ್ಬಿನಾಲೆ ವಸಂತ ಭಾರದ್ವಾಜ್, ಪಿ. ಗಂಗಾಧರಸ್ವಾಮಿ, ಮಹದೇವು, ಗ್ವರಯ್ಯ, ಜವರಪ್ಪ ಅವರನ್ನು ಶ್ರೀಮಠದ ವತಿಯಿಂದ ಸನ್ಮಾನಿಸಿತು.

ಜ್ಯೋತಿಷಿ ಡಾ. ಕೆ.ಜಿ. ಪುಟ್ಟಹೊನ್ನಯ್ಯ ಅವರು ಸಿದ್ಧಪಡಿಸಿ ಭಾರತೀಯ ಜ್ಯೋತಿರ್ವಿಜ್ಞಾನ ಸಂಶೋಧನಾ ಕೇಂದ್ರದಿಂದ ಪ್ರಕಟಿಸಿರುವ ಶ್ರೀ ಕ್ರೋಧಿ ಸಂವತ್ಸರದ ಸುತ್ತೂರು ಶ್ರೀ ಶಿವರಾತ್ರೀಶ್ವರ ಪಂಚಾಂಗ' ಮತ್ತು ಜೆಎಸ್ ಎಸ್ ಮಹಾ ವಿದ್ಯಾಪೀಠದ ಕನ್ನಡ ಮತ್ತು ಇಂಗ್ಲಿಷ್ ಟೇಬಲ್ ಕ್ಯಾಲೆಂಡರ್‌ಬಿಡುಗಡೆ ಮಾಡಲಾಯಿತು. ಇನ್ನು ಬೆಂಗಳೂರಿನ ಶ್ರೀ ಚೈತನ್ಯ ಶಾಲೆಯ ವಿದ್ಯಾರ್ಥಿನಿ ಕೆ. ನೇತ್ರಾ ಪರ್ಲ್ ನ್ ಅವರು ರಚಿಸಿರುವ ಒನ್ ಮೈಂಡ್ ಗೇಮ್ ಕೃತಿ ಲೋಕಾರ್ಪಣೆಗೊಳಿಸಲಾಯಿತು.

ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಸಾನ್ನಿಧ್ಯ ವಹಿಸಿದ್ದರು. ಮಾಜಿ ಸಂಸದ ಕಾಗಲವಾಡಿ ಶಿವಣ್ಣ, ನಿವೃತ್ತ ಐಎಎಸ್ ಅಧಿಕಾರಿ ಚಂದ್ರಶೇಖರ್‌ಇದ್ದರು.

ಇದಕ್ಕೂ ಮುನ್ನ ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವ ಅಂಗವಾಗಿ ಆಕರ್ಷಕ ಕಲಾತಂಡಗಳ ಮೆರವಣಿಗೆಯೊಂದಿಗೆ ಉತ್ಸವಮೂರ್ತಿಯ ಮೆರವಣಿಗೆ ನಡೆಯಿತು. ನಂತರ ವಿವಿಧ ಮಠಗಳ ಮಠಾಧೀಶರು, ಹರಗುರು ಚರಮೂರ್ತಿಗಳ ಅಲಂಕೃತ ಸಾರೋಟ್ನಲ್ಲಿ ಉತ್ಸವಮೂರ್ತಿಯನ್ನು ಪ್ರತಿಷ್ಠಾಪಿಸಿ ಗದ್ದುಗೆಯಿಂದ ಶ್ರೀಮಠಕ್ಕೆ ಮೆರವಣಿಗೆ ಮೂಲಕ ಕರೆದುಕೊಂಡು ಹೋಗಲಾಯಿತು.

ಡಾ. ಕಬ್ಬಿನಾಲೆ ವಸಂತ ಭಾರದ್ವಾಜ್. ಪಿ. ಗಂಗಾಧರ ಸ್ವಾಮಿ, ಪ್ರೊ.ಸಿ. ನಾಗಣ್ಣ, ಡಾ.ಸಿ. ರಾಮಚಂದ್ರ, ಪಿ. ಗಂಗಾಧರ ಸ್ವಾಮಿ, ಪ್ರೊ. ಕೃಷ್ಣೇಗೌಡ ಇದ್ದರು.

ಆಂದೋಲನ

Jan 11, 2024

# ‘ತ್ರಿವಿಧ ದಾಸೋಹವೇ ಶರಣ ಧರ್ಮದ ಗುರಿ’

## ಸುತ್ತೂರಿನಲ್ಲಿ ನಡೆದ ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿಯಲ್ಲಿ ನಿಜಗುಣಾನಂದ ಸ್ವಾಮೀಜಿ ಬಣ್ಣನೆ

ನಂಜನಗೂಡು: ಹಸಿದವರಿಗೆ ಅನ್ನ, ಅರಿವು, ಆಶ್ರಯ ನೀಡಿ ಅವರನ್ನು ಮನುಷ್ಯರನ್ನಾಗಿ ರೂಪಿಸುವುದೇ ಲಿಂಗಾಯತ ಧರ್ಮದ ಗುರಿ ಎಂದು ಬೈಲೂರು ನಿಷ್ಕಲ್ಮಶ ಮಂಟಪ ಮಠಾಧ್ಯಕ್ಷ ಶ್ರೀ ನಿಜಗುಣಾನಂದ ಸ್ವಾಮೀಜಿ ಹೇಳಿದರು.

ತಾಲ್ಲೂಕಿನ ಸುತ್ತೂರು ಶ್ರೀ ವೀರಸಿಂಹಾಸನ ಮಹಾ ಸಂಸ್ಥಾನ ಮಠದಲ್ಲಿ ಬುಧವಾರ ನಡೆದ ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವ ಕಾರ್ಯಕ್ರಮದಲ್ಲಿ ಅವರು ಮಾತನಾಡಿದರು.

ಶರಣ ಧರ್ಮವನ್ನು ಪರಿಪಾಲನೆ ಮಾಡುತ್ತಿರುವ ಲಿಂಗಾಯತ ಧರ್ಮದ ಮಠಗಳು ರಾಜ್ಯದೆಲ್ಲೆಡೆ ಶಿಕ್ಷಣ, ಅನ್ನ ಆಶ್ರಯವನ್ನು ನೀಡುವ ಮೂಲಕ ಕೋಟ್ಯಂತರ ಜನರ ಜೀವನದ ಬದುಕಿಗೆ ಬೆಳಕಾಗಿವೆ ಎಂದು ಹೇಳಿದರು.

ಇಂದಿನ ದಿನಗಳಲ್ಲಿ ಹೇಗೆ ಪಿಜಿ ಎಂದು ಕರೆಯುತ್ತೇವೆಯೋ ಹಾಗೆಯೇ ಹಿಂದಿನ ಕಾಲದಲ್ಲಿ ಮಠಗಳು ವಿದ್ಯಾರ್ಥಿಗಳಿಗೆ ಆಶ್ರಯ ನೀಡುತ್ತಿದ್ದವು. ಇದಕ್ಕೆ ಬಸವಾದಿ ಶರಣರ ಸಂದೇಶಗಳೇ ಕಾರಣ ಎಂದರು.

ಕೋವಿಡ್ ಸಂದರ್ಭದಲ್ಲಿ ಪ್ರವಚನಗಳೇ ಇಲ್ಲದೆ ಸಂಕಷ್ಟದಲ್ಲಿದ್ದ ರಾಜ್ಯದ ನೂರಾರು ಮಠಗಳ ನೆರವಿಗೆ ಬಂದಿದ್ದು ಸುತ್ತೂರು ಮಠ ಎಂದು ಸ್ಮರಿಸಿದ ಅವರು, ನಮಗೆಲ್ಲ ಸಾಕಷ್ಟು ಆರ್ಥಿಕ ನೆರವು ನೀಡುವ ಮೂಲಕ ಸುತ್ತೂರು ಮಠದ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಬಸವಾದಿ ಪರಂಪರೆಯನ್ನು ಮುಂದುವರಿಸಿದ್ದನ್ನು ಯಾರೂ ಮರೆಯುವಂತಿಲ್ಲ ಎಂದು ಹೇಳಿದರು.

ಬಸವಣ್ಣನವರನ್ನು ರಾಜ್ಯದ ಸಾಂಸ್ಕೃತಿಕ ರಾಯಭಾರಿ ಎಂದು ಘೋಷಣೆ ಮಾಡುವಲ್ಲಿ ಸುತ್ತೂರು ಶ್ರೀಗಳ ಸದುದ್ದೇಶದ ಕೊಡುಗೆಯನ್ನು ಕಾಣಬಹುದಾಗಿದೆ ಎಂದು ಅವರು ಹೇಳಿದರು.

ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತ, ಕ್ಯಾನ್ಸರ್ ತಜ್ಞ ಡಾ.ಸಿ.ರಾಮಚಂದ್ರ ಮಾತನಾಡಿ, ಚಿಕ್ಕ ಮಕ್ಕಳಲ್ಲೇ ಹೆಚ್ಚು ಬೊಜ್ಜು ಕಾಣಿಸಿಕೊಳ್ಳುತ್ತಿರುವುದರಿಂದ ಅದು ಕ್ಯಾನ್ಸರ್‌ಗೆ ಕಾರಣವಾಗುತ್ತಿದೆ. ತಂಬಾಕು ಸೇವನೆಯಿಂದ ಕ್ಯಾನ್ಸರ್ ಜತೆಗೆ ಹೃದಯ ಸಂಬಂಧಿ ಕಾಯಿಲೆಯೂ ಬರುತ್ತಿದೆ. ಸಣ್ಣ ಮಕ್ಕಳಲ್ಲಿ ರಕ್ತ ಕ್ಯಾನ್ಸರ್ ಕೂಡ ಕಾಣಿಸಿ ಕೊಳ್ಳುತ್ತಿರುವುದು ಆಘಾತಕಾರಿ ಅಂಶವಾಗಿದೆ. ಇದಕ್ಕೆಲ್ಲಾ ನಮ್ಮವರು ರೂಢಿಸಿ ಕೊಳ್ಳುತ್ತಿರುವ ಪಾಶ್ಚಾತ್ಯ ಆಹಾರ ಶೈಲಿಯೇ ಕಾರಣ ಎಂದರು.

ನಾವು ನಮ್ಮ ಆಹಾರ ಪದ್ಧತಿಯಿಂದ ದೂರವಾದರೆ ಮುಂದೆ ಅಪಾಯ ಕಾದಿದೆ ಎಂದು ಸ್ವತಃ ಕ್ಯಾನ್ಸರ್ ತಜ್ಞರಾದ ಡಾ.ರಾಮಚಂದ್ರ ಎಚ್ಚರಿಕೆ ನೀಡಿದರು.

ಸನ್ಮಾನ: ನಾಡೋಜ ಪ್ರಶಸ್ತಿ ಪುರಸ್ಕೃತ ರಮಣಶ್ರೀ ಪ್ರತಿಷ್ಠಾನ ಹಾಗೂ ಸಮೂಹ ಸಂಸ್ಥೆಯ ಅಧ್ಯಕ್ಷ ಎಸ್. ಷಡಕ್ಷರಿ, ಗೌರವ ಡಾಕ್ಟರೇಟ್ ಪುರಸ್ಕೃತರಾದ ಮಾಜಿ ಕ್ರಿಕೆಟಿಗ ಜಾವಗಲ್ ಶ್ರೀನಾಥ್, ಅರವಿಂದ ಜತ್ತಿ, ಕೆ.ಬಿ.ಗಣಪತಿ, ವೂಡೇ ಪಿ.ಕೃಷ್ಣ, ಪ್ರಸಕ್ತ ಸಾಲಿನ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರಾದ ನಿಷ್ಕಲ್ಮಶ ಮಂಟಪದ ನಿಜಗುಣಾನಂದ ಸ್ವಾಮೀಜಿ, ಬೆಂಗಳೂರಿನ ಮಿಥಿಕ್ ಸೊಸೈಟಿಯ ಡಾ.ಸಿ.ರಾಮಚಂದ್ರ, ಕೆ.ಟಿ.ಚಂದು, ಪ್ರೊ.ಸಿ.ನಾಗಣ್ಣ, ಡಾ.ಕಬ್ಬಿನಾಲೆ ವಸಂತ ಭಾರದ್ವಾಜ್, ಪಿ.ಗಂಗಾಧರಸ್ವಾಮಿ, ಮಹದೇವು, ಜವರಪ್ಪ ಅವರನ್ನು ಶ್ರೀಮಠದ ವತಿಯಿಂದ ಸನ್ಮಾನಿಸಿ ಗೌರವಿಸಲಾಯಿತು.

ಇದೇ ಸಂದರ್ಭದಲ್ಲಿ ಜ್ಯೋತಿಷಿ ಡಾ.ಕೆ.ಜಿ.ಪುಟ್ಟ ಹೊನ್ನಯ್ಯ ಅವರು ಸಿದ್ಧಪಡಿಸಿ ಭಾರತೀಯ ಜ್ಯೋತಿರ್ವಿಜ್ಞಾನ ಸಂಶೋಧನಾ ಕೇಂದ್ರದಿಂದ ಪ್ರಕಟಿಸಿರುವ ಸುತ್ತೂರು ಶ್ರೀ ಶಿವರಾತ್ರೀಶ್ವರ ಪಂಚಾಂಗ ಮತ್ತು ಜೆಎಸ್ಎಸ್ ಮಹಾವಿದ್ಯಾಪೀಠದ ಕನ್ನಡ ಮತ್ತು ಇಂಗ್ಲಿಷ್ ಟೇಬಲ್ ಕ್ಯಾಲೆಂಡರ್ ಹಾಗೂ ಬೆಂಗಳೂರಿನ ಶ್ರೀ ಚೈತನ್ಯ ಶಾಲೆಯ ವಿದ್ಯಾರ್ಥಿನಿ ಕೆ. ನೇತ್ರಾ ಪರ್ಸನ್ ಅವರು ರಚಿಸಿರುವ ‘ಒನ್ ಮೈಂಡ್ ಗೇಮ್’ ಕೃತಿಯನ್ನು ಲೋಕಾರ್ಪಣೆಗೊಳಿಸಲಾಯಿತು.

ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಮಾಜಿ ಸಂಸದ ಕಾಗಲವಾಡಿ ಎಂ. ಶಿವಣ್ಣ, ನಿವೃತ್ತ ಐಎಎಸ್ ಅಧಿಕಾರಿ ಚಂದ್ರಶೇಖರ್ ಸಮಾರಂಭದಲ್ಲಿ ಉಪಸ್ಥಿತರಿದ್ದರು.



ನಂಜನಗೂಡು ತಾಲ್ಲೂಕಿನ ಸುತ್ತೂರಿನಲ್ಲಿ ಆದಿ ಜಗದ್ಗುರು ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವದ ಅಂಗವಾಗಿ ನಾಡೋಜ, ಗೌರವ ಡಾಕ್ಟರೇಟ್ ಹಾಗೂ ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರನ್ನು ಸನ್ಮಾನಿಸಲಾಯಿತು.



ಸುತ್ತೂರು ಮಠಕ್ಕೆ ಜಾವಗಲ್ ಶ್ರೀನಾಥ್ ಭೇಟಿ... ಮೈಸೂರು ಜಿಲ್ಲೆ ನಂಜನಗೂಡು ತಾಲ್ಲೂಕಿನಲ್ಲಿರುವ ಸುತ್ತೂರು ಮಠಕ್ಕೆ ಮಾಜಿ ಕ್ರಿಕೆಟಿಗ ಜಾವಗಲ್ ಶ್ರೀನಾಥ್ ಭೇಟಿ ನೀಡಿ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ ಅವರ ಆಶೀರ್ವಾದ ಪಡೆದರು.

### ಮೆರವಣಿಗೆ

ಆದಿಜಗದ್ಗುರು ಶ್ರೀ ಶಿವರಾತ್ರಿ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವದ ಅಂಗವಾಗಿ ಆಕರ್ಷಕ ಕಲಾತಂಡಗಳ ಮೆರವಣಿಗೆಯೊಂದಿಗೆ ಉತ್ಸವಮೂರ್ತಿಯ ಮೆರವಣಿಗೆ ನಡೆಯಿತು. ನಂತರ ವಿವಿಧ ಮಠಗಳ ಮಠಾಧೀಶರು, ಹರಗುರು ಚರಮೂರ್ತಿಗಳು ಅಲಂಕೃತ ಸಾರೋಟಿನಲ್ಲಿ ಉತ್ಸವಮೂರ್ತಿಯನ್ನು ಪ್ರತಿಷ್ಠಾಪಿಸಿ ಗದ್ದುಗೆಯಿಂದ ಶ್ರೀಮಠಕ್ಕೆ ಮೆರವಣಿಗೆ ಮೂಲಕ ಬರಮಾಡಿಕೊಂಡರು.

### ವಿವಿಧ ಪೂಜಾ ಕಾರ್ಯಕ್ರಮ

ಬುಧವಾರ ಬೆಳಗ್ಗೆಯಿಂದಲೇ ಕರ್ತೃ ಗದ್ದುಗೆಯಲ್ಲಿ ರುದ್ರಾಭಿಷೇಕ, ಸಹಸ್ರನಾಮಾವಳಿ, ಶಿವಾಷ್ಟೋತ್ತರ ಶಿವರಾತ್ರೀಶ್ವರ ಅಷ್ಟೋತ್ತರ ಸೇರಿದಂತೆ ವಿಶೇಷ ಧಾರ್ಮಿಕ ಕಾರ್ಯಕ್ರಮಗಳು ಜರುಗಿದವು. ಶಿವರಾತ್ರಿ ಶಿವಯೋಗಿಗಳ ಉತ್ಸವಮೂರ್ತಿಗೆ ಷೋಡಶೋಪಚಾರ ಪೂಜೆ ನೆರವೇರಿಸಲಾಯಿತು.

ಸಂಯುಕ್ತ ಕರ್ನಾಟಕ

Mar 24, 2024

# ನೀರಿಗೆ ತೀವ್ರ ಸಂಕಷ್ಟ — ವಿಜ್ಞಾನಿ ಡಾ. ಟಿ.ವಿ. ರಾಮಚಂದ್ರರಾವ್ ಕಳವಳ



ಕರ್ನಾಟಕ ನೆಲ-ಜಲ-ಸಂರಕ್ಷಣಾ ಸಮಿತಿ ವತಿಯಿಂದ ನಗರದ ಗಾಂಧಿ ಭವನದಲ್ಲಿ ನೀರಿನ ಸಮಸ್ಯೆ ಕುರಿತು ಹಮ್ಮಿಕೊಂಡಿದ್ದ ಚಿಂತನ-ಮಂಥನ ಕಾರ್ಯಕ್ರಮವನ್ನು ಪರಿಸರ ವಿಜ್ಞಾನಿ ಡಾ.ಟಿ.ವಿ ರಾಮಚಂದ್ರರಾವ್ ಹಾಗೂ ಮುಖ್ಯಮಂತ್ರಿ ಚಂದ್ರು ಉದ್ಘಾಟಿಸಿದರು.

## , .ೀರಿಗೆ ಆಕ್ರಂದನ

ಕರ್ನಾಟಕ ನೆಲ-ಜಲ ಸಂರಕ್ಷಣಾ ಸಮಿತಿ ಸಂಚಾಲಕ ಕುರುಬೂರು ಶಾಂತಕುಮಾರ್ ಮಾತನಾಡಿ, ಕುಡಿಯುವ ನೀರಿಗೆ ಹಾಹಾಕಾರ ಎದುರಾಗಿದೆ. ಉತ್ತರ ಕರ್ನಾಟಕದಲ್ಲಿ ಭೀಮಾ, ಕೃಷ್ಣಾ, ಘಟಪ್ರಭಾ, ಮಹದಾಯಿ, ಕಾವೇರಿ ನದಿಗಳಿಂದ ನೀರು ಹರಿಸುವಂತೆ ರೈತರು ಆಕ್ರಂದನ ಮಾಡುತ್ತಿದ್ದಾರೆ. ಬೆಂಗಳೂರಿನಲ್ಲಿ ವಾರಕ್ಕೊಮ್ಮೆ ನೀರು ಸಿಗುವಂತಾಗಿದೆ. ಇಂಥ ಸ್ಥಿತಿಯಲ್ಲಿ ಮೇಕೆದಾಟು ಕುಡಿಯುವ ನೀರಿನ ಯೋಜನೆಯನ್ನು ಸ್ಥಗಿತಗೊಳಿಸುವ ಡಿಎಂಕೆ ಚುನಾವಣಾ ಪ್ರಣಾಳಿಕೆ ಏಕೆ ಬೇಕು. ಚುನಾವಣಾ ಆಯೋಗ ಡಿಎಂಕೆ ಪಕ್ಷದ ವಿರುದ್ಧ ಕಠಿಣ ಕ್ರಮ ಕೈಗೊಳ್ಳಲಿ. ರಾಜ್ಯ ಸರ್ಕಾರ ಚುನಾವಣಾ ಆಯೋಗಕ್ಕೆ ಕ್ರಮ ಕೈಗೊಳ್ಳುವಂತೆ ದೂರು ಸಲ್ಲಿಸಬೇಕು ಎಂದರು

ದಾಕ್ಷಾಯಿಣಿ ಮಾತನಾಡಿ, ಬೆಂಗಳೂರು ಕುಡಿಯುವ ನೀರಿನ ಸಮಸ್ಯೆ ನಿವಾರಣೆಗೆ ಕಾಲ್ ಸೆಂಟರ್ ಫಾರ್ ವಾಟರ್ 9551261154 ಆರಂಭಿಸಲಾಗಿದೆ. ಯಾರು ಬೇಕಾದರೂ ಸಂಪರ್ಕಿಸಿ ನೀರಿನ ಉಪಯುಕ್ತ ಬಳಕೆಯ ಬಗ್ಗೆ ಮರು ಸಂಸ್ಕರಣೆ ಬಗ್ಗೆ ಅರಿವು ಮೂಡಿಸುತ್ತೇವೆ ಎಂದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೆ.ಪಿ ಕೃಷ್ಣ ಮಾತನಾಡಿ ಕಾವೇರಿ ನೀರಿನ ಸಮಸ್ಯೆ ಬೆಂಗಳೂರು ಕುಡಿಯುವ ನೀರಿನ ಸಮಸ್ಯೆಗೆ ಮೂಲ ಯಾವುದ ಎಂದು ಬಹುತೇಕ ಜನರಿಗೆ ಗೊತ್ತೇ ಇಲ್ಲ ನೀರು ಬಳಕೆಯ ಬಗ್ಗೆ ಶಿಕ್ಷಣ ಸಂಸ್ಥೆಗಳಲ್ಲಿ ಮಕ್ಕಳಿಗೂ ಅರಿವು ಮೂಡಿಸುವ ಕಾರ್ಯವಾಗಬೇಕು ಎಂದರು. ಶಿಕ್ಷಣ ತಜ್ಞ ಡಾ. ವಿ. ಪಿ. ನಿರಂಜನಾರಾಧ್ಯ ಸೇರಿದಂತೆ ಸಮಿತಿಯ ಮುಖಂಡರು ಮತ್ತಿತರರು ಉಪಸ್ಥಿತರಿದ್ದರು.

### ಸುತ್ತೂರು ಮಠದ ಸಂಸ್ಥಾಪಕರಾದ ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವದ ಸುಸಂದರ್ಭದಲ್ಲಿ

# ಸುತ್ತೂರು ಶ್ರೀಗಳಿಂದ ವಿವಿಧ ಪದವಿ, ಪ್ರಶಸ್ತಿ ಪುರಸ್ಕೃತರಿಗೆ ಸನ್ಮಾನ



ನಂಜನಗೂಡು ತಾಲೂಕಿನ ಸುತ್ತೂರು ಶ್ರೀ ಕ್ಷೇತ್ರದಲ್ಲಿ ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವದ ಅಂಗವಾಗಿ ವಿವಿಧ ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್ ಪುರಸ್ಕೃತರು ಮತ್ತು ರಾಜ್ಯ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಪಡೆದ ಸಾಧಕರನ್ನು ಸುತ್ತೂರು ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿಯವರು ಸನ್ಮಾನಿಸಿದರು. ಚಿತ್ರದಲ್ಲಿ ಸನ್ಮಾನಿತರಾದ (ಕುಳಿತಿರುವವರು–ಎಡದಿಂದ): 'ಮೈಸೂರು ಮಿತ್ರ' ಮತ್ತು 'ಸ್ಟಾರ್ ಆಫ್ ಮೈಸೂರ್' ಸಂಸ್ಥಾಪಕ ಸಂಪಾದಕರಾದ ಡಾ.ಕೆ.ಬಿ.ಗಣಪತಿ (ಮೈಸೂರು ವಿವಿ ಗೌರವ ಡಾಕ್ಟರೇಟ್ ಪುರಸ್ಕೃತರು), ಬಸವ ಸಮಿತಿ ಅಧ್ಯಕ್ಷ ಅರವಿಂದ ಜತ್ತಿ (ಧಾರವಾಡ ಕರ್ನಾಟಕ ವಿವಿ ಗೌರವ ಡಾಕ್ಟರೇಟ್), ತೋಂಟದಾರ್ಯ ಮಠದ ಶ್ರೀ ನಿಜಗುಣಾನಂದ ಸ್ವಾಮೀಜಿ (ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು), ಶಿಕ್ಷಣ ತಜ್ಞ ಡಾ.ವುಡೇ ಪಿ.ಕೃಷ್ಣ (ಗೌರವ ಡಾಕ್ಟರೇಟ್) ಮತ್ತು ಎಸ್.ಷಡಕ್ಷರಿ (ನಾಡೋಜ ಪ್ರಶಸ್ತಿ ಪುರಸ್ಕೃತರು), ನಿಂತಿರುವವರು (ಎಡದಿಂದ): ಡಾ.ಕಬ್ಬಿನಾಲೆ ವಸಂತ ಭಾರದ್ವಾಜ್ (ರಾಜ್ಯೋತ್ಸವ ಪ್ರಶಸ್ತಿ), ಬೆಂಗಳೂರು ಮೈಥಿಕ್ ಸೊಸೈಟಿಯ ವಿ.ನಾಗರಾಜ್ (ರಾಜ್ಯೋತ್ಸವ ಪ್ರಶಸ್ತಿ), ಸುತ್ತೂರು ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿ, ಕಿದ್ವಾಯಿ ನಿವೃತ್ತ ನಿರ್ದೇಶಕ ಡಾ.ಸಿ.ರಾಮಚಂದ್ರ (ರಾಜ್ಯೋತ್ಸವ ಪ್ರಶಸ್ತಿ), ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ಸಿ.ಸೋಮಶೇಖರ್ (ಸನ್ಮಾನ ಸಮಾರಂಭದ ಅಧ್ಯಕ್ಷತೆ ವಹಿಸಿದ್ದವರು) ಮತ್ತು ಮೈಸೂರು ವಿವಿ ಪ್ರಸಾರಾಂಗದ ನಿವೃತ್ತ ನಿರ್ದೇಶಕ ಪ್ರೊ.ಸಿ.ನಾಗಣ್ಣ (ರಾಜ್ಯೋತ್ಸವ ಪ್ರಶಸ್ತಿ) ಅವರನ್ನು ಕಾಣಬಹುದು.

ಸುತ್ತೂರು, ಜ.10–ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳ 1064ನೇ ಜಯಂತಿ ಮಹೋತ್ಸವದ ಅಂಗವಾಗಿ ನಂಜನಗೂಡು ತಾಲೂಕು ಸುತ್ತೂರು ಮಠದಲ್ಲಿ ವಿವಿಧ ವಿಶ್ವವಿದ್ಯಾನಿಲಯದಿಂದ ಗೌರವ ಡಾಕ್ಟರೇಟ್, ರಾಜ್ಯ ಸರ್ಕಾರದ ರಾಜ್ಯೋತ್ಸವ ಪ್ರಶಸ್ತಿ ಪಡೆದವರೂ ಸೇರಿದಂತೆ ವಿವಿಧ ಕ್ಷೇತ್ರದ ಸಾಧಕರನ್ನು ಸನ್ಮಾನಿಸಲಾಯಿತು.

ಈ ಸಮಾರಂಭದ ಸಾನ್ನಿಧ್ಯವನ್ನು ಸುತ್ತೂರು ಶ್ರೀಗಳಾದ ಶಿವರಾತ್ರಿ ದೇಶಿಕೇಂದ್ರ ಸ್ವಾಮೀಜಿಗಳು ವಹಿಸಿದ್ದು, ಸಮಾರಂಭದಲ್ಲಿ 'ಮೈಸೂರು ಮಿತ್ರ' ಮತ್ತು 'ಸ್ಟಾರ್ ಆಫ್ ಮೈಸೂರ್' ಸಂಸ್ಥಾಪಕ ಸಂಪಾದಕರಾದ ಡಾ. ಕೆ.ಬಿ.ಗಣಪತಿ (ಮೈಸೂರು ವಿವಿ ಗೌರವ ಡಾಕ್ಟರೇಟ್ ಪುರಸ್ಕೃತರು), ಬಸವ ಸಮಿತಿ ಅಧ್ಯಕ್ಷರಾದ ಅರವಿಂದ ಜತ್ತಿ (ಧಾರವಾಡ ಕರ್ನಾಟಕ ವಿವಿ ಗೌರವ ಡಾಕ್ಟರೇಟ್ ಪುರಸ್ಕೃತರು), ತೋಂಟದಾರ್ಯ ಮಠದ ಶ್ರೀ ನಿಜಗುಣಾನಂದ ಸ್ವಾಮೀಜಿ (ರಾಜ್ಯೋತ್ಸವ ಪ್ರಶಸ್ತಿ ಪುರಸ್ಕೃತರು), ಶಿಕ್ಷಣ ತಜ್ಞ ಡಾ.ವುಡೇ ಪಿ.ಕೃಷ್ಣ (ಗೌರವ ಡಾಕ್ಟರೇಟ್), ಎಸ್.ಷಡಕ್ಷರಿ (ನಾಡೋಜ ಪ್ರಶಸ್ತಿ), ಡಾ.ಕಬ್ಬಿನಾಲೆ ವಸಂತ ಭಾರದ್ವಾಜ್ (ರಾಜ್ಯೋತ್ಸವ ಪ್ರಶಸ್ತಿ), ಬೆಂಗಳೂರಿನ ಮೈಥಿಕ್ ಸೊಸೈಟಿಯ ವಿ.ನಾಗರಾಜ್ (ರಾಜ್ಯೋತ್ಸವ ಪ್ರಶಸ್ತಿ), ಕಿದ್ವಾಯಿ ಸಂಸ್ಥೆಯ ●6ನೇ ಪುಟಕ್ಕೆ

## ಮನುಕುಲದ ಉದ್ಧಾರವೇ ಸುತ್ತೂರು ಶ್ರೀಕ್ಷೇತ್ರದ ಧ್ಯೇಯವಾಗಿದೆ...

### ● ತೋಂಟದಾರ್ಯ ನಿಜಗುಣಾನಂದ ಸ್ವಾಮೀಜಿ ಗುಣಗಾನ ● ಸುತ್ತೂರು ಶ್ರೀಕ್ಷೇತ್ರ ಸದಾಕಾಲ ಸಂಕಷ್ಟದಲ್ಲಿರುವವರ ರಕ್ಷಿಸುತ್ತಿದೆ: ಕೆಬಿಜಿ

ಸುತ್ತೂರು, ಜ.10–ರಾಜ್ಯದ ಲಿಂಗಾಯತ ಮಠಗಳು ಕೇವಲ ಗುಡಿ–ಗುಂಡಾರಗಳಿಗೆ ಸೀಮಿತವಾಗದೇ ಮನು ಕುಲದ ಉದ್ಧಾರಕ್ಕಾಗಿ ಶಾಲಾ–ಕಾಲೇಜುಗಳನ್ನು ತೆರೆದು ಅನ್ನ ಹಾಗೂ ಅಕ್ಷರ ದಾಸೋಹವನ್ನು ನಡೆಸುತ್ತಿದೆ ಎಂದು ತೋಂಟದಾರ್ಯ ಮಠದ ನಿಜಗುಣಾನಂದ ಸ್ವಾಮೀಜಿ ಮುಕ್ತ ಕಂಠದಿಂದ ಕೊಂಡಾಡಿದರು.

ಸುತ್ತೂರು ಶ್ರೀ ಕ್ಷೇತ್ರದಲ್ಲಿ ಆದಿ ಜಗದ್ಗುರು ಶ್ರೀ ಶಿವರಾತ್ರೀಶ್ವರ ಶಿವಯೋಗಿಗಳ 1064ನೇ ಜಯಂತಿ ಅಂಗವಾಗಿ ಬುಧವಾರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಸನ್ಮಾನ ಸ್ವೀಕರಿಸಿ ಮಾತನಾಡಿದ ಅವರು, ಅನ್ನ, ಅರಿವು, ಆಶ್ರಯ ನೀಡಿ ಮನುಷ್ಯನನ್ನು ಮನುಷ್ಯರನ್ನಾಗಿ ಕಾಣುವುದೇ ಲಿಂಗಾಯತ ಧರ್ಮ. ಇದಕ್ಕೆ ಬಸವಾದಿ ಶರಣರ ಸಂದೇಶಗಳೇ ಕಾರಣ ಎಂದರಲ್ಲದೇ, ಸುತ್ತೂರಿನ ರಾಜೇಂದ್ರ ಶ್ರೀಗಳು ತಮ್ಮ ಚಿನ್ನದ ಕರಡಿಗೆಯನ್ನು ವಿಕ್ರಯಿಸಿ, ವಿದ್ಯಾರ್ಥಿಗಳ ಹೊಟ್ಟೆ ತುಂಬಿಸಿದ ಪುಣ್ಯಾತ್ಮರು. ಕೊರೊನಾ ಸಂದರ್ಭದಲ್ಲಿ 2 ವರ್ಷ ಕಾಲ ಪ್ರವಚನ, ಕಾರ್ಯಕ್ರಮಗಳು ನಿಂತು ಹೋಗಿ ಸಂಕಷ್ಟ ಪರಿಸ್ಥಿತಿಯಲ್ಲಿದ್ದಾಗ ಅನೇಕ ಸ್ವಾಮೀಜಿಗಳಿಗೆ ಶಿವರಾತ್ರಿ ದೇಶಿಕೇಂದ್ರ ಸ್ವಾಮಿಗಳು ಆರ್ಥಿಕ ಸಹಾಯ ಮಾಡಿದ ಮಾತೃಹೃದಯಿಗಳು. ಸುತ್ತೂರು ಶ್ರೀಮಠವು ರಾಜ್ಯದಲ್ಲಿ ಜನರು ಸಂಕಷ್ಟಕ್ಕೀಡಾದಾಗಲೆಲ್ಲಾ ಸಹಾಯಹಸ್ತ ಚಾಚುವ ಮೂಲಕ ಹೃದಯ ವೈಶಾಲ್ಯತೆ ಮೆರೆದಿದೆ ಎಂದು ಹೇಳಿದರು.

ಸಂಕಷ್ಟದಲ್ಲಿರುವವರ ರಕ್ಷಣೆ: 'ಸ್ಟಾರ್ ಆಫ್ ಮೈಸೂರ್' ಮತ್ತು 'ಮೈಸೂರು ಮಿತ್ರ' ಸಂಸ್ಥಾಪಕ ಸಂಪಾದಕರಾದ ಡಾ. ಕೆ.ಬಿ.ಗಣಪತಿ(ಕೆಬಿಜಿ)ಯವರು ಮಾತನಾಡಿ, ಸುತ್ತೂರು ಶ್ರೀಮಠವು ಸಂಕಷ್ಟದಲ್ಲಿ ಸಿಲುಕಿರುವವರಿಗೆ ತಕ್ಷಣವೇ ಸ್ಪಂದಿಸಿ ಅವರ ರಕ್ಷಣೆಗೆ ನಿಲ್ಲುವ ಮಹತ್ಕಾರ್ಯವನ್ನು ಸತತವಾಗಿ ಮಾಡುತ್ತಾ ಬಂದಿದೆ ಎಂದರು.

ಕೆಲ ವರ್ಷದ ಹಿಂದೆ ಮಂಡ್ಯ ಜಿಲ್ಲೆ ಶ್ರೀರಂಗಪಟ್ಟಣದ ಬಳಿ ದುರದೃಷ್ಟಕರವಾದ ಜೀತದಾಳು ಪದ್ಧತಿಯ ಪ್ರಕರಣವೊಂದು ನಡೆದಿತ್ತು. ಆ ಸಂದರ್ಭದಲ್ಲಿ ಅನೇಕ ಮಕ್ಕಳ ಪೋಷಕರು ಮುಂದೇನು ಮಾಡುವುದು ಎಂದು ತೋಚದೇ ನಿಂತಿದ್ದಾಗ ಮರುದಿನವೇ ಶಿವರಾತ್ರಿ ದೇಶಿಕೇಂದ್ರ ಶ್ರೀಗಳು ಮಕ್ಕಳನ್ನೆಲ್ಲಾ ತಮ್ಮ ಮಠಕ್ಕೆ ಕರೆಸಿ ಅವರಿಗೆ ಉಚಿತ ಊಟ, ವಿದ್ಯಾಭ್ಯಾಸ, ವಸತಿ ಕೊಡುವ ಮೂಲಕ ನೆರವಿಗೆ ನಿಂತಿದ್ದರು. ಜೀವನದಲ್ಲಿ ಕೆಲವು ●6ನೇ ಪುಟಕ್ಕೆ

# 'ತೇಜಸ್ವಿ ಬರಹದಲ್ಲಿ ನೈಸರ್ಗಿಕ ಬುದ್ಧಿಮತ್ತೆ'

## ಕೃತಕ ಬುದ್ಧಿಮತ್ತೆ ಬರುವ ಮೊದಲೇ ಪ್ರಾಕೃತಿಕ ಬುದ್ಧಿಮತ್ತೆ ಬಗ್ಗೆ ಬರೆಯುತ್ತಿದ್ದ ತೇಜಸ್ವಿ: ವಿಶ್ರಾಂತ ಕುಲಪತಿ ಡಾ. ಕೆ. ಚಿದಾನಂದಗೌಡ

## 'ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು' 14 ಸಂಪುಟಗಳ ಬಿಡುಗಡೆ | 'ತೇಜಸ್ವಿ ಎಂಬ ವಿಸ್ಮಯ' ಎಂಬ ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆ



ಕೆ.ಪಿ.ಪೂರ್ಣಚಂದ್ರ ತೇಜಸ್ವಿ-ಸಮಗ್ರ ಕೃತಿಜಗತ್ತು 14 ಸಂಪುಟಗಳ ಬಿಡುಗಡೆ ಕಾರ್ಯಕ್ರಮದಲ್ಲಿ 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆ ಮಾಡಲಾಯಿತು.

■ **ಉದಯವಾಣಿ ಸಮಾಚಾರ**

ಬೆಂಗಳೂರು: ಪೂರ್ಣಚಂದ್ರ ತೇಜಸ್ವಿ ಅವರು ತಮ್ಮ ಬರಹಗಳನ್ನು ಅನುಭವಿಸಿ ಬರೆಯುತ್ತಿದ್ದರು. ಹಾಗಾಗಿ ಅವರ ಕೃತಿಗಳು ಓದುಗರ ಹೃದಯಕ್ಕೆ ನೇರವಾಗಿ ಮುಟ್ಟುತ್ತಿತ್ತು ಮತ್ತು ಯುವಜನತೆಗೆ ತುಂಬಾ ಹತ್ತಿರವಾಗುತ್ತಿದ್ದರು ಎಂದು ಕುವೆಂಪು ವಿವಿಯ ವಿಶ್ರಾಂತ ಕುಲಪತಿ ಡಾ ಕೆ. ಚಿದಾನಂದಗೌಡ ತಿಳಿಸಿದರು.

ಮೆ. ಮುನಿಸ್ವಾಮಿ ಅಂಡ್ ಸನ್ಸ್, ಎಂ.ಚಂದ್ರಶೇಖರ್ ಪ್ರತಿಷ್ಠಾನ ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರದ ಸಂಯುಕ್ತಾಶ್ರಯದಲ್ಲಿ ಭಾನುವಾರ ಜೆ.ಸಿ. ರಸ್ತೆಯಲ್ಲಿನ ರವೀಂದ್ರ ಕಲಾಕ್ಷೇತ್ರದಲ್ಲಿ ಹಮ್ಮಿಕೊಂಡಿದ್ದ ಕೆ.ಪಿ. ಪೂರ್ಣಚಂದ್ರ ತೇಜಸ್ವಿ-ಸಮಗ್ರ ಕೃತಿ ಜಗತ್ತು 14 ಸಂಪುಟಗಳ ಬಿಡುಗಡೆ, 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆ, 'ಪೂರ್ಣಚಂದ್ರ' ಚಿತ್ರ ಸಂಪುಟ ಬಿಡುಗಡೆ ಹಾಗೂ ತೇಜಸ್ವಿ ಸಾಹಿತ್ಯ: ಸಾಂಸ್ಕೃತಿಕ ಹಬ್ಬ ರಾಷ್ಟ್ರೀಯ ವಿಚಾರ ಸಂಕಿರಣದಲ್ಲಿ ಮಾತನಾಡಿದರು.

ಇಂದಿನ ಆರ್ಟಿಫಿಶಿಯಲ್ ಇಂಟಲಿಜೆನ್ಸ್ ಜಗತ್ತಿನಲ್ಲಿ ನ್ಯಾಚುರಲ್ ಇಂಟಲಿಜೆನ್ಸ್ ಬಗ್ಗೆ ಬರೆಯುತ್ತಿದ್ದರು ಎಂದು ತೇಜಸ್ವಿ ಅವರಿಗಿದ್ದ ಪರಿಸರ ಪ್ರೇಮದ ಬಗ್ಗೆ ತಿಳಿಸಿದರು.

ಹಿರಿಯ ಸಾಹಿತಿ ಪ್ರೊ. ಬಿ.ಎನ್. ಶ್ರೀರಾಮ್ ಮಾತನಾಡಿ, ಓದುಗರೊಂದಿಗೆ ಇದ್ದ ಸಂವಹನ ಕ್ರಿಯೆಯೇ ಪೂರ್ಣಚಂದ್ರ ತೇಜಸ್ವಿ ಅವರ ಸಾಹಿತ್ಯಗಳು ಪ್ರಸಿದ್ಧವಾಗಲು ಪ್ರಮುಖ ಕಾರಣ. ಜತೆಗೆ ತಾನು ಬರೆದಿದ್ದನ್ನು ಓದುಗರು ಅರ್ಥೈಸಿಕೊಳ್ಳುತ್ತಾರೋ, ಇಲ್ಲವೋ ಎಂದು ಚೆನ್ನಾಗಿ ತಿಳಿದಿದ್ದರು ಎಂದು ಸ್ಮರಿಸಿದರು.

ತೇಜಸ್ವಿ ಅವರ ಕಥೆಗಳಲ್ಲಿನ ತಿಳಿಹಾಸ್ಯ, ಸಾಹಿತ್ಯ, ರಾಜಕೀಯ, ತುಂಟಾಟ ಎಲ್ಲವೂ ಕುವೆಂಪು ಅವರಿಂದ ಬಳುವಳಿಯಾಗಿ ಬಂದಿದ್ದವು. ಜತೆಗೆ ತಾನು ಹೇಳಿದ್ದು ಅಥವಾ ಬರೆದಿದ್ದು ಬೇರೆಯವರಿಗೆ ಅರ್ಥವಾಗುತ್ತಾ ಎಂದು ಚಿಂತಿಸುವ ಉತ್ತಮ ಗುಣವುಳ್ಳವರಾಗಿದ್ದರು ಎಂದು ಶ್ಲಾಘಿಸಿದರು.

ಇದೇ ವೇಳೆ, 'ತೇಜಸ್ವಿ ಎಂಬ ವಿಸ್ಮಯ' ಎಂಬ ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆಗೊಳಿಸಿದ ಮಾಜಿ ಉಪಮುಖ್ಯಮಂತ್ರಿ ಡಾ.ಸಿ.ಎನ್. ಅಶ್ವತ್ಥನಾರಾಯಣ, ತೇಜಸ್ವಿ ಅವರದ್ದು ಬಹುಮುಖ ಪ್ರತಿಭೆ. ಇವರ ಕುರಿತಾದ ಈ ಸಾಕ್ಷ್ಯಚಿತ್ರವು ಇಂದಿನ ದಿನಗಳಲ್ಲಿ ತುಂಬಾ ಅವಶ್ಯಕತೆ ಇತ್ತು ಎನ್ನುತ್ತಾ, ತೇಜಸ್ವಿ ಅವರ ಜೀವನ ಹಾಗೂ ಬರವಣಿಗೆಯೇ ನಮಗೆಲ್ಲಾ ಒಂದು ಸಂದೇಶ. ಅವರ ಬದುಕು ಈ ಸಮಾಜದಲ್ಲಿ ನಾವು ಹೇಗೆ ಬದುಕಬೇಕು ಎಂಬುವುದಕ್ಕೆ ನಿದರ್ಶನವಾಗಿದೆ ಎಂದು ತಿಳಿಸಿದರು. ಕಾರ್ಯಕ್ರಮದಲ್ಲಿ ಹಂಪಿ ಕನ್ನಡ ವಿವಿಯ ವಿಶ್ರಾಂತ ಪ್ರಾಧ್ಯಾಪಕ ಪ್ರೊ. ಕೆ.ಸಿ ಶಿವಾರೆಡ್ಡಿ, ಎಂ. ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯೆ ಸರೋಜ ಎಂ. ಚಂದ್ರಶೇಖರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಕನ್ನಡ ವಿವಿಯ ಕುಲಪತಿ ಡಾ. ಡಿ.ವಿ. ಪರಮಶಿವಮೂರ್ತಿ, ಗಾಂಧಿ ಭವನದ ಕಾರ್ಯಾಧ್ಯಕ್ಷ ಎನ್.ಆರ್. ವಿಶುಕುಮಾರ್, ಎಂ. ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯ ಕಾರ್ಯದರ್ಶಿ ಎಂ.ಸಿ. ನರೇಂದ್ರ, ತಾರಿಣಿ ಚಿದಾನಂದ ಸೇರಿದಂತೆ ಅನೇಕರು ಉಪಸ್ಥಿತರಿದ್ದರು.

# 'ಯೂನಿಕೋಡ್ ತಂತ್ರಾಂಶ ಬರಲು ತೇಜಸ್ವಿ ಕಾರಣ'

## ಯೂನಿಕೋಡ್ ತಂತ್ರಾಂಶಕ್ಕಾಗಿಯೇ ಹಂಪಿ ವಿಶ್ವವಿದ್ಯಾಲಯ ಸಂಪರ್ಕಿಸಿದ್ದ ತೇಜಸ್ವಿ: ಚಿದಾನಂದಗೌಡ

■ **ಉದಯವಾಣಿ ಸಮಾಚಾರ**

ಬೆಂಗಳೂರು: ಕಂಪ್ಯೂಟರ್‌ನಲ್ಲಿ ಯೂನಿಕೋಡ್ ತಂತ್ರಾಂಶ ಬರಲು ಪೂರ್ಣಚಂದ್ರ ತೇಜಸ್ವಿ ಕಾರಣ ಎಂದು ತೇಜಸ್ವಿ ಅವರ ಭಾವ, ತಾರಿಣಿ ಅವರ ಪತಿ ಚಿದಾನಂದಗೌಡ ಸ್ಮರಿಸಿದರು.

ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರವು ರವೀಂದ್ರ ಕಲಾಕ್ಷೇತ್ರದಲ್ಲಿ ಹಮ್ಮಿಕೊಂಡಿರುವ ಎರಡು ದಿನಗಳ 'ತೇಜಸ್ವಿ ಸಾಹಿತ್ಯ: ಸಾಂಸ್ಕೃತಿಕ ಹಬ್ಬ' ಕಾರ್ಯಕ್ರಮದಲ್ಲಿ ಪೂರ್ಣಚಂದ್ರ ತೇಜಸ್ವಿ ಅವರ ಕುಟುಂಬ ಸದಸ್ಯರು ತೇಜಸ್ವಿ ಅವರೊಂದಿಗಿನ ಒಡನಾಟವನ್ನು ಮೆಲಕು ಹಾಕಿದರು.



ಆರಂಭದಲ್ಲಿ ಕಂಪ್ಯೂಟರ್‌ನಲ್ಲಿ ಇಂಗ್ಲಿಷ್ ಭಾಷೆಯಲ್ಲಿ ಟೈಪಿಂಗ್ ಸಾಧ್ಯವಾಗಿತ್ತು. ಆ ಹಿನ್ನೆಲೆಯಲ್ಲಿ ಅಂತಹ ತಂತ್ರಾಂಶ ಕನ್ನಡಕ್ಕೂ ಬೇಕು ಎಂದು ಆಗಲೇ ತೇಜಸ್ವಿ ಹಪಹಪಿಸುತ್ತಿದ್ದ, ಕಂಪ್ಯೂಟರ್‌ನಲ್ಲಿ ಕನ್ನಡ ಇಲ್ಲ ಎಂದರೆ ಕನ್ನಡ ಭಾಷೆ ಸಂಸ್ಕೃತದ ರೀತಿಯಂತಾಗುತ್ತದೆ ಎಂದು ಹೇಳುತ್ತಿದ್ದ ಯೂನಿಕೋಡ್‌ಗಾಗಿಯೇ ಅವರು ಹಂಪಿ ವಿವಿಯನ್ನು ಸಂಪರ್ಕಿಸಿದ್ದರು. ವಿವೇಕ ರೈ ಆಗ ಅಲ್ಲಿದ್ದರು. ನಾನು ಕೂಡ ಈ ಬಗ್ಗೆ ರಚಿಸಿದ ಸಮಿತಿಯಲ್ಲಿದ್ದೆ ಎಂದು ಅವರೊಂದಿಗಿನ ಒಡನಾಟವನ್ನು ಮೆಲಕು ಹಾಕಿದರು.

ಪೂರ್ಣಚಂದ್ರ ತೇಜಸ್ವಿ ಅವರ ಅಳಿಯ ದೀಪಕ್ ಶೆಣೈ ಮಾತನಾಡಿ, ನಮ್ಮಣ್ಣನಿಗೆ ಸಂಗೀತದ ಬಗ್ಗೆ ತುಂಬಾ ಹುಚ್ಚಿತ್ತು. ನಾನು ತಬಲ ನುಡಿಸುತ್ತಿದ್ದೆ ಅವರು ಸಿತಾರ್ ನುಡಿಸುತ್ತಿದ್ದರು. ಆದರೆ, ತಮಾಷೆ ಅಂದರೆ ಅವರಿಗೂ ಸಂಗೀತ ಗೊತ್ತಿರಲಿಲ್ಲ, ನನಗೂ ಗೊತ್ತಿಲ್ಲರಲಿಲ್ಲ ಎಂದು ಹೇಳಿ ಸಭಿಕರನ್ನು ನಗೆಗಡಲಲ್ಲಿ ತೇಲಿದರು.

ನಮ್ಮಣ್ಣ... ನನಗೆ ಹೆಣ್ಣು(ಸುಸ್ಮಿತಾ) ಕೊಟ್ಟಿರುವ ಮಾವ. ಪೂರ್ಣಚಂದ್ರ ತೇಜಸ್ವಿ ಅವರನ್ನು ನಾನು ಹಾಗೇ ಕರೆಯುವುದು. ಅವರಿಗೆ ಸಂಗೀತದ ಬಗ್ಗೆ ತುಂಬಾ ಹುಚ್ಚಿತ್ತು. ಅವರಿಗೂ ಸಂಗೀತ ಗೊತ್ತಿರಲಿಲ್ಲ, ನನಗೂ ಸಂಗೀತದ ಬಗ್ಗೆ ತಿಳಿದಿರಲಿಲ್ಲ. ಆದರೂ ನಾನು ತಬಲ ನುಡಿಸುತ್ತಿದ್ದೆ ಅವರು ಸಿತಾರ್ ನುಡಿಸುತ್ತಿದ್ದರು. ಅವರಿಗನ್ನಿಸಿದ್ದನ್ನು ಅವರು ನುಡಿಸುತ್ತಿದ್ದರು, ನನಗನ್ನಿಸಿದಂತೆ ನಾನು ನುಡಿಸುತ್ತಿದ್ದಂತೆ ಎಂದು ಹಳೆಯ ನೆನಪುಗಳನ್ನು ಸ್ಮರಿಸಿದರು.

ಅಣ್ಣ ಎಲ್ಲ ರಂಗಗಳಲ್ಲಿ ಆಸಕ್ತಿ ಹೊಂದಿದ್ದರು. ಚಿತ್ರಕಲೆ ಮತ್ತು ಸಂಗೀತದ ಬಗ್ಗೆ ಅಭಿರುಚಿ ಹೊಂದಿದ್ದರು. ಆ ಹಿನ್ನೆಲೆಯಲ್ಲಿ ನುಡಿಸಲು ಬಾರದೇ ಇದ್ದರೂ ಸಿತಾರಾವನ್ನು ತಮ್ಮಷ್ಟಕ್ಕೆ ತಾವೇ ನುಡಿಸುತ್ತಿದ್ದರು. ಅವರು ಸಿತಾರ್ ನುಡಿಸುತ್ತಿದ್ದ ಚಿತ್ರವನ್ನು ಸುಸ್ಮಿತಾ ಫೋಟೋದಲ್ಲಿ ಸೆರೆಹಿಡಿದ್ದಾರೆ. ಅವರು ಹಾಸ್ಯಾತ್ಮಕ ವ್ಯಕ್ತಿಯಾಗಿದ್ದರು ಎಂದು ನೆನಪಿಸಿಕೊಂಡರು.

ಅಪ್ಪ, ಅಮ್ಮ ಜಗಳ: ಅಪ್ಪ ಅಮ್ಮ ಚೆನ್ನಾಗಿದ್ದರು: ಒಬ್ಬರಿಗೊಬ್ಬರು ಬಿಟ್ಟುಕೊಡುತ್ತಿರಲಿಲ್ಲ, ಆದರೆ ಕೆಲವು ಸಲ ಜಗಳವಾಡುತ್ತಿದ್ದರು. ವಿಪರೀತಕ್ಕೆ ಹೋದಾಗ ಇಬ್ಬರಲ್ಲಿ ಒಬ್ಬರು ತೆಪ್ಪಗಾಗುತ್ತಿದ್ದರು ಎಂದು ತೇಜಸ್ವಿ ಮತ್ತೊಬ್ಬ ಮಗಳು ಈಶಾನ್ಯೆ ಸ್ಮರಿಸಿದರು. ನಮ್ಮ ಮನೆಯಲ್ಲಿದ್ದವರಿಗೆ ಎಲ್ಲರಿಗೂ ಕುವೆಂಪು ಹೆಸರಿಟ್ಟಿದ್ದಾರೆ. ಆದರೆ ನನಗೆ ನಮ್ಮಪ್ಪ ಹೆಸರಿಟ್ಟಿದ್ದಾರೆ ಎಂದು ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಪುತ್ರಿ ಸುಸ್ಮಿತಾ ತಿಳಿಸಿದರು.

### ಮೈಸೂರಿನ ಕುಕ್ಕರಹಳ್ಳಿ ಕೆರೇಲಿ ಮೀನು ಹಿಡೀತಿದ್ದ ತೇಜಸ್ವಿ: ಸೋದರಿ ತಾರಿಣಿ

ತೇಜಸ್ವಿ ಅವರ ಸಹೋದರಿ ತಾರಿಣಿ ಚಿದಾನಂದಗೌಡ ಮಾತನಾಡಿ, ತೇಜಸ್ವಿ ಯಾವಾಗಲೂ ಕುಚೇಷ್ಟೆಗಳನ್ನು ಮಾಡುತ್ತಿದ್ದ, ನನಗೆ ಪೈಜಾಮ್ ಹಾಕಿಸಿಕೊಂಡು ಹುಡುಗರ ಜತೆಗೆ ಸುತ್ತಿಸುತ್ತಿದ್ದ, ಮೈಸೂರಿನಲ್ಲಿ ಕುವೆಂಪು ಅವರಿದ್ದಾಗ ಕುಕ್ಕರಹಳ್ಳಿ ಕೆರೆಯಲ್ಲಿ ಗಾಳ ಹಾಕಿ ಮೀನು ಹಿಡಿಯಲು ಒಟ್ಟಿಗೆ ಕರೆದುಕೊಂಡು ಹೋಗುತ್ತಿದ್ದ, ಬರೋದಿಲ್ಲ ಅಂದರೂ ಏಯ್, ಬಾರೇ ಎಂದು ಕರೆದುಕೊಂಡು ಹೋಗುತ್ತಿದ್ದ, ಒಂದು ದಿವಸ ಅಣ್ಣಬಂದ್ರು (ಕುವೆಂಪು) ಎಂದು ಮೀನಿನ ಗಾಣವನ್ನು ಕುಕ್ಕರಹಳ್ಳಿ ಕೆರೆಯಲ್ಲಿ ಬಿಟ್ಟು ಓಡಿ ಹೋಗಿದ್ದು ಇನ್ನೂ ಕಣ್ಮುಂದೆ ಇದೆ ಎಂದು ಹೇಳಿ ಸಭಿಕರ ಜತೆಗೆ ತಾವು ನಕ್ಕರು.

### ಕಾರು, ಕಂಪ್ಯೂಟರ್ ರಿಪೇರಿ ಕಾರ್ಯದಲ್ಲಿ ಸಿದ್ಧಹಸ್ತರು: ತೇಜಸ್ವಿ ಪುತ್ರಿ

ಆಗಿನ್ನೂ ಕಂಪ್ಯೂಟರ್ ಕಾಲಿಡುತ್ತಿದ್ದ ದಿನಗಳು. ಕಂಪ್ಯೂಟರ್ ಬಗ್ಗೆ ತೀವ್ರ ಆಸಕ್ತಿ. ಅವರ ಸ್ನೇಹಿತರಾದ ಪ್ರದೀಪ್ ಕೆಂಜಿಗೆ ಅವರು ಹಳೆ ಕಂಪ್ಯೂಟರ್ ಕೊಟ್ಟಿದ್ದರು. ಅಯ್ಯೋ ಪ್ರದೀಪ್ ಹಳೆಯ ಕಂಪ್ಯೂಟರ್ ಕೊಟ್ಟಿದ್ದಾನೆ. ಅದು ಆನ್ ಆಗೋಕೆ ಗಂಟೆ ಗಟ್ಟಲೆ ತೆಗೆದುಕೊಳ್ಳುತ್ತದೆ ಎಂದು ಹಾಸ್ಯ ಮಾಡುತ್ತಿದ್ದರು. ಜತೆಗೆ ಕೆಟ್ಟ ಹೋಗಿದ್ದ ದಿನ ಗಳಲ್ಲಿ ನನ್ನ ಹತ್ತಿರ ಕಂಪ್ಯೂಟರ್ ಬಿಡಿ ಭಾಗಗಳನ್ನು ತರಿಸಿಕೊಂಡು ಸಂಪೂರ್ಣ ರಿಪೇರಿ ಮಾಡುತ್ತಿದ್ದರು. ಕಾರು ರಿಪೇರಿ, ಕಂಪ್ಯೂಟರ್ ರಿಪೇರಿಯಲ್ಲಿ ಸಿದ್ಧಹಸ್ತರಾಗಿದ್ದರು ಎಂದು ಪುತ್ರಿ ಸುಸ್ಮಿತಾ ಅಪ್ಪನ ವಿಸ್ಮಯಗಳನ್ನು ಬಿಚ್ಚಿಟ್ಟರು.


ಜನದನಿಯ ಸಾರಥಿ
ವಾರ್ತಾ ಭಾರತಿ

# ತೇಜಸ್ವಿ ಪ್ರಜ್ಞಾವಂತ ಓದುಗರನ್ನು ಸೃಷ್ಟಿಸಿದ ಬರಹಗಾರ

**ಪ್ರೊ.ಎಸ್.ಜಿ.ಸಿದ್ದರಾಮಯ್ಯ**

ಬೆಂಗಳೂರು, ಜು.28: ಕನ್ನಡ ಓದುಗರನ್ನು ಹೆಚ್ಚು ಸೃಷ್ಟಿಸಿದ್ದು ಅನಕೃ ಮತ್ತು ತ್ರಿವೇಣಿಯವರು. ಕನ್ನಡದಲ್ಲಿ ಪ್ರಜ್ಞಾವಂತ ಓದುಗರನ್ನು ಸೃಷ್ಟಿಸಿದ ಏಕೈಕ ಬರಹಗಾರ ಕೆ.ಪಿ.ಪೂರ್ಣಚಂದ್ರ ತೇಜಸ್ವಿಯವರು ಎಂದು ಹಿರಿಯ ಸಾಹಿತಿ ಪ್ರೊ.ಎಸ್.ಜಿ. ಸಿದ್ದರಾಮಯ್ಯ ಬಣ್ಣಿಸಿದ್ದಾರೆ.

ರವಿವಾರ ನಗರದ ರವೀಂದ್ರ ಕಲಾ ಕ್ಷೇತ್ರದಲ್ಲಿ ಎಂ.ಚಂದ್ರಶೇಖರ್ ಪ್ರತಿಷ್ಠಾನ ವತಿಯಿಂದ ಹಮ್ಮಿಕೊಂಡಿದ್ದ 'ತೇಜಸ್ವಿ ಎಂಬ ವಿಸ್ಮಯ', 'ಸಾಕ್ಷ್ಯಚಿತ್ರ ಸರಣಿ ಬಿಡುಗಡೆ', 'ತೇಜಸ್ವಿ ಸಾಹಿತ್ಯ: ಸಾಂಸ್ಕೃತಿಕ ಹಬ್ಬ', 'ರಾಷ್ಟ್ರೀಯ ವಿಚಾರ ಸಂಕಿರಣ' ಕಾರ್ಯಕ್ರಮದಲ್ಲಿ ಭಾಗವಹಿಸಿ ಮಾತನಾಡಿದ ಅವರು, ಕುವೆಂಪು ಯುಗಪ್ರಜ್ಞೆಯ ರೀತಿಯೊಳಗೆ ಕನ್ನಡ ಬದುಕನ್ನು ಕಂಡವರು ಮತ್ತು ಕನ್ನಡದ ಬದುಕನ್ನು ಕಟ್ಟಿಕೊಟ್ಟವರು. ಕನ್ನಡದ ಲೋಕಪ್ರಜ್ಞೆಯನ್ನು ಅವರು ತಮ್ಮ ಕೃತಿಗಳ ಮೂಲಕ ಲೋಕಜ್ಞಾನ ಕಟ್ಟಿಕೊಟ್ಟಿದ್ದಾರೆ. ಪ್ರಸ್ತುತ ಐಟಿ-ಬಿಟಿ ಸಂದರ್ಭದೊಳಗಿನ ಓದುಗರ ಸಂಖ್ಯೆ ಬಹಳ ಕಡಿಮೆ. ತೇಜಸ್ವಿಯವರ ಕೃತಿಗಳನ್ನು ಐಟಿ-ಬಿಟಿ ಉದ್ಯೋಗಿಗಳು ಬಿಡದಂತೆ ಓದುತ್ತಿದ್ದಾರೆ. ತೇಜಸ್ವಿ ಬರಹಗಳಲ್ಲಿ ಆಧುನಿಕ(ಅಪ್ಡೇಟ್) ಲೋಕಜ್ಞಾನ ಒಳಗೊಂಡಿದೆ. ಆ ಲೋಕಜ್ಞಾನ ಓದಿನ ಮುಖಾಂತರ ಬಂದಿರುವುದು ಮಾತ್ರವಲ್ಲ. ಅದು ಬರಹ ಮತ್ತು ಅನುಭವದ ಮೂಲಕ ಬಂದಿರುವಂತದ್ದು ಎಂದು ತಿಳಿಸಿದರು.

ಜಗತ್ತು ಹಿಂಸೆ, ಕ್ರೌರ್ಯಗಳ ನಡುವೆ ನಡಗುತ್ತಿದೆ. ನಮ್ಮ ದೇಶದೊಳಗೆ ಅದು ವ್ಯಾಪಕವಾಗಿ ಹರಡಿದೆ. ಮನುಷ್ಯ ಸಂಬಂಧಗಳು ವಿಘಟನೆಗೆ ಒಳಗಾಗುತ್ತಿವೆ. ಇಂತಹ ವಿಘಟನೆಯ ಸಂದರ್ಭದೊಳಗೆ ಒಂದು ಸಂಬಂಧಾತ್ಮಕ ನೆರೆಯೊಳಗೆ ಲೋಕದೃಶ್ಯವನ್ನು ಕಾಣಿಸುವಂತಹ ರೀತಿಯಲ್ಲಿ ಕುವೆಂಪು, ತೇಜಸ್ವಿಯವರು ಕಟ್ಟಿಕೊಟ್ಟಿರುವಂತಹ ಜೀವನ, ಮನುಷ್ಯರನ್ನು ಆರೋಗ್ಯವಾಗಿ ಬೆಳೆಸುವಂತೆ ಮಾಡಿದೆ ಎಂದು ಸಿದ್ದರಾಮಯ್ಯ ಸ್ಮರಿಸಿದರು.

ಕಾರ್ಯಕ್ರಮದಲ್ಲಿ ನಿವೃತ್ತ ನ್ಯಾಯಮೂರ್ತಿ ಎ.ಜೆ. ಸದಾಶಿವ, ವಿಶ್ರಾಂತ ಕುಲಪತಿ ಪ್ರೊ.ಬಿ.ಎನ್.ಶ್ರೀರಾಮ್, ಮಾಜಿ ಡಿಸಿಎಂ ಡಾ.ಸಿ.ಎನ್.ಅಶ್ವತ್ಥನಾರಾಯಣ, ನಿವೃತ್ತ ಕುಲಪತಿ ಡಾ.ಕೆ.ಚಿದಾನಂದಮೂರ್ತಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಪ್ರತಿಷ್ಠಾನದ ಸದಸ್ಯೆ ಸರೋಜ ಎಂ.ಚಂದ್ರಶೇಖರ್, ಕೆ.ಪಿ.ಸುಸ್ಮಿತಾ (ಪೂರ್ಣಚಂದ್ರ ತೇಜಸ್ವಿ ಪುತ್ರಿ) ಎಂ.ಎಂ.ಪ್ರಕಾಶನದ ನರೇಂದ್ರ ಎಂ.ಚಂದ್ರಶೇಖರ್, ವಾರುಣಿ, ಸಂಪಾದಕ ಕೆ.ಸಿ.ಶಿವಾರೆಡ್ಡಿ ಭಾಗವಹಿಸಿದ್ದರು.





ಓದುಗ ತಮ್ಮ ಕೃತಿಗಳನ್ನು ಹೇಗೆ ಓದಬೇಕು ಎನ್ನುವುದನ್ನು ಕುವೆಂಪು ಕಲಿಸಿದ್ದಾರೆ. ಈಗಿನ ಬಹಳಷ್ಟು ಜನ ಲೇಖಕರಿಗೆ ಸ್ವಜಾತಿ ವಿಮರ್ಶೆ, ಆತ್ಮ ವಿಮರ್ಶೆಯ ಪ್ರಜ್ಞೆ ಇಲ್ಲ. ತೇಜಸ್ವಿ ಮತ್ತು ಕುವೆಂಪು ಅವರಲ್ಲಿ ಆತ್ಮವಿಮರ್ಶಾ ಪ್ರಜ್ಞೆ ಇತ್ತು. ಪ್ರಸ್ತುತ ಕಾಲಮಾನದೊಳಗೆ, ಹಿಂಸೆಯ ವಾತಾವರಣದೊಳಗೆ ನರಳುತ್ತಿದ್ದಂತಹ ಮಕ್ಕಳಿಗೆ, ಯುವಕರಿಗೆ ಕುವೆಂಪು ಮತ್ತು ತೇಜಸ್ವಿಯವರ ಸಾಹಿತ್ಯ ಸೌಹಾರ್ದ, ಒಳಗೊಳ್ಳುವ ಪ್ರಜ್ಞೆಯ ಲೋಕದರ್ಶನ ಕಟ್ಟಿಕೊಳ್ಳುವುದಕ್ಕೆ ಸಾಧ್ಯ ಮಾಡಿದೆ.

-ಪ್ರೊ.ಎಸ್.ಜಿ.ಸಿದ್ದರಾಮಯ್ಯ, ಹಿರಿಯ ಸಾಹಿತಿ

ವಿಜಯವಾಣಿ ನಂ.1 ಕನ್ನಡ ದಿನಪತ್ರಿಕೆ
Jul 28, 2024

# ಕನ್ನಡಿಗರಿಗೆ ಉದ್ಯೋಗ, ಹೋರಾಟ

## ವಿ. ರಾಣಿ ಗೋವಿಂದರಾಜು ಅಭಿಮತ । ಗಾಂಧಿನಗರ ಕ್ಷೇತ್ರದಲ್ಲಿ ಸಾಹಿತ್ಯ ಸಮ್ಮೇಳನ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಕರ್ನಾಟಕದಲ್ಲಿ ಕನ್ನಡಿಗರಿಗೆ ಉದ್ಯೋಗ ದೊರೆಯುವಂತಾಗಲು, ಕನ್ನಡ ಸಂಘ-ಸಂಸ್ಥೆಗಳು ಹಾಗೂ ಕನ್ನಡ ಹೋರಾಟಗಾರರ ನೇತೃತ್ವದಲ್ಲಿ ಹೋರಾಟ ರೂಪಿಸುವ ತುರ್ತು ಅಗತ್ಯವಿದೆ ಎಂದು ಗಾಂಧಿನಗರ ಕ್ಷೇತ್ರದ 5ನೇ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷೆ ವಿ. ರಾಣಿ ಗೋವಿಂದರಾಜು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

...ಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಶನಿವಾರ ನಡೆದ ...ಧಿನಗರ ಕ್ಷೇತ್ರದ 5ನೇ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ವಹಿಸಿ ಮಾತನಾಡಿದರು. ಕನ್ನಡ ನಾಡಿನಲ್ಲಿ ಕನ್ನಡಿಗರು ಇಂದು ಉದ್ಯೋಗ ಕೊಡಿ ಎಂದು ಅಂಗಲಾಚುವ ಪರಿಸ್ಥಿತಿ ನಿರ್ಮಾಣವಾಗಿದೆ. ಇದಕ್ಕೆ ಪರಿಹಾರ ಕಂಡುಕೊಳ್ಳಲು ಹೋರಾಟ ಅನಿವಾರ್ಯ ಎಂದರು.

ಭವಿಷ್ಯದಲ್ಲೂ ಕನ್ನಡ ಭಾಷೆ ಮತ್ತು ಸಂಸ್ಕೃತಿ ಉಳಿಯುವಂತಾಗಲು ಪ್ರಾಥಮಿಕ ಶಿಕ್ಷಣ ಕನ್ನಡ ಭಾಷೆಯಲ್ಲಿ ಕಡ್ಡಾಯಗೊಳಿಸಬೇಕು. ಜೊತೆಗೆ ವ್ಯಾಪಾರಕ್ಕಾಗಿ ಹೊರಗಡೆಯಿಂದ ರಾಜಧಾನಿಗೆ ಬಂದು ನೆಲೆಸಿರುವ ಅನ್ಯಭಾಷಿಕರು ವ್ಯಾಪಾರಕ್ಕೆ ಸೀಮಿತವಾಗಿ ಕನ್ನಡ ಕಲಿಯುತ್ತಿದ್ದಾರೆ. ಅವರಿಗೆ ಕನ್ನಡ ಮಾತನಾಡುವುದಷ್ಟೇ ಅಲ್ಲ ಒತ್ತಾಯಪೂರ್ವಕವಾಗಿ ಕನ್ನಡ ಓದಲು-ಬರೆಯಲು ಕಲಿಸಬೇಕಿದೆ ಎಂದರು.

ಕನ್ನಡ ಹೋರಾಟ ನೆಪವಾಗದಿರಲಿ: ಕನ್ನಡ ಸಂಘ, ಕನ್ನಡ ಧ್ವಜ, ಕನ್ನಡ ಹೋರಾಟ ಇವು ನೆಪಮಾತ್ರಕ್ಕೆ ಆಗದೆ, ಮನಸ್ಸಿನ ಆಳದಲ್ಲಿ ಕನ್ನಡದ ಬಗೆಗೆ ಪ್ರೀತಿ ಬೆಳೆಸಿಕೊಳ್ಳಬೇಕು. ಹೃದಯಾಂತರಾಳದಿಂದ ಕನ್ನಡ ಮಾತನಾಡುವ, ಕಲಿಯುವ ಹಾಗೂ ಇತರರಿಗೂ ಕಲಿಸುವ ಕೆಲಸ ಆಗಬೇಕು. ಆಡಳಿತದಲ್ಲಿ ಕನ್ನಡ ಭಾಷೆ ಕಡ್ಡಾಯ ಎಂಬ ಸರ್ಕಾರದ ಆದೇಶ ಪೂರ್ಣ ಪ್ರಮಾಣದಲ್ಲಿ ...ಷ್ಠಾನಗೊಂಡಿಲ್ಲ. ಕರ್ನಾಟಕ ಏಕೀಕರಣದ ಸುವರ್ಣ ಸಂಭ್ರಮದ ಸಂದರ್ಭದಲ್ಲಾದರೂ ಆಡಳಿತದಲ್ಲಿ ಕನ್ನಡ ಅನುಷ್ಠಾನ, ನಾಮಫಲಕಗಳಲ್ಲಿ ಕನ್ನಡಕ್ಕೆ ಆದ್ಯತೆ, ಕನ್ನಡದಲ್ಲಿ ಪ್ರಾಥಮಿಕ ಶಿಕ್ಷಣ, ಕನ್ನಡಿಗರಿಗೆ ಉದ್ಯೋಗದಲ್ಲಿ ಆದ್ಯತೆಯಂತಹ ಬೇಡಿಕೆಗಳು ಈಡೇರುವಂತಾಗಲಿ ಎಂದು ಹೇಳಿದರು.


ಚಿತ್ರ: ವಿಜಯವಾಣಿ

ನಗರದ ಶೇಷಾದ್ರಿಪುರಂ ಕಾಲೇಜಿನಲ್ಲಿ ಶನಿವಾರ ನಡೆದ ಗಾಂಧಿನಗರ ಕ್ಷೇತ್ರದ 5ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಆರೋಗ್ಯ ಸಚಿವ ದಿನೇಶ್ ಗುಂಡೂರಾವ್ ಉದ್ಘಾಟಿಸಿದರು. ಸಮ್ಮೇಳನಾಧ್ಯಕ್ಷೆ ರಾಣಿ ಗೋವಿಂದರಾಜು, ಶೇಷಾದ್ರಿಪುರ ಶಿಕ್ಷಣ ದತ್ತಿಯ ವೂಡೇ ಪಿ. ಕೃಷ್ಣ, ಬೆಂ.ನಗರ ಜಿಲ್ಲೆ ಕಸಾಪ ಅಧ್ಯಕ್ಷ ಪ್ರಕಾಶಮೂರ್ತಿ, ಗಾಂಧಿನಗರ ಕ್ಷೇತ್ರ ಕಸಾಪ ಅಧ್ಯಕ್ಷ ಗೌಡಗೆರೆ ಮಾಯುಶ್ರೀ ಇತರರಿದ್ದರು.


ಸಮ್ಮೇಳನದಲ್ಲಿ ಪಾಲ್ಗೊಂಡಿದ್ದ ವಿವಿಧ ವೇಷಧಾರಿ ಮಕ್ಕಳು.

### ಕನ್ನಡ ಸೇವೆಗೆ ಯುವಜನ ಸಜ್ಜಾಗಲಿ

ಸಮ್ಮೇಳನಕ್ಕೆ ಚಾಲನೆ ನೀಡಿದ ಆರೋಗ್ಯ ಸಚಿವ ದಿನೇಶ್ ಗುಂಡೂರಾವ್ ಮಾತನಾಡಿ, ದೇಶದ ಪ್ರಾಚೀನ ಭಾಷೆಗಳಲ್ಲಿ ಒಂದಾದ ಕನ್ನಡದಲ್ಲಿ ಜ್ಞಾನ ಸಂಪಾದಿಸಿಕೊಂಡು ಯುವಜನರು ಕನ್ನಡ ಸೇವೆಗೆ ಸಜ್ಜಾಗಬೇಕು ಎಂದು ಕರೆ ನೀಡಿದರು. ವಿಶ್ವದ ಯಾವುದೇ ಮೂಲೆಗೆ ಹೋದರೂ ಅಲ್ಲಿ ಕನ್ನಡಿಗರು ನೆಲೆಸಿರುವುದನ್ನು ಕಾಣಬಹುದಾಗಿದೆ. ಇದಕ್ಕೆ ಕಾರಣ ಕನ್ನಡ ಭಾಷೆ, ಸಾಹಿತ್ಯ, ಸಂಸ್ಕೃತಿಯಲ್ಲಿ ಅಡಗಿರುವ ಅಪಾರ ಜ್ಞಾನ ಸಂಪತ್ತು. ಮಹಾನ್ ನಾಯಕರು ಹುಟ್ಟಿ ಬೆಳೆದ, ನಡೆದಾಡಿದ ಗಾಂಧಿನಗರ ಕ್ಷೇತ್ರದಲ್ಲಿ ಸಮ್ಮೇಳನ ನಡೆಯುತ್ತಿರುವುದು ಸಂತೋಷದ ವಿಚಾರ. ಕನ್ನಡ ಭಾಷೆ ಮತ್ತು ಸಂಸ್ಕೃತಿಯನ್ನು ಮತ್ತಷ್ಟು ಶ್ರೀಮಂತಗೊಳಿಸುವ ಜವಾಬ್ದಾರಿ ಇಂದಿನ ಯುವಜನರ ಮೇಲಿದೆ ಎಂದರು.

### ಅದ್ದೂರಿ ಮೆರವಣಿಗೆ

ಸಮ್ಮೇಳನಕ್ಕೂ ಮುನ್ನ ಶ್ರೀರಾಮಪುರದ ಸನ್‌ರೈಸ್ ವೃತ್ತದಿಂದ ಶೇಷಾದ್ರಿಪುರಂ ಕಾಲೇಜುವರೆಗೆ ಜಾನಪದ ಕಲಾ ಮೇಳಗಳೊಂದಿಗೆ ಸಮ್ಮೇಳನಾಧ್ಯಕ್ಷರ ಅದ್ದೂರಿ ಮೆರವಣಿಗೆ ನಡೆಯಿತು. ಈ ವೇಳೆ ಶಾಲಾ ವಿದ್ಯಾರ್ಥಿಗಳು, ಕನ್ನಡಾಭಿಮಾನಿಗಳು ಕನ್ನಡ ಬಾವುಟ ಹಿಡಿದು ಸಾಗುವ ಮೂಲಕ ಕನ್ನಡ ಜಾಗೃತಿ ಮೂಡಿಸಿದರು. ಸಮ್ಮೇಳನದಲ್ಲಿ ಕವಿಗೋಷ್ಠಿ ಹಾಗೂ ಕನ್ನಡ ನಾಳೆಗಳು ಹೇಗಿರಬೇಕು ಹಾಗೂ ಸರ್ವಜನಾಂಗದ ಶಾಂತಿಯ ತೋಟ - ಗಾಂಧಿನಗರ ಕ್ಷೇತ್ರ ವಿಷಯ ಕುರಿತು ಗೋಷ್ಠಿಗಳು ನಡೆಯಿತು. ಕನ್ನಡ ಸೇವೆ ಸಲ್ಲಿಸಿದ ಹಾಗೂ ವಿವಿಧ ಕ್ಷೇತ್ರಗಳಲ್ಲಿ ಸಾಧನೆಗೈದ 50 ಕ್ಕೂ ಹೆಚ್ಚು ಸಾಧಕರನ್ನು ಸನ್ಮಾನಿಸಲಾಯಿತು. ಶೇಷಾದ್ರಿಪುರ ಶಿಕ್ಷಣ ದತ್ತಿಯ ವೂಡೇ ಪಿ. ಕೃಷ್ಣ, ಬೆಂಗಳೂರು ನಗರ ಜಿಲ್ಲೆ ಕಸಾಪ ಅಧ್ಯಕ್ಷ ಎಂ. ಪ್ರಕಾಶಮೂರ್ತಿ, ಗಾಂಧಿನಗರ ವಿಧಾನಸಭಾ ಕ್ಷೇತ್ರ ಕಸಾಪ ಅಧ್ಯಕ್ಷ ಗೌಡಗೆರೆ ಮಾಯುಶ್ರೀ ಇತರರು ಉಪಸ್ಥಿತರಿದ್ದರು.

# ಕನ್ನಡದಲ್ಲಿ ಸಾಂಸ್ಕೃತಿಕ ಭಂಡಾರವೇ ಇದೆ: ಸಚಿವ ದಿನೇಶ್ ಗುಂಡೂರಾವ್

## ಗಾಂಧಿನಗರ ವಿಧಾನಸಭಾ ಕ್ಷೇತ್ರದಲ್ಲಿ 5ನೇ ಕನ್ನಡ ಸಾಹಿತ್ಯ ಸಮ್ಮೇಳನ ಉದ್ಘಾಟನೆ

■ ಉದಯವಾಣಿ ಸಮಾಚಾರ

ಬೆಂಗಳೂರು: ಕನ್ನಡ ಭಾಷೆಯಲ್ಲಿ ಅಪಾರ ಜ್ಞಾನ ಭಂಡಾರ ಅಡಗಿದ್ದು, ದೇಶ ವಿದೇಶಗಳಲ್ಲಿ ಪಸರಿಸಿದೆ. ಹಲವು ದೇಶಗಳಲ್ಲಿ ಕನ್ನಡಿಗರು ನೆಲೆಸಿದ್ದು, ಅವರು ಕೂಡ ಕನ್ನಡ ಕಟ್ಟುವ ಕೆಲಸ ಮಾಡುತ್ತಿದ್ದಾರೆ ಎಂದು ಆರೋಗ್ಯ ಸಚಿವ ದಿನೇಶ್ ಗುಂಡೂರಾವ್ ಹೇಳಿದರು.

ಬೆಂಗಳೂರು ನಗರ ಕನ್ನಡ ಸಾಹಿತ್ಯ ಪರಿಷತ್ತು ಶನಿವಾರ ಶೇಷಾದ್ರಿಪುರಂ ಕಾಲೇಜಿನಲ್ಲಿ ಹಮ್ಮಿಕೊಂಡಿದ್ದ ಗಾಂಧಿನಗರ ವಿಧಾನ ಸಭಾ ಕ್ಷೇತ್ರದ 5ನೇ ಕನ್ನಡ ಸಾಹಿತ್ಯ ಸಮ್ಮೇಳನ ಉದ್ಘಾಟಿಸಿ ಅವರು ಮಾತನಾಡಿದರು.

ದೇಶದ ಪ್ರಾಚೀನ ಭಾಷೆಗಳಲ್ಲಿ ಒಂದಾದ ಕನ್ನಡದಲ್ಲಿ ಸಾಂಸ್ಕೃತಿಕ ಭಂಡಾರವೇ ಇದೆ. ಕನ್ನಡ ಭಾಷೆಯ ಜ್ಞಾನ ವಿಶ್ವಾದ್ಯಂತ ಪಸರಿಸಿದೆ. ಯಾವುದೇ ದೇಶಕ್ಕೆ ಹೋದರೂ ನಮ್ಮ ಕನ್ನಡಿಗರು ನೆಲೆಸಿರುವುದನ್ನು ಕಾಣುತ್ತೇವೆ. ಕನ್ನಡ ಭಾಷೆಗಿರುವ ಜ್ಞಾನ ಸಂಪತ್ತಿನಿಂದಾಗಿ ಇದು ಸಾಧ್ಯವಾಗಿದೆ ಎಂದು ಹೇಳಿದರು.

ಕನ್ನಡ ಭಾಷೆಯಲ್ಲಿ ಶ್ರೀಮಂತಿಕೆ ಅಡಗಿದೆ. ಅನೇಕ ಸಾಧಕರು ಸಾಹಿತ್ಯ ಕ್ಷೇತ್ರ ಸೇರಿದಂತೆ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ್ದಾರೆ. ಕನ್ನಡದ ಜ್ಞಾನ ಸಂಪತ್ತನ್ನು ಮುಂದಿನ ಪೀಳಿಗೆಗೆ ತಲುಪಿಸುವ ಕೆಲಸ ಆಗಬೇಕಾಗಿದೆ ಎಂದು ತಿಳಿಸಿದರು.

ಬೆಂಗಳೂರು ನಗರ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷ ಪ್ರಕಾಶಮೂರ್ತಿ ಮಾತನಾಡಿ, ಬೆಂಗಳೂರಿನಲ್ಲಿ ಕನ್ನಡ ಉಳಿದೀತು ಎಂಬ ಮಾತಿದೆ. ಈಗ ಗಾಂಧಿನಗರದಲ್ಲಿ ಕನ್ನಡ ಉಳಿದರೆ ಬೆಂಗಳೂರಿನಲ್ಲಿ ಕನ್ನಡ ಉಳಿದೀತು ಎನ್ನುವಂತಹ ವಾತಾವರಣ ಸೃಷ್ಟಿಯಾಗಿದೆ. ಬೆಂಗಳೂರು ದಿನೇ ದಿನ ವಲಸಿಗರ ತಾಣವಾಗುತ್ತಿದೆ. ಕನ್ನಡಿಗರೇ ಅಲ್ಪಸಂಖ್ಯಾತರಾಗುತ್ತಿದ್ದಾರೆ. ಈ ಹಿನ್ನೆಲೆಯಲ್ಲಿ ಕನ್ನಡಪರ ಹೋರಾಟಗಾರರು, ಕನ್ನಡ ಸಂಘಟನೆಗಳು ರಾಜಧಾನಿ ಬೆಂಗಳೂರಿನಲ್ಲಿ ಕನ್ನಡ ಉಳಿಸಿ ಬೆಳೆಸುವ ನಿಟ್ಟಿನಲ್ಲಿ ಮತ್ತಷ್ಟು ಕೆಲಸ ಮಾಡಬೇಕಾಗಿದೆ ಎಂದು ತಿಳಿಸಿದರು.



ಶೇಷಾದ್ರಿಪುರಂ ಕಾಲೇಜಿನಲ್ಲಿ ನಡೆದ ಗಾಂಧಿನಗರ ವಿಧಾನಸಭಾಕ್ಷೇತ್ರದ 5ನೇ ಕನ್ನಡ ಸಾಹಿತ್ಯ ಸಮ್ಮೇಳನವನ್ನು ಆರೋಗ್ಯ ಸಚಿವ ದಿನೇಶ್ ಗುಂಡೂರಾವ್ ಉದ್ಘಾಟಿಸಿದರು. ಸಮ್ಮೇಳನಾಧ್ಯಕ್ಷರಾದ ಸಾಹಿತಿ ವಿ.ರಾಣಿ ಗೋವಿಂದರಾಜ್, ಕಸಾಪ ಜಿಲ್ಲಾಧ್ಯಕ್ಷ ಪ್ರಕಾಶ್ ಮೂರ್ತಿ ಇತರರು ಹಾಜರಿದ್ದರು.

ಗಾಂಧಿನಗರದಲ್ಲಿ ಕನ್ನಡ ಭವನ ಅಗತ್ಯವಿದೆ. ಕನ್ನಡ ಕಾರ್ಯಕ್ರಮಗಳು ನಡೆಸಲು ಭವನ ಅಗತ್ಯವಿರುವುದರಿಂದ ಸಚಿವ ದಿನೇಶ್ ಗುಂಡೂರಾವ್ ಅವರು ಬಿಡಿಎ ಇಲ್ಲವೇ ಸರ್ಕಾರಿ ಜಾಗದಲ್ಲಿ ಕನ್ನಡ ಭವನ ನಿರ್ಮಿಸುವ ಕೆಲಸ ಮಾಡಬೇಕು. ಗಾಂಧಿನಗರ ಕ್ಷೇತ್ರ ಹಲವು ವಿಶಿಷ್ಟಗಳಿಂದ ಕೂಡಿದ ಪ್ರದೇಶವಾಗಿದ್ದು ಹಲವು ಭಾಷಿಗರು ಇಲ್ಲಿ ನೆಲೆಸಿದ್ದಾರೆ. ತೆಲುಗು, ತಮಿಳು ಸೇರಿದಂತೆ ಇನ್ನಿತರ ಸಮುದಾಯದ ಭಾಷೆಯ ಸ್ನೇಹಿತರು ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಿರುವುದು ಖುಷಿ ಕೊಟ್ಟಿದೆ ಎಂದರು.

ಸಮ್ಮೇಳನದ ಸರ್ವಾಧ್ಯಕ್ಷರಾದ ಸಾಹಿತಿ ವಿ.ರಾಣಿ ಗೋವಿಂದರಾಜ್ ಮಾತನಾಡಿ, ಒಂದು ಕಾಲದಲ್ಲಿ ಬೆಂಗಳೂರಿನ ಚಿತ್ರಮಂದಿರಗಳಲ್ಲಿ ತಮಿಳು ಸೇರಿದಂತೆ ಪರಭಾಷೆಯ ಚಿತ್ರಗಳೇ ಪ್ರದರ್ಶನ ಕಾಣುತ್ತಿದ್ದವು. ಕನ್ನಡ ಭಾಷೆಯ ಚಿತ್ರಗಳಿಗೆ ಅವಕಾಶವೇ ಇರಲಿಲ್ಲ. ಅಂತಹ ಸಂದರ್ಭದಲ್ಲಿ ಕನ್ನಡ ಚಳವಳಿ ವಾಟಾಳ್ ಪಕ್ಷದ ನಾಯಕ ವಾಟಾಳ್ ನಾಗರಾಜ್ ಅವರ ಹೋರಾಟವನ್ನು ಕನ್ನಡಿಗರು ಮರೆಯುವಂತಿಲ್ಲ. ರಾಜಧಾನಿ ಬೆಂಗಳೂರನ್ನು ಪರಕೀಯರಿಂದ ರಕ್ಷಣೆ ಮಾಡಿದ ಶ್ರೇಯಸ್ಸು ಅನಕೃ, ಮ.ರಾಮಮೂರ್ತಿ, ವಾಟಾಳ್ ನಾಗರಾಜ್ ಸೇರಿದಂತೆ ಹಲವು ಕನ್ನಡಪರ ಹೋರಾಟಗಾರರಿಗೆ ಸಲ್ಲುತ್ತದೆ ಎಂದರು. ಬೆಳಗ್ಗೆಯಿಂದ ಸಂಜೆಯವರೆಗೂ ವಿವಿಧ ಕವಿಗೋಷ್ಠಿ ಮತ್ತು ಚರ್ಚಾಗೋಷ್ಠಿಗಳು ನಡೆದವು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಕಾರ್ಯದರ್ಶಿ ಪ್ರೊ. ವೂಡೇ ಪಿ. ಕೃಷ್ಣ, ಗಾಂಧಿನಗರ ವಿಧಾನ ಸಭಾ ಕ್ಷೇತ್ರದ ಕಸಾಪ ಅಧ್ಯಕ್ಷ ಗೌಡಗೆರೆ ಮಾಯುಶ್ರೀ ಸೇರಿದಂತೆ ಮತ್ತಿತರರು ಉಪಸ್ಥಿತರಿದ್ದರು.

ಪ್ರಜಾವಾಣಿ

Jul 28, 2024

# ‘ಕನ್ನಡ ಇತಿಹಾಸ ಯುವಪೀಳಿಗೆಗೆ ತಿಳಿಸಿ’

ಪ್ರಜಾವಾಣಿ ವಾರ್ತೆ

ಬೆಂಗಳೂರು: ‘ಕನ್ನಡದ ಭವ್ಯ ಇತಿಹಾಸ ಕುರಿತು ಯುವ ಪೀಳಿಗೆಗೆ ತಿಳಿಸುವ ಕೆಲಸವಾಗಬೇಕು’ ಎಂದು ಆರೋಗ್ಯ ಸಚಿವ ದಿನೇಶ್ ಗುಂಡೂರಾವ್ ಹೇಳಿದರು.

ಗಾಂಧಿನಗರ ವಿಧಾನಸಭಾ ಕ್ಷೇತ್ರದಲ್ಲಿ ಕನ್ನಡ ಸಾಹಿತ್ಯ ಪರಿಷತ್ ಶನಿವಾರ ಆಯೋಜಿಸಿದ್ದ ಐದನೇ ಕನ್ನಡ ಸಾಹಿತ್ಯ ಸಮ್ಮೇಳನ ಉದ್ಘಾಟಿಸಿ ಮಾತನಾಡಿದರು.

ಕನ್ನಡದ ಕಾವ್ಯಗಳು, ನಾಟಕಗಳು, ಕಥೆಗಳು, ಕಾದಂಬರಿಗಳು ಹಾಗೂ ವಚನಗಳ ಬಗ್ಗೆ ಓದುಗರಲ್ಲಿ ಜಾಗೃತಿ ಮೂಡಿಸಬೇಕು. ಕನ್ನಡ ಭಾಷೆಗೆ ಎರಡು ಸಾವಿರ ವರ್ಷಗಳ ಇತಿಹಾಸ ಇದೆ. ಕನ್ನಡಿಗರು ವಿಶ್ವ ಮಟ್ಟದಲ್ಲಿ ಹೆಸರು ಮಾಡಿದ್ದಾರೆ. ಕನ್ನಡ ಉಳಿಸಿ, ಬೆಳೆಸುವುದು ಪ್ರತಿಯೊಬ್ಬರ ಕರ್ತವ್ಯ ಎಂದು ನುಡಿದರು.

ಸಮ್ಮೇಳನಾಧ್ಯಕ್ಷೆ ವಿ.ವಾಣಿ ಗೋವಿಂದರಾಜು ಅವರು, ಐ.ಟಿ ಕಚೇರಿ, ಕಾರ್ಖಾನೆಗಳು, ಕೇಂದ್ರ ಸರ್ಕಾರದ ಕಚೇರಿಗಳಲ್ಲಿ ಕನ್ನಡ ಸಂಘ ಸ್ಥಾಪಿಸಿ ಕನ್ನಡ ಓದಲು, ಬರೆಯಲು ಮಾತನಾಡಲು ಪ್ರೋತ್ಸಾಹಿಸಬೇಕು ಎಂದು ಹೇಳಿದರು.



ಗಾಂಧಿನಗರ ವಿಧಾನಸಭೆ ಕ್ಷೇತ್ರದ 5ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ನಿಕಟಪೂರ್ವ ಅಧ್ಯಕ್ಷ ವೂಡೇ ಪಿ. ಕೃಷ್ಣ ಅವರು ಸಮ್ಮೇಳನಾಧ್ಯಕ್ಷೆ ವಿ. ರಾಣಿ ಗೋವಿಂದರಾಜು ಅವರಿಗೆ ಕನ್ನಡ ಬಾವುಟ ನೀಡಿದರು. ಕಾಟನ್ ಪೇಟೆ ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷ ಶ್ರೀನಿವಾಸಮೂರ್ತಿ, ಗಾಂಧಿನಗರ ಬ್ಲಾಕ್ ಕಾಂಗ್ರೆಸ್ ಅಧ್ಯಕ್ಷ ಶರವಣ, ಸಚಿವ ದಿನೇಶ್ ಗುಂಡೂರಾವ್, ಬೆಂಗಳೂರು ನಗರ ಜಿಲ್ಲಾ ಕಸಾಪ ಅಧ್ಯಕ್ಷ ಎಂ. ಪ್ರಕಾಶಮೂರ್ತಿ, ಗಾಂಧಿನಗರ ಕ್ಷೇತ್ರದ ಕಸಾಪ ಅಧ್ಯಕ್ಷ ಗೌಡಗೆರೆ ಮಾಯುಶ್ರೀ ಇದ್ದರು – ಪ್ರಜಾವಾಣಿ ಚಿತ್ರ

‘ಗ್ರಾಮೀಣ ಪ್ರದೇಶದಲ್ಲಿ ಕನ್ನಡ ಶಾಲೆಗಳು ಮುಚ್ಚುವ ಸ್ಥಿತಿಯಲ್ಲಿವೆ. ಕನ್ನಡ ಶಾಲೆಗಳನ್ನು ಉಳಿಸಿಕೊಳ್ಳಬೇಕಾದ ಅಗತ್ಯವಿದೆ’ ಎಂದು ಹೇಳಿದರು.

ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು ನಗರ ಘಟಕ ಅಧ್ಯಕ್ಷ ಪ್ರಕಾಶ್ ಮೂರ್ತಿ ಅವರು ವಿಧಾನಸಭಾ ಕ್ಷೇತ್ರದಲ್ಲಿ ಬಿಡಿಎ ಅಥವಾ ಬಿಬಿಎಂಪಿ ಜಾಗದಲ್ಲಿ ಗಾಂಧಿ ಭವನ ನಿರ್ಮಿಸಿಕೊಡಬೇಕು ಎಂದು ಸಚಿವರಿಗೆ ಮನವಿ ಮಾಡಿದರು.

ಇದಕ್ಕೂ ಮುನ್ನ ಧ್ವಜಾರೋಹಣದ ಬಳಿಕ ಶ್ರೀರಾಮಪುರ ಸನ್ ರೈಸ್ ವೃತ್ತದಿಂದ ಶೇಷಾದ್ರಿಪುರದ ವರೆಗೆ ಸಮ್ಮೇಳನಾಧ್ಯಕ್ಷೆಯವರ ಹಾಗೂ ಕನ್ನಡ ಜಾಗೃತಿ ಮೆರವಣಿಗೆ ನಡೆಯಿತು. ಮಕ್ಕಳು, ಕನ್ನಡಾಭಿಮಾನಿಗಳು ಮೆರವಣಿಗೆಯಲ್ಲಿ ಸಾಗಿ ಮೆರುಗು ಹೆಚ್ಚಿಸಿದರು.

ಸಾಧಕರಿಗೆ ಸನ್ಮಾನ: ಕವಿಗೋಷ್ಠಿ, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಕನ್ನಡಕ್ಕಾಗಿ ಸೇವೆ ಸಲ್ಲಿಸಿದ ಹಾಗೂ ವಿವಿಧ ಕ್ಷೇತ್ರದ ಸಾಧಕರನ್ನು ಗೌರವಿಸಲಾಯಿತು.

ಗಾಂಧಿನಗರ ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಗೌಡಗೆರೆ ಮಾಯುಶ್ರೀ, ನಿಕಟಪೂರ್ವ ಅಧ್ಯಕ್ಷ ವೂಡೇ ಪಿ.ಕೃಷ್ಣ, ಮಹಾನಗರ ಪಾಲಿಕೆ ಮಾಜಿ ಸದಸ್ಯರಾದ ಟಿ. ಮಲ್ಲೇಶ್, ಆರ್.ಸತ್ಯನಾರಾಯಣ, ಲತಾ ರಾಥೋಡ್, ಶರವಣ, ಶಿವಕುಮಾರ್ ಭಾಗವಹಿಸಿದ್ದರು.

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

Jul 27, 2024

# ಈ ಸಂಜೆ



ಗಾಂಧಿನಗರ ವಿಧಾನ ಸಭಾ ಕ್ಷೇತ್ರದ ಕನ್ನಡ ಸಾಹಿತ್ಯ ಪರಿಷತ್ ವತಿಯಿಂದ ಶೇಷಾದ್ರಿಪುರಂ ಕಾಲೇಜಿನಲ್ಲಿಂದು ಹಮ್ಮಿಕೊಂಡಿದ್ದ 5ನೇ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಆರೋಗ್ಯ ಸಚಿವ ದಿನೇಶ್ ಗುಂಡೂರಾವ್, ಸಮ್ಮೇಳನಾಧ್ಯಕ್ಷರಾದ ಎ. ರಾಣಿ ಗೋವಿಂದರಾಜು, ನಾಡೋಜ, ಪ್ರೊಫೆ. ಪಿ. ಕೃಷ್ಣ, ಗೌಡಗೆರೆ ಮಾಯುಶ್ರೀ ಮತ್ತಿತರರಿದ್ದರು.

VK
ವಿಜಯ ಕರ್ನಾಟಕ
Jul 27, 2024

# ಶಿಕ್ಷಣದ ಜತೆ ವ್ಯಕ್ತಿತ್ವ ಬೆಳಸಿಕೊಳ್ಳಿ



ತುಮಕೂರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ನಡೆದ ಏಳನೇ ವರ್ಷದ ಕಲಾ ಸಂಭ್ರಮ ಸಾಂಸ್ಕೃತಿಕ ಕಾರ್ಯಕ್ರಮ ತುಮಕೂರು ವಿವಿಯ ಕುಲಸಚಿವ ಪ್ರೊ. ಪ್ರಸನ್ನಕುಮಾರ್ ಕೆ. ಉದ್ಘಾಟಿಸಿದರು.

■ ವಿಕ ಸುದ್ದಿಲೋಕ ತುಮಕೂರು

ರಾಜ್ಯದಲ್ಲಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಜನಪ್ರಿಯ ಶಿಕ್ಷಣ ಸಂಸ್ಥೆಯಾಗಿದ್ದು, ಇಲ್ಲಿ ಶಿಕ್ಷಣ ಪಡೆಯುವುದೇ ಒಂದು ಪುಣ್ಯ ಎಂದು ತುಮಕೂರು ವಿವಿಯ ಕುಲಸಚಿವ ಪ್ರೊ. ಪ್ರಸನ್ನಕುಮಾರ್ ಕೆ ತಿಳಿಸಿದರು.

ನಗರದ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ನಡೆದ 7ನೇ ವರ್ಷದ ಕಲಾ ಸಂಭ್ರಮ ಸಾಂಸ್ಕೃತಿಕ ಕಾರ್ಯಕ್ರಮ ಉದ್ಘಾಟಿಸಿ ಮಾತನಾಡಿದ ಅವರು, ಶಿಕ್ಷಣದ ಜತೆಗೆ ಒಳ್ಳೆಯ ವ್ಯಕ್ತಿತ್ವ ಬೆಳಸಿಕೊಳ್ಳಿ, ನೀವು ಕಲಿತ ಶಿಕ್ಷಣ ಸಂಸ್ಥೆಯ ಬಗ್ಗೆ ಗೌರವ ಇರಬೇಕು. ಶಿಕ್ಷಣ ಕೇವಲ ನಾಲ್ಕು ಗೋಡೆಯ ಮಧ್ಯೆ ಇರಬಾರದು. ಪೋಷಕರ ಪರಿಶ್ರಮಕ್ಕೆ ಒಳ್ಳೆಯ ಬೆಲೆ ತರಬೇಕು. ಸಮಾಜದಲ್ಲಿ ಒಳ್ಳೆಯ ಸಾಧನೆ ಮಾಡಬೇಕು ಎಂದು ಕರೆ ನೀಡಿದರು.

ಸಿಂಡಿಕೇಟ್ ಮಾಜಿ ಸದಸ್ಯ ಸುನಿಲ್ ಪ್ರಸಾದ್ ಮಾತನಾಡಿ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಬಡ ವರ್ಗದವರಿಗೆ ಕಡಿಮೆ ವೆಚ್ಚದಲ್ಲಿ ಶಿಕ್ಷಣ ಕೊಡುತ್ತಿದೆ. ಇಂತಹ ಒಳ್ಳೆಯ ಸಂಸ್ಥೆ ನಮ್ಮ ತುಮಕೂರಿನಲ್ಲಿ ಇರುವುದು ಅದೃಷ್ಟ, ಇದರಲ್ಲಿ ಕಲಿತು ಬಡಜನರಿಗೆ ಸಹಾಯ ಮಾಡಿ ಎಂದರು.

ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇಪಿ ಕೃಷ್ಣ ಮಾತನ, ವಿದ್ಯಾರ್ಥಿಗಳು ವಿಶ್ವ ಮಾನವರಾಗಬೇಕು. ಆಚಾರ್ಯ ವಿನೋಬಾ ಬಾವೆ ಹೇಳುವಂತೆ ಜೈಜಗತ್ತು ಎಂದು ಬದುಕಬೇಕು. ನಮ್ಮ ಸಂಸ್ಥೆಯ ಶಕ್ತಿ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು, ಅವರಿಂದಾಗಿಯೇ ಬೆಳೆಯಲು ಕಾರಣ ಎಂದು ಹೇಳಿದರು.

ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷ ಡಬ್ಲ್ಯೂ.ಡಿ .ಅಶೋಕ್, ಪ್ರಿನ್ಸಿಪಾಲ್ ಡಾ.ಜಗದೀಶ ಜಿ.ಟಿ. ಹಾಗೂ ಸಿಬ್ಬಂದಿ ಹಾಜರಿದ್ದರು.

ಪ್ರಜಾ ಪ್ರಗತಿ

Jul 27, 2024

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ವಾರ್ಷಿಕೋತ್ಸವದಲ್ಲಿ ಡಾ. ವೂಡೆ ಪಿ. ಕೃಷ್ಣ

# ಶಿಕ್ಷಣದ ಜೊತೆಗೆ ವ್ಯಕ್ತಿತ್ವ ಬೆಳೆಸಿಕೊಳ್ಳಿ



● ಪ್ರಜಾಪ್ರಗತಿ.ಕಾಂ

ತುಮಕೂರು: ಶಿಕ್ಷಣದ ಜೊತೆಗೆ ಒಳ್ಳೆಯ ವ್ಯಕ್ತಿತ್ವ ಬೆಳೆಸಿಕೊಳ್ಳಿ. ನೀವು ಕಲಿತ ಶಿಕ್ಷಣ ಸಂಸ್ಥೆಯ ಬಗ್ಗೆ ಗೌರವ ಇರಬೇಕು. ಶಿಕ್ಷಣ ಕೇವಲ ನಾಲ್ಕು ಗೋಡೆಯ ಮಧ್ಯೆ ಆಗಬಾರದು. ನಿಮ್ಮ ತಂದೆ ತಾಯಿಯವರ ಪರಿಶ್ರಮಕ್ಕೆ ಒಳ್ಳೆಯ ಬೆಲೆ ತರಬೇಕು. ಸಮಾಜದಲ್ಲಿ ಒಳ್ಳೆಯ ಸಾಧನೆ ಮಾಡಬೇಕು ಎಂದು ತುಮಕೂರು ವಿಶ್ವವಿದ್ಯಾನಿಲಯದ ಕುಲಸಚಿವರಾದ (ಮೌಲ್ಯಮಾಪನ) ಪ್ರೊ. ಕೆ. ಪ್ರಸನ್ನಕುಮಾರ್ ಕರೆ ನೀಡಿದರು.

ಅವರು ನಗರದ ತುಮಕೂರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯಲ್ಲಿ ಏಳನೇ ವರ್ಷದ ಕಲಾ ಸಂಭ್ರಮ ಸಾಂಸ್ಕೃತಿಕ ಕಾರ್ಯಕ್ರಮದಲ್ಲಿ ಮಾತನಾಡಿದರು.

ಕರ್ನಾಟಕಲ್ಲೇ ಶೇಷಾದ್ರಿಪುರರಂ ಶಿಕ್ಷಣ ಸಂಸ್ಥೆ ಜನಪ್ರಿಯ ಶಿಕ್ಷಣ ಸಂಸ್ಥೆಯಾಗಿದೆ. ಇಲ್ಲಿ ಶಿಕ್ಷಣ ಪಡೆಯುವುದೇ ಪುಣ್ಯ. ಶಿಕ್ಷಣದ ಜೊತೆಗೆ ಒಳ್ಳೆಯ ವ್ಯಕ್ತಿತ್ವ ಬೆಳೆಸಿಕೊಳ್ಳಿ. ನೀವು ಕಲಿತ ಶಿಕ್ಷಣ ಸಂಸ್ಥೆಯ ಬಗ್ಗೆ ಗೌರವ ಇರಬೇಕು. ಶಿಕ್ಷಣ ಕೇವಲ ನಾಲ್ಕು ಗೋಡೆಯ ಮಧ್ಯೆ ಆಗಬಾರದು. ನಿಮ್ಮ ತಂದೆ ತಾಯಿಯವರ ಪರಿಶ್ರಮಕ್ಕೆ ಒಳ್ಳೆಯ ಬೆಲೆ ತರಬೇಕು. ಸಮಾಜದಲ್ಲಿ ಒಳ್ಳೆಯ ಸಾಧನೆ ಮಾಡಿರಿ ಎಂದು ಸಲಹೆ ನೀಡಿದರು.

ತುಮಕೂರು ವಿವಿ ಸಿಂಡಿಕೇಟ್ ಮಾಜಿ ಸದಸ್ಯರಾದ ಸುನಿಲ್ ಪ್ರಸಾದ್ ಮಾತನಾಡಿ, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ಬಡವರ್ಗದವರಿಗೆ ಕಡಿಮೆ ವೆಚ್ಚದಲ್ಲಿ ಶಿಕ್ಷಣ ಕೊಡುತ್ತಿದೆ. ಇಂತಹ ಒಳ್ಳೆಯ ಸಂಸ್ಥೆ ನಮ್ಮ ತುಮಕೂರಿನಲ್ಲಿ ಇರುವುದು ಅದೃಷ್ಟ, ಇದರಲ್ಲಿ ಕಲಿತು ಬಡಜನರಿಗೆ ಸಹಾಯ ಮಾಡಿ ಎಂದು ಹೇಳಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಗೌರವ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ.ವೂಡೇ.ಪಿ.ಕೃಷ್ಣ ಮಾತನಾಡಿ, ವಿದ್ಯಾರ್ಥಿಗಳು ವಿಶ್ವಮಾನವರಾಗಬೇಕು. ಆಚಾರ್ಯ ವಿನೋಬಾ ಬಾವೆ ಹೇಳುವಂತೆ ಜೈ ಜಗತ್ತು ಎಂದು ಬದುಕಬೇಕು. ನಮ್ಮ ಸಂಸ್ಥೆಯ ಶಕ್ತಿ ವಿದ್ಯಾರ್ಥಿಗಳು ಮತ್ತು ಅಧ್ಯಾಪಕರು ಅವರಿಂದಾಗಿಯೇ ಬೆಳೆಯಲು ಕಾರಣ ಎಂದರು.

ನಮ್ಮ ಸಂಸ್ಥೆಯಲ್ಲಿ ಇರುವ ಅಧ್ಯಯನ ಕೇಂದ್ರಗಳಾದ ಬಸವ, ವಿವೇಕಾನಂದ, ಗಾಂಧಿ, ಅಂಬೇಡ್ಕರ್ ಮಹನೀಯರ ಸಂದೇಶಗಳು ನಿಮ್ಮ ಜೀವನಕ್ಕೆ ಬೆಳಕಾಗಲಿ ಎಂದು ಆಶಿಸಿದರು. ಕಾಲೇಜಿನ ವಿದ್ಯಾರ್ಥಿಗಳಿಂದ ವಿವಿಧ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ನಡೆಸಲಾಯಿತು. ಕಾರ್ಯಕ್ರಮದಲ್ಲಿ ಕಾಲೇಜಿನ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷರಾದ ಡಬ್ಲ್ಯೂ.ಡಿ . ಅಶೋಕ್, ಕಾಲೇಜಿನ ಪ್ರಾಂಶುಪಾಲರಾದ ಡಾ.ಜಗದೀಶ ಜೆ.ಟಿ. ಅಧ್ಯಾಪಕರು, ವಿದ್ಯಾರ್ಥಿಗಳು ಇದ್ದರು.

## ಹೊ. ಶ್ರೀನಿವಾಸಯ್ಯ ಜನ್ಮ ಶತಮಾನೋತ್ಸವದಲ್ಲಿ ಎಚ್‌.ಕೆ. ಪಾಟೀಲ ಕಳವಳ

# 'ಗಾಂಧಿ ತತ್ವಗಳ ಗಂಭೀರತೆ ಕುಸಿತ'

ಪ್ರಜಾವಾಣಿ ವಾರ್ತೆ

ಬೆಂಗಳೂರು: 'ಸಮಾಜದಲ್ಲಿ ಮಹಾತ್ಮ ಗಾಂಧೀಜಿ ತತ್ವ ಸಿದ್ಧಾಂತಗಳು, ವಿಚಾರಧಾರೆಗಳ ಬಗೆಗಿನ ಗಂಭೀರತೆ ಕುಸಿಯುತ್ತಿದೆ' ಎಂದು ಕಾನೂನು ಸಂಸದೀಯ ಹಾಗೂ ಪ್ರವಾಸೋದ್ಯಮ ಇಲಾಖೆ ಸಚಿವ ಎಚ್‌.ಕೆ. ಪಾಟೀಲ ಅವರು ಹೇಳಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ರಾಷ್ಟ್ರೀಯ ಸೇವಾ ಯೋಜನೆ, ಯುವ ಸಬಲೀಕರಣ ಇಲಾಖೆ, ಬೆಂಗಳೂರು ನಗರ ವಿಶ್ವವಿದ್ಯಾಲಯ, ಡಾ.ಹೊ. ಶ್ರೀನಿವಾಸಯ್ಯ ಚಾರಿಟಬಲ್ ಟ್ರಸ್ಟ್ ಸಹಯೋಗದಲ್ಲಿ ಶನಿವಾರ ನಡೆದ 'ಡಾ.ಹೊ. ಶ್ರೀನಿವಾಸಯ್ಯ ಜನ್ಮ ಶತಮಾನೋತ್ಸವ ಆಚರಣೆ' ಸಮಾರಂಭ ಉದ್ಘಾಟಿಸಿ ಅವರು ಮಾತನಾಡಿದರು.

'ಹೊ. ಶ್ರೀನಿವಾಸಯ್ಯ ಅವರು ಗಾಂಧೀಜಿ ಅವರನ್ನು ಸಂಪೂರ್ಣವಾಗಿ ಅರ್ಥೈಸಿಕೊಂಡು ಬಹಳಷ್ಟು ಮಂದಿಗೆ ತಿಳಿಸಿದ್ದಾರೆ. ಶ್ರೀನಿವಾಸಯ್ಯ ಅವರು ರಾಜ್ಯದ ವಿವಿಧ ಶಾಲಾ–ಕಾಲೇಜುಗಳಲ್ಲಿ ಗಾಂಧೀಜಿ ಅವರ ಕುರಿತಾಗಿ ಎರಡು ಸಾವಿರ ಉಪನ್ಯಾಸಗಳನ್ನು ನೀಡಿದ್ದಾರೆ. ಶಿಸ್ತು, ವಿನಯ, ದಿಟ್ಟತನ, ಗಟ್ಟಿತನವನ್ನು ಒಬ್ಬ ವ್ಯಕ್ತಿಯಲ್ಲಿ ಕಾಣಬೇಕಾದರೆ, ಅದು ಹೊ. ಶ್ರೀನಿವಾಸಯ್ಯ ಅವರಲ್ಲಿ ಮಾತ್ರ ಕಂಡುಕೊಳ್ಳಬಹುದಾಗಿತ್ತು' ಎಂದು ಸ್ಮರಿಸಿದರು.



ಡಾ.ಹೊ. ಶ್ರೀನಿವಾಸಯ್ಯ ಜನ್ಮ ಶತಮಾನೋತ್ಸವ ಕಾರ್ಯಕ್ರಮದಲ್ಲಿ ವೂಡೇ ಪಿ. ಕೃಷ್ಣ, ಎಚ್‌.ಕೆ. ಪಾಟೀಲ, ರಾಮಚಂದ್ರ ರಾಹಿ, ಎಸ್‌.ಜಿ. ಸಿದ್ಧರಾಮಯ್ಯ, ಡಿ.ಆರ್. ಪಾಟೀಲ, ಶಶಿಕೃಷ್ಣ ಅವರು ಹೊ. ಶ್ರೀನಿವಾಸಯ್ಯ ಅವರ ಭಾವಚಿತ್ರಕ್ಕೆ ಪುಷ್ಪ ನಮನ ಸಲ್ಲಿಸಿದರು ಪ್ರಜಾವಾಣಿ ಚಿತ್ರ

ಕೇಂದ್ರ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ರಾಮಚಂದ್ರ ರಾಹಿ, 'ಶ್ರೀನಿವಾಸಯ್ಯ ಅವರು ಒಬ್ಬ ಮಾನವತಾವಾದಿ ಆಗಿದ್ದರು. ಸದ್ಯದ ರಾಜಕೀಯ ವ್ಯವಸ್ಥೆ ಮತದಾರರನ್ನು ಗುಲಾಮರು, ಭಿಕ್ಷುಕರನ್ನಾಗಿ ಮಾಡಿದೆ. ಆದ್ದರಿಂದ, ಮತದಾರರು ಸಂವಿಧಾನ ನೀಡಿದ ಹಕ್ಕುಗಳಿಗಾಗಿ ಹೋರಾಟ ಮಾಡಬೇಕಾಗಿದೆ. ವಿಶ್ವಕ್ಕೆ ಗಾಂಧಿ ಅವರ ಸಂದೇಶ ನೀಡುವಲ್ಲಿ ವಿಫಲರಾಗಿದ್ದೇವೆ. ಜಗತ್ತು ಹಿಂಸೆ ಕಡೆಗೆ ಸಾಗುತ್ತಿದೆ' ಎಂದು ಕಳವಳ ವ್ಯಕ್ತಪಡಿಸಿದರು.



**ದೇಶದ ಪ್ರಧಾನಮಂತ್ರಿ ಯಾವ ಗುಣಮಟ್ಟದ ನೀರು ಕುಡಿಯುತ್ತಾರೋ, ಅದೇ ಗುಣಮಟ್ಟದ ನೀರು ಹಳ್ಳಿಯ ಕಟ್ಟಕಡೆಯ ವ್ಯಕ್ತಿಯು ಕುಡಿಯುವಂತಾಗಬೇಕು ಎಂಬ ಕಾರಣಕ್ಕೆ ಪ್ರತಿಯೊಂದು ಹಳ್ಳಿಯಲ್ಲೂ ಶುದ್ಧ ಕುಡಿಯುವ ನೀರಿನ ಘಟಕಗಳನ್ನು ಪ್ರಾರಂಭಿಸಿದ್ದೇವೆ**

**ಎಚ್‌.ಕೆ. ಪಾಟೀಲ**
ಕಾನೂನು ಸಂಸದೀಯ ಹಾಗೂ ಪ್ರವಾಸೋದ್ಯಮ ಇಲಾಖೆ ಸಚಿವ

ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷ ವೂಡೇ ಪಿ. ಕೃಷ್ಣ, ಉಪಾಧ್ಯಕ್ಷ ಎಸ್‌.ಜಿ. ಸಿದ್ಧರಾಮಯ್ಯ, ನಿರ್ದೇಶಕ ಜಿ.ಬಿ. ಶಿವರಾಜು, ಕೆ.ಎಚ್‌. ಪಾಟೀಲ ಪ್ರತಿಷ್ಠಾನದ ಅಧ್ಯಕ್ಷ ಡಿ.ಆರ್. ಪಾಟೀಲ, ಎಸ್‌ಜೆಆರ್‌ಸಿ ಕಾಲೇಜಿನ ಪ್ರಾಂಶುಪಾಲರಾದ ಪ್ರೇಮ ಸಿದ್ಧರಾಜು, ಡಾ. ಹೊ. ಶ್ರೀನಿವಾಸಯ್ಯ ಚಾರಿಟಬಲ್ ಟ್ರಸ್ಟ್‌ನ ಅಧ್ಯಕ್ಷ ಶಶಿಕೃಷ್ಣ ಅವರು ಭಾಗವಹಿಸಿದ್ದರು.

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

# ಈ ಸಂಜೆ



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ರಾಷ್ಟ್ರೀಯ ಸೇವಾ ಯೋಜನೆ ಯುವಸಬಲೀಕರಣ ಇಲಾಖೆ ಸಹಯೋಗದಲ್ಲಿ ಬೆಂಗಳೂರು ನಗರ ವಿವಿ ಆವರಣದಲ್ಲಿ ನಡೆದ ಡಾ.ಹೋ.ಶ್ರೀನಿವಾಸಯ್ಯ ಜನ್ಮ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಸಚಿವ ಎಚ್.ಕೆ.ಪಾಟೀಲ್, ಮಾಜಿ ಸಚಿವೆ ಲೀಲಾದೇವಿ ಆರ್.ಪ್ರಸಾದ್, ನಾಡೋಜ ಡಾ.ವೂಡೆ ಪಿ.ಕೃಷ್ಣ, ಡಾ.ಪ್ರೇಮಾ ಸಿದ್ದರಾಜು, ಡಾ.ಹೋ.ಶ್ರೀನಿವಾಸಯ್ಯ ಚಾರಿಟಬಲ್ ಟ್ರಸ್ಟ್ ಅಧ್ಯಕ್ಷ ಹರಿಕೃಷ್ಣ, ಪ್ರೊ.ಜಿ.ಬಿ.ಶಿವರಾಜು, ಪ್ರೊ.ಬಿ.ಎನ್.ನಾಯಕ್ ಮತ್ತಿತರ ಗಣ್ಯರು ಪಾಲ್ಗೊಂಡಿದ್ದರು.

Bengaluru Edition Edition

Jul 20, 2024 Page No. 6

Powered by: erelego.com

ಉದಯಕಾಲ ಶನಿವಾರ, ಜುಲೈ 20, 2024

# ಜಪಾನಂದಸ್ವಾಮೀಜಿ ಸಾನ್ನಿಧ್ಯದಲ್ಲಿ 1500 ವಿದ್ಯಾರ್ಥಿಗಳಿಗೆ ಪುನಶ್ಚೇತನಾ ಕಾರ್ಯಕ್ರಮ

ಉದಯಕಾಲ ನ್ಯೂಸ್

ಬೆಂಗಳೂರು: ತುಮಕೂರು ಶ್ರೀ ರಾಮಕೃಷ್ಣ ಸೇವಾಶ್ರಮ, ಪಾವಗಡ ಮತ್ತು ಶೇಷಾದ್ರಿಪುರಂ ವಿದ್ಯಾಸಂಸ್ಥೆಗಳ ಆಶ್ರಯದಲ್ಲಿ ಬೆಂಗಳೂರಿನ ಯಲಹಂಕ ಉಪನಗರದಲ್ಲಿ ಗುರುವಾರ ಸುಮಾರು 1500 ವಿದ್ಯಾರ್ಥಿ/ವಿದ್ಯಾರ್ಥಿನಿಯರ ಪುನಃಶ್ಚೇತನಾ ಕಾರ್ಯಕ್ರಮ ಹಾಗೂ ಉತ್ತಮ ವಿದ್ಯಾರ್ಥಿಗಳಿಗೆ ಪ್ರಶಸ್ತಿ ಪುರಸ್ಕಾರ ನೀಡುವ ಕಾರ್ಯಕ್ರಮ ನಡೆಯಿತು.

ಕಾರ್ಯಕ್ರಮದಲ್ಲಿ ದಿವ್ಯ ಸಾನಿಧ್ಯವನ್ನು ವಹಿಸಿದ್ದ ಸ್ವಾಮಿ ಜಪಾನಂದಜೀ ಮಹಾರಾಜ್ ರವರಿಗೆ ಪೂರ್ಣಕುಂಭದ ಸ್ವಾಗತ ದೊರೆಯಿತು. ಕಾರ್ಯಕ್ರಮದ ಉದ್ಘಾಟನೆ ನೆರವೇರಿಸಿದ ಸ್ವಾಮೀಜಿ ಭಾಷಣ ಮಾಡಿ, ವಿದ್ಯಾರ್ಥಿಗಳಿಗೆ ಮುಂದಿನ ಭವಿಷ್ಯವನ್ನು ರೂಪಿಸುವ ಅತ್ಯುತ್ತಮವಾದ ಅವಕಾಶ ಇದಾಗಿದೆ ಎಂದು ಬಣ್ಣಿಸಿ ಪಂಚ ಸೂತ್ರಗಳನ್ನು ವಿವರಿಸಿ ಇವೇ ಭಾರತೀಯ ಸನಾತನ ಧರ್ಮದ ಮೂಲ ಅಡಿಪಾಯ ಎಂದು ಹೇಳಿದರು. ಮೊದಲನೆಯದಾಗಿ ಮಾತಾ ಪಿತೃಗಳನ್ನು ಗೌರವದಿಂದ, ಪ್ರೀತಿಯಿಂದ ಹಾಗೂ ಆಪ್ಯಾಯತೆಯಿಂದ ಕಂಡು ಅವರು ನಿಮಗಾಗಿ ಅಹರ್ನಿಷಿ ಶ್ರಮಿಸುತ್ತಾ ನಿಮ್ಮ ಶಿಕ್ಷಣಕ್ಕಾಗಿ ಎಂತಹ ಕಷ್ಟಗಳನ್ನು ಎದುರಿಸುತ್ತಾ ನಿಮಗೆ ಅತ್ಯುತ್ತಮವಾದ ಶಿಕ್ಷಣ ದೊರೆಯುವಂತೆ ಮಾಡಿರುವ ನಿಮ್ಮ ಮಾತಾಪಿತೃಗಳೇ ನಿಮಗೆ ದೇವರು ಎಂದು ಬಣ್ಣಿಸಿದರು.

ಗುರುವರ್ಯರಿಗೆ, ಆಚಾರ್ಯರುಗಳಿಗೆ, ಹಿರಿಯರಿಗೆ ಗೌರವ ಸಲ್ಲಿಸುವುದು, ವಿಧೇಯರಾಗಿ ನಡೆದುಕೊಳ್ಳುವುದು ಮತ್ತೆಲ್ಲದಕ್ಕಿಂತ ಮಿಗಿಲಾಗಿ ಶಿಕ್ಷಣ ನೀಡುತ್ತಿರುವ ಆಚಾರ್ಯರುಗಳಿಗೆ ದೇವರ ಸಮಾನವಾಗಿ ಕಂಡು ಗೌರವಿಸುವುದು ಭಾರತೀಯ ಸಂಸ್ಕೃತಿಯ ವಿದ್ಯಾರ್ಥಿಗಳ ಆದ್ಯಮ್ಯ ಕರ್ತವ್ಯ ಎಂದು ತಿಳಿಸಿದರು.

ತದನಂತರ ಮಾತನಾಡಿದ ಪ್ರಧಾನ ಕಾರ್ಯದರ್ಶಿ ಮೂಡೆ ಪಿ ಕೃಷ್ಣ, ತಮಗೂ ಸ್ವಾಮಿ ಜಪಾನಂದಜೀ ರವರಿಗೂ ಕಳೆದ ಐವತ್ತು ವರ್ಷಗಳಿಂದ ಒಂದು ಸಂಬಂಧ ಇರುವುದನ್ನು ವಿವರಿಸಿ 1975ನೇ ಇಸವಿಯಲ್ಲಿ ತಾನು ಶ್ರೀ ರಾಮಕೃಷ್ಣ ವಿದ್ಯಾಶಾಲೆ ಮೈಸೂರಿನಲ್ಲಿ ವ್ಯಾಸಂಗ ಮಾಡುತ್ತಿರುವ ಸಂದರ್ಭದಿಂದಲೂ ಪೂಜ್ಯ ಸ್ವಾಮೀಜಿಯವರನ್ನು ಕಂಡಿದ್ದು



ಅವರ ಅಪ್ರತಿಮ ಮೇಧಾಶಕ್ತಿ, ಕ್ರಿಯಾಶಕ್ತಿ ಹಾಗೂ ಆಧ್ಯಾತ್ಮಿಕ ಶಕ್ತಿಯನ್ನು ಸ್ವತಃ ಕಂಡಿರುವ ತಮಗೆ ಸ್ವಾಮೀಜಿಯವರನ್ನು ಕಂಡಾಗ ಅತ್ಯಂತ ಹೆಮ್ಮೆಯಾಗುತ್ತದೆ ಎಂದು ವಿವರಿಸಿದರು.

ನಂತರ ಶೇಷಾದ್ರಿಪುರಂ ವಿದ್ಯಾಸಂಸ್ಥೆಗಳ ಪರವಾಗಿ ಪೂಜ್ಯ ಸ್ವಾಮೀಜಿಯವರಿಗೆ ಗೌರವವನ್ನು ಸಲ್ಲಿಸಿದರು. ಕಾರ್ಯಕ್ರಮದಲ್ಲಿ ಪ್ರಾಂಶುಪಾಲರಾದ ಪ್ರೊ. ದೊಡ್ಡೇಗೌಡ ಹಾಗೂ ಕಾರ್ಯಕಾರಿ ಸಮಿತಿಯ ಮುಖ್ಯಸ್ಥರಾದ ಬಿ.ಸಿ.ಲೋಕನಾಥ್ ಮತ್ತು ಎಲ್ಲ ಬೋಧಕ ವರ್ಗದವರು ಉಪಸ್ಥಿತರಿದ್ದು ಕಾರ್ಯಕ್ರಮಕ್ಕೆ ಮೆರುಗು ತಂದರು.

ಕಾರ್ಯಕ್ರಮದಲ್ಲಿ ವಿಶೇಷ ಅತಿಥಿಗಳಾಗಿ ಶೇಷಾದ್ರಿಪುರಂ ವಿದ್ಯಾಸಂಸ್ಥೆಗಳ ಗೌರವಾನ್ವಿತ ಪ್ರಧಾನ ಕಾರ್ಯದರ್ಶಿಗಳಾದ ನಾಡೋಜ ಡಾ. ಮೂಡೆ ಪಿ ಕೃಷ್ಣರವರು ಉಪಸ್ಥಿತರಿದ್ದರು. 1500ಕ್ಕೂ ಮಿಗಿಲಾದ ವಿದ್ಯಾರ್ಥಿ/ವಿದ್ಯಾರ್ಥಿನಿಯರು ಹಾಗೂ ಪೋಷಕರು ಮತ್ತು ಬೋಧಕ ವರ್ಗದ ಸದಸ್ಯರೆಲ್ಲರೂ ಭಾಗವಹಿಸಿದ್ದರು.

ಸಂಜೆ ಪ್ರಭ ಶುಕ್ರವಾರ 19 ಜುಲೈ 2024



# 2024 –25ನೇ ಸಾಲಿನ ಪುನಶ್ಚೇತನ ಮತ್ತು ಎಸ್.ಇ.ಟಿ ಪ್ರತಿಭಾ ಪುರಸ್ಕಾರ ಕಾರ್ಯಕ್ರಮ

ಸಂಜೆ ಪ್ರಭ ಬೆಂಗಳೂರು: ಚೌಡಯ್ಯ ಸ್ಮಾರಕ ಭವನದಲ್ಲಿ ಶೇಷಾದ್ರಿಪುರ ಸಂಯುಕ್ತ ಪದವಿ ಪೂರ್ವ ಕಾಲೇಜಿನ 2024 25 ನೇ ಸಾಲಿನ ಪುನಶ್ಚೇತನ ಮತ್ತು ಎಸ್ ಇ ಟಿ ಪ್ರತಿಭಾ ಪುರಸ್ಕಾರ ಕಾರ್ಯಕ್ರಮವು ಅದ್ದೂರಿಯಾಗಿ ನಡೆಯಿತು.

ಮಾಚಿವಳ್ಳಿಯ ರಾಮಕೃಷ್ಣ ಮಠದ ಅಧ್ಯಕ್ಷರಾದ ಶ್ರೀಮತ್ ಸ್ವಾಮಿ ಮಂಗಳನಾಥ ನಂದಜೀ ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಗೌರವ ಪ್ರಧಾನ ಕಾರ್ಯದರ್ಶಿ ಡಾ.ವೂಡೇ ಪಿ ಕೃಷ್ಣ ರವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಈ ಸಂದರ್ಭದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಉಪಾಧ್ಯಕ್ಷರಾದ ಟಿ.ಎಸ್. ವೆಂಬಾರಪ್ಪ, ಧರ್ಮದರ್ಶಿ ಶ್ರೀಕೃಷ್ಣ ಸ್ವಾಮಿ, ಡಬ್ಲ್ಯು.ಡಿ.ಅಶೋಕ್, ಕಾಲೇಜಿನ ಪ್ರಾಂಶುಪಾಲರಾದ ಜಿ.ಕೆ.ಮಂಜುನಾಥ್ ಮುಂತಾದವರು ಉಪಸ್ಥಿತರಿದ್ದರು. ಶೇಷಾದ್ರಿಪುರಂ ಶಿಕ್ಷಣ ದತ್ತಿಯ ಆಡಳಿತ ಸಲಹಾ ಮಂಡಳಿಯ ಅಧ್ಯಕ್ಷರಾದ ಡಬ್ಲ್ಯು.ಎ. ರಾಮಕೃಷ್ಣರವರ ಮಾರ್ಗದರ್ಶನದಲ್ಲಿ ನಡೆದ ಕಾರ್ಯಕ್ರಮದಲ್ಲಿ ಕಾಲೇಜಿನ ಎಲ್ಲಾ ಸಿಬ್ಬಂದಿ ವರ್ಗದವರು, ವಿದ್ಯಾರ್ಥಿಗಳು, ಪೋಷಕರು ಭಾಗವಹಿಸಿದ್ದರು. ಪ್ರಾಂಶುಪಾಲರಾದ ಪ್ರೊ.ಜಿ.ಕೆ. ಮಂಜುನಾಥ್ ರವರು ಗಣ್ಯರನ್ನು ಸ್ವಾಗತಿಸಿದರು.



ಶ್ರೀಮದ್ ಸ್ವಾಮಿ ಮಂಗಳನಾಥನಂದ ಜಿ ಅವರು ಕಾರ್ಯಕ್ರಮ ಉದ್ದೇಶಿಸಿ ಮಕ್ಕಳಲ್ಲಿ ಶಿಕ್ಷಣ ವ್ಯವಸ್ಥೆ ರೂಪಗೊಳ್ಳುವ ಬಗ್ಗೆ ಮೌಲ್ಯಯುತವಾದ ಮಾತುಗಳನ್ನು ಹೇಳಿದರು. ದತ್ತಿಯ ಪ್ರಧಾನ ಗೌರವ ಕಾರ್ಯದರ್ಶಿಗಳು ಪ್ರಸಕ್ತ ಕಾರ್ಯಕ್ರಮದ ಅಧ್ಯಕ್ಷರು ಆದ ನಾಡೋಜ ಡಾ.ವೂಡೇ ಪಿ ಕೃಷ್ಣರವರು ಮಕ್ಕಳ ಉಜ್ವಲ ಭವಿಷ್ಯದ ಹಾದಿಯ ಬಗ್ಗೆ ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆ ನಡೆದು ಬಂದ ಹಾದಿಯ ಬಗ್ಗೆ ಹೇಳಿದರು.

ಪ್ರಸಕ್ತ ಕಾರ್ಯಕ್ರಮದಲ್ಲಿ 2023 24 ನೇ ಸಾಲಿನ ದ್ವಿತೀಯ ಪಿಯುಸಿ ಪರೀಕ್ಷೆಯಲ್ಲಿ ಯಾಂಕ್ ಪಡೆಯುವ ಮೂಲಕ ಕಾಲೇಜಿಗೆ ಗೌರವ ತಂದುಕೊಟ್ಟ 31 ವಿದ್ಯಾರ್ಥಿಗಳಿಗೆ ಹಾಗೂ 10ನೇ ತರಗತಿಯಲ್ಲಿ ಹಾಯಿಂಟ್ ಪಡೆದು ಪ್ರಥಮ ಪಿಯುಸಿಯಲ್ಲಿ ವ್ಯಾಸಂಗ ಮಾಡುತ್ತಿರುವ ಇಬ್ಬರು ವಿದ್ಯಾರ್ಥಿಗಳಿಗೆ ದತ್ತಿಯಿಂದ ಪ್ರತಿಭಾ ಪುರಸ್ಕಾರವನ್ನು ನೀಡಿ ಗೌರವಿಸಲಾಯಿತು. ಪ್ರಸಕ್ತ ಕಾರ್ಯಕ್ರಮವನ್ನು ಜೀವಶಾಸ್ತ್ರ ವಿಭಾಗದ ಉಪನ್ಯಾಸಕರಾದ ಶ್ರೀಮತಿ ಎಸ್.ಎಂ ರವರು ನಿರೂಪಣೆ ಮಾಡಿದರೆ, ವಂದನಾರ್ಪಣೆಯನ್ನು ಆಂಗ್ಲ ವಿಭಾಗದ ಉಪನ್ಯಾಸಕರಾದ ಶ್ರೀಮತಿ ರೂಪ ಮಂಜುನಾಥ್ ಅವರು ನಡೆಸಿಕೊಟ್ಟರು.

[illegible]

೧೮ ಗುರುವಾರ ಜುಲೈ-೨೦೨೪

# ಗುರಿ ಮತ್ತು ದಾರಿ ಒಂದಾಗಿದ್ದರೆ ಏನಾದರೂ ಸಾಧಿಸಬಹುದು: ಸ್ವಾಮಿ ಭೋದಸ್ವರೂಪಾನಂದಜೀ ಮಹಾರಾಜ್




ಬೆಂಗಳೂರು, ಜು. 18: ಸಾಧಿಸಲು ಹೊರಟವರಿಗೆ ಸಾವಿರ ಅಡ್ಡಿ ಆತಂಕಗಳು ಎದುರಾಗುತ್ತವೆ, ಆಗ ಆ ಎಲ್ಲವನ್ನು ಎದುರಿಸಿ ಮುನ್ನುಗ್ಗುವುದನ್ನು ಮತ್ತು ಗುರಿ... ದಾರಿ ಸರಿಯಾಗಿದ್ದರೆ ಸಾಧನೆಗೆ ಯಾವುದೂ ಅಡ್ಡಿಯಾಗಲಾರದು ಎಂದು ಬೆಂಗಳೂರಿನ ಹಲಸೂರು ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಭೋದಸ್ವರೂಪಾನಂದಜೀ ಮಹಾರಾಜ್ ಅವರು ಅಭಿಪ್ರಾಯಪಟ್ಟರು.

ಅವರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಂಗಸಂಸ್ಥೆ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ವತಿಯಿಂದ ಚೌಡಯ್ಯ ಮೆಮೋರಿಯಲ್ ಹಾಲ್ ನಲ್ಲಿ ಆಯೋಜಿಸಲಾಗಿದ್ದ 'ಪ್ರತಿಭಾ ಪುರಸ್ಕಾರ ಮತ್ತು ಶೈಕ್ಷಣಿಕ ಪುನಶ್ಚೇತನ ಕಾರ್ಯಾಗಾರ'ವನ್ನು ಉದ್ಘಾಟಿಸಿ ಮಾತನಾಡಿದರು. ತನ್ನೊಳಗಿನ ಅಂತರ್ ಶಕ್ತಿಯನ್ನು ದೃಢೀಕರಿಸಿಕೊಳ್ಳುತ್ತ ಪಂಚೇಂದ್ರಿಯಗಳ ದಾಸನಾಗದೆ ಭಗವದ್ ಸ್ವರೂಪದಲ್ಲಿ ಧ್ಯಾನ, ಯೋಗ, ಏಕಾಗ್ರತೆ ಮುಖೇನ ತಂದೆ ತಾಯಿ ಗುರುವಿನ ಮಾರ್ಗದರ್ಶನವನ್ನು ಸದಾಚಾರದಲ್ಲಿ ಪಾಲನೆ ಮಾಡಿದಲ್ಲಿ ವಿದ್ಯಾರ್ಥಿಗಳು ಸುಂದರ ಜೀವನ ನಿರ್ಮಾಣ ಸಾಧ್ಯ ಎಂದರು.

ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು ಗುರುವಿನ ಮಾರ್ಗದರ್ಶನದಲ್ಲಿ ನಿಮ್ಮ ಗುರಿ ಸಾಧಿಸಬಹುದು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಶಿಕ್ಷಣದ ಜೊತೆಗೆ ಸಮಾಜ ನಿರ್ಮಾಣಕ್ಕೆ ಭದ್ರಬುನಾದಿ ಹಾಕಲು ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ನೈತಿಕ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಬೇಕಾದ ಎಲ್ಲಾ ರೀತಿಯ ಸಹಕಾರ ಪ್ರೋತ್ಸಾಹ ನೀಡಲಾಗುತ್ತದೆ ಅದು ಇಂದಿನ ಅನಿವಾರ್ಯವೂ ಕೂಡಾ ಎಂದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಎನ್.ಆರ್.ಪಂಡಿತಾರಾಧ್ಯರು ಅಧ್ಯಕ್ಷತೆ ವಹಿಸಿ ನಮ್ಮ ಭಾರತೀಯ ಪರಂಪರೆಯಲ್ಲಿ ಸ್ತ್ರೀ ಸ್ವಾತಂತ್ರ್ಯ, ಸಮಾನತೆ, ಎಲ್ಲವನ್ನೂ ನೀಡುತ್ತಿದೆ, ಜನನಿ, ಜನ್ಮಭೂಮಿಯ ಋಣವನ್ನು ಇಂದಿನ ಯುವಕರು ಮರೆಯದೆ ತೀರಿಸಲು ಉತ್ತಮ ಶಿಕ್ಷಣ ಪಡೆಯಬೇಕಿದೆ ಎಂದರು.

ಪಿಯುಸಿ ಮತ್ತು ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಶೇಕಡಾ 90, 95 ಅಂಕಪಡೆದ 65 ಕ್ಕೂ ಹೆಚ್ಚು ಮಂದಿ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಿ ಗೌರವಿಸಲಾಯಿತು. ವೇದಿಕೆಯಲ್ಲಿ ನ್ಯಾಯವಾದಿ, ಕೆ.ಕೃಷ್ಣಸ್ವಾಮಿ, ಉಪಾಧ್ಯಕ್ಷರಾದ ಟಿ.ಹೆಚ್.ಹೆಂಜಾರಪ್ಪ, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷರಾದ ಎನ್.ಪಿ.ಕಾರ್ತಿಕ್, ಕಾಲೇಜಿನ ಧರ್ಮದರ್ಶಿ ಡಬ್ಲ್ಯೂ.ಡಿ. ಅಶೋಕ್, ಪ್ರಾಂಶುಪಾಲರಾದ ಪ್ರೊ. ಆರ್. ವಿ. ಮಂಜುನಾಥ್, ಸಾಂಸ್ಕೃತಿಕ ಸಮಿತಿಯ ಸಂಚಾಲಕರಾದ ಡಾ.ರಾಮಲಿಂಗೇಶ್ವರ (ಸಿಸಿರಾ) ಹಾಗೂ ಕಾಲೇಜಿನ ಬೋಧಕರು, ಬೋಧಕೇತರ ಸಿಬ್ಬಂದಿ, ವಿದ್ಯಾರ್ಥಿಗಳು ಇದ್ದರು.

ಕು.ಕೀರ್ತನ ಮತ್ತು ತಂಡದಿಂದ ನೃತ್ಯ ವೈಭವ, ಕು.ಮೈಸೂರು ಅಮೋಘ ಅವರ ಪ್ರಾರ್ಥನಾ ಗೀತೆ ಎಲ್ಲರ ಮನಸೂರೆಗೊಂಡಿತು.

ಸಮಸ್ತ ಕನ್ನಡಿಗರ [illegible] ಸಂಜೆ ದಿನಪತ್ರಿಕೆ

# ಈ ಸಂಜೆ

Jul 17, 2024



ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ವತಿಯಿಂದ ಚೌಡಯ್ಯ ಸ್ಮಾರಕ ಭವನದಲ್ಲಿ ಏರ್ಪಡಿಸಿದ್ದ ದತ್ತಿ ಪ್ರತಿಭಾ ಪುರಸ್ಕಾರ ಮತ್ತು ಶೈಕ್ಷಣಿಕ ಪುನಶ್ಚೇತನ ಕಾರ್ಯಾಗಾರವನ್ನು ಹಲಸೂರು ರಾಮಕೃಷ್ಣಾಶ್ರಮದ ಅಧ್ಯಕ್ಷರಾದ ಸ್ವಾಮಿ ಬೋಧಸ್ವರೂಪಾನಂದಜೀ ಮಹಾರಾಜ್, ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್.ಆರ್.ಪಂಡಿತಾರಾಧ್ಯ, ಗೌರವ ಪ್ರಧಾನ ಕಾರ್ಯದರ್ಶಿ ನಾಡೋಜ ಡಾ.ವೂಡೇ ಪಿ. ಕೃಷ್ಣ ಉಪಾಧ್ಯಕ್ಷ ಟಿ.ಹೆಚ್. ಹೆಂಜಾರಪ್ಪ, ಧರ್ಮದರ್ಶಿಗಳಾದ ಕೆ.ಕೃಷ್ಣಸ್ವಾಮಿ, .ಅಶೋಕ್, ಎನ್.ಪಿ.ಕಾರ್ತಿಕ್, ಪ್ರಾಂಶುಪಾಲರಾದ ಪ್ರೊ.ಆರ್. ಎ.ಮಂಜುನಾಥ್, ರೆಡ್ ಕ್ರಾಸ್ ಸಂಸ್ಥೆಯ ರಾಜು ಚಂದ್ರಶೇಖರ್ ಮತ್ತಿತರರು ಪಾಲ್ಗೊಂಡಿದ್ದರು.

# ಪ್ರಜಾ  ಪ್ರಗತಿ

17.07.2024





ಗಮಕ ಭಾರತೀ ಚಾರಿಟಬಲ್ ಟ್ರಸ್ಟ್ ಜಿಲ್ಲಾ ಗಮಕಕಲಾಪರಿಷತ್ ವತಿಯಿಂದ ನಡೆಯುತ್ತಿರುವ ಗಮಕ ಹಬ್ಬ ಬೆಳ್ಳಿ ಹಬ್ಬದ ಸಂಭ್ರಮದ ದಕ್ಷಿಣ ಗೋಗ್ರಹಣ, ಭೀಮವಿಜಯ ಕಾವ್ಯಭಾಗದ ವಾಚನ ವ್ಯಾಖ್ಯಾನದಲ್ಲಿ ಶೇಷಾದ್ರಿಪುರಂ ಶಿಕ್ಷಣ ದತ್ತಿ ಗೌರವ ಕಾರ್ಯದರ್ಶಿ ನಾಡೋಜ ಡಾ. ವೂಡೆ.ಪಿ.ಕೃಷ್ಣ ಅವರನ್ನು ಗೌರವಿಸಲಾಯಿತು. ವಿದ್ವಾನ್ ಎಂ.ಜಿ.ಸಿದ್ಧರಾಮಯ್ಯ, ಕರ್ನಾಟಕ ಕಲಾಶ್ರೀ ಸಿ.ಪಿ.ವಿದ್ಯಾಶಂಕರ್ ಹಾಜರಿದ್ದರು.

ಕಲಾಪ್ರಿಯ

17-07-2024

# ಗುರಿ – ದಾರಿ ಒಂದಾಗಿದ್ದರೆ ಏನಾದರೂ ಸಾಧಿಸಬಹುದು: ಸ್ವಾಮಿ ಬೋಧಸ್ವರೂಪಾನಂದಜೀ ಮಹಾರಾಜ್

ಬೆಂಗಳೂರು: ಸಾಧಿಸಲು ಹೊರಟವರಿಗೆ ಸಾವಿರ ಅಡ್ಡಿ ಆತಂಕಗಳು ಎದುರಾಗುತ್ತವೆ. ಆವಾಗ ಆ ಎಲ್ಲವನ್ನು ಎದುರಿಸಿ ಮುನ್ನುಗ್ಗುವುದನ್ನು ಮತ್ತು ಗುರಿ, ದಾರಿ ಸರಿಯಾಗಿದ್ದರೆ ಸಾಧನೆಗೆ ಯಾವುದೂ ಅಡ್ಡಿಯಾಗಲಾರದು ಎಂದು ಬೆಂಗಳೂರಿನ ಹಲಸೂರು ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಬೋಧಸ್ವರೂಪಾನಂದಜೀ ಮಹಾರಾಜ್ ಅವರು ಅಭಿಪ್ರಾಯಪಟ್ಟರು.

ಅವರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಂಗಸಂಸ್ಥೆ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ವತಿಯಿಂದ ಚೌಡಯ್ಯ ಮೆಮೋರಿಯಲ್ ಹಾಲ್ ನಲ್ಲಿ ಆಯೋಜಿಸಲಾಗಿದ್ದ "ಪ್ರತಿಭಾ ಪುರಸ್ಕಾರ ಮತ್ತು ಶೈಕ್ಷಣಿಕ ಪುನಶ್ಚೇತನ ಕಾರ್ಯಾಗಾರ" ವನ್ನು ದೀಪ ಬೆಳಗಿಸುವ ಮೂಲಕ ಉದ್ಘಾಟಿಸಿ




ಮಾತನಾಡಿದರು. ತನ್ನೊಳಗಿನ ಅಂತರ್ ಶಕ್ತಿಯನ್ನು ದೃಢೀಕರಿಸಿಕೊಳ್ಳುತ್ತ ಪಂಚೇಂದ್ರಿಯಗಳ ದಾಸನಾಗದೆ ಭಗವದ್ ಸ್ವರೂಪದಲ್ಲಿ ಧ್ಯಾನ, ಯೋಗ, ಏಕಾಗ್ರತೆ ಮುಖೇನ ತಂದೆ ತಾಯಿ ಗುರುವಿನ ಮಾರ್ಗದರ್ಶನವನ್ನು ಸದಾಚಾರದಲ್ಲಿ ಪಾಲನೆ ಮಾಡಿದಲ್ಲಿ ವಿದ್ಯಾರ್ಥಿಗಳು ಸುಂದರ ಜೀವನ, ಸುಂದರ ಬದುಕು, ಸುಂದರ ಸಮಾಜ ನಿರ್ಮಾಣ ಸಾಧ್ಯವಾಗುತ್ತದೆ ಎಂದು ಪೂಜ್ಯ ಸ್ವಾಮೀಜಿಯವರು ವಿದ್ಯಾರ್ಥಿಗಳಿಗೆ ಹಿತವಚನನೀಡುವ ಮೂಲಕ ಮಾರ್ಗದರ್ಶನ ನೀಡಿದರು. ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದ ಕರ್ನಾಟಕ ಗಾಂಧಿ ಸ್ಮಾರಕ ನಿಧಿಯ ಅಧ್ಯಕ್ಷರಾದ ನಾಡೋಜ ಡಾ. ವೂಡೇ ಪಿ. ಕೃಷ್ಣ ಅವರು ಗುರುವಿನ ಮಾರ್ಗದರ್ಶನದಲ್ಲಿ ನಿಮ್ಮ ಗುರಿ ಸಾಧಿಸಬಹುದು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯು ಶಿಕ್ಷಣದ ಜೊತೆಗೆ ಸಮಾಜ ನಿರ್ಮಾಣಕ್ಕೆ ಭದ್ರಬುನಾದಿ ಹಾಕಲು ವಿದ್ಯಾರ್ಥಿಗಳಿಗೆ, ಶಿಕ್ಷಕರಿಗೆ ನೈತಿಕ ಮೌಲ್ಯಗಳನ್ನು ಅಳವಡಿಸಿಕೊಳ್ಳಲು ಬೇಕಾದ ಎಲ್ಲಾ ರೀತಿಯ ಸಹಕಾರ ಪ್ರೋತ್ಸಾಹ ನೀಡಲಾಗುತ್ತದೆ ಅದು ಇಂದಿನ ಅನಿವಾರ್ಯವೂ ಕೂಡಾ ಎಂದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಎಸ್. ಆರ್.ಪಂಡಿತಾರಾಧ್ಯರು ಅಧ್ಯಕ್ಷತೆ ವಹಿಸಿ ನಮ್ಮ ಭಾರತೀಯ ಪರಂಪರೆಯಲ್ಲಿ ಸ್ತ್ರೀ ಸ್ವಾತಂತ್ರ್ಯ, ಸಮಾನತೆ, ಎಲ್ಲವನ್ನೂ ನೀಡುತ್ತಿದೆ, ಜನನಿ, ಜನ್ಮಭೂಮಿಯ ಋಣವನ್ನು ಇಂದಿನ ಯುವಕರು ಮರೆಯದೆ ತೀರಿಸಲು ಉತ್ತಮ ಶಿಕ್ಷಣ ಪಡೆಯಬೇಕಿದೆ ಎಂದರು. ಪಿಯುಸಿ ಮತ್ತು ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಶೇಕಡಾ 90 /95 ಅಂಕಪಡೆದ 65 ಕ್ಕೂ ಹೆಚ್ಚು ಮಂದಿ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಿ ಗೌರವಿಸಲಾಯಿತು. ವೇದಿಕೆಯಲ್ಲಿ ನ್ಯಾಯವಾದಿ, ಕೆ.ಕೃಷ್ಣಸ್ವಾಮಿ, ಉಪಾಧ್ಯಕ್ಷರಾದ ಟಿ.ಹೆಚ್.ಹೆಂಜಾರಪ್ಪ, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷರಾದ ಎನ್.ಪಿ.ಕಾರ್ತಿಕ್, ಕಾಲೇಜಿನ ಧರ್ಮದರ್ಶಿ ಡಬ್ಲ್ಯೂ.ಡಿ. ಅಶೋಕ್, ಪ್ರಾಂಶುಪಾಲರಾದ ಪ್ರೊ. ಆರ್.ವಿ.ಮಂಜುನಾಥ್, ಸಾಂಸ್ಕೃತಿಕ ಸಮಿತಿಯ ಸಂಚಾಲಕರಾದ ಡಾ.ರಾಮಲಿಂಗೇಶ್ವರ( ಸಿಸಿರಾ), ಪ್ರೊ.ಎಂ.ಎಸ್.ಬಸವರಾಜ, ಬಿ.ಎಂ. ಮಹಾಂತೇಶ್, ಸಹನಾ. ಎಸ್, ಡಾ.ಕೆ.ವಿ.ಕೃಷ್ಣ, ಕಾವ್ಯ.ವಿ., ಸಂಧ್ಯಾ ಆಚಾರ್ಯ, ಜೀವಿತಾ ಹಾಗೂ ಕಾಲೇಜಿನ ಬೋಧಕರು, ಬೋಧಕೇತರ ಸಿಬ್ಬಂದಿ,ನೂರಾರು ವಿದ್ಯಾರ್ಥಿಗಳು ಉಪಸ್ಥಿತರಿದ್ದರು. ಕು. ಕೀರ್ತನ ಮತ್ತು ತಂಡದಿಂದ ನೃತ್ಯ ವೈಭವ, ಕು.ಮೈಸೂರು ಅಮೋಘ ಅವರ ಪ್ರಾರ್ಥನಾ ಗೀತೆ ಎಲ್ಲರ ಮನಸೂರೆಗೊಂಡಿತು.

ಕರುನಾಡ ಕಣ್ವ / Karunada Kanva

17-07-2024 Wednesday

# ಗುರಿ ಮತ್ತು ದಾರಿ ಒಂದಾಗಿದ್ದರೆ ಏನಾದರೂ ಸಾಧಿಸಬಹುದು : ಸ್ವಾಮಿ ಭೋದಸ್ವರೂಪಾನಂದಜೀ ಮಹಾರಾಜ್




ಬೆಂಗಳೂರು : ಸಾಧಿಸಲು ಹೊರಟ ವರಿಗೆ ಸಾವಿರ ಅಡ್ಡಿ ಆತಂಕಗಳು ಎದುರಾಗುತ್ತವೆ. ಅವಾಗ ಆ ಎಲ್ಲ ವನ್ನು ಎದುರಿಸಿ ಮುನ್ನುಗ್ಗುವುದನ್ನು ಮತ್ತು ಗುರಿ... ದಾರಿ ಸರಿಯಾಗಿದ್ದರೆ ಸಾಧನೆಗೆ ಯಾವುದೂ ಅಡ್ಡಿಯಾಗ ಲಾರದು ಎಂದು ಬೆಂಗಳೂರಿನ ಹಲಸೂರು ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಭೋದಸ್ವ ರೂಪಾನಂದಜೀ ಮಹಾರಾಜ್ ಅವರು ಅಭಿಪ್ರಾಯಪಟ್ಟರು.

ಅವರು ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಂಗಸಂಸ್ಥೆ ಶೇಷಾದ್ರಿ ಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನ ವತಿಯಿಂದ ಚೌಡಯ್ಯ ಮೆಮೋರಿಯಲ್ ಹಾಲ್ ನಲ್ಲಿ ಆಯೋಜಿಸಲಾಗಿದ್ದ ಪ್ರತಿಭಾ ಪುರ ಸ್ಕಾರ ಮತ್ತು ಶೈಕ್ಷಣಿಕ ಪುನಶ್ಚೇತನ ಕಾರ್ಯಾಗಾರ* ನನ್ನು ದೀಪ ಬೆಳಗಿಸುವ ಮೂಲಕ ಉದ್ಘಾಟಿಸಿ ಮಾತ ನಾಡಿದರು. ತನ್ನೊಳಗಿನ ಅಂತರ್ ಶಕ್ತಿಯನ್ನು ದೃಢೀಕರಿಸಿ ಕೊಳ್ಳುತ್ತ ಪಂಚೇಂದ್ರಿಯಗಳ ದಾಸನಾಗದೆ ಭಗವದ್ ಸ್ವರೂಪದಲ್ಲಿ ಧ್ಯಾನ. ಯೋಗ. ಏಕಾಗ್ರತೆ ಮುಖೇನ ತಂದೆ ತಾಯಿ ಗುರುವಿನ ಮಾರ್ಗ ದರ್ಶನವನ್ನು ಸದಾಚಾರದಲ್ಲಿ ಪಾಲನೆ ಮಾಡಿದಲ್ಲಿ ವಿದ್ಯಾರ್ಥಿಗಳು ಸುಂದರ ಜೀವನ. ಸುಂದರ ಬದುಕು. ಸುಂದರ ಸಮಾಜ ನಿರ್ಮಾಣ ಸಾಧ್ಯವಾಗುತ್ತದೆ ಎಂದು ಪೂಜ್ಯ ಸ್ವಾಮೀಜಿಯವರು ವಿದ್ಯಾರ್ಥಿಗಳಿಗೆ ಹಿತವಚನನೀಡುವ ಮೂಲಕ ಮಾರ್ಗದರ್ಶನ ನೀಡಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷರಾದ ಎನ್.ಆರ್.ಪಂಡಿತಾರಾ ಧ್ಯರು ಅಧ್ಯಕ್ಷತೆ ವಹಿಸಿ ನಮ್ಮ ಭಾರತೀಯ ಪರಂಪರೆಯಲ್ಲಿ ಸ್ತ್ರೀ ಸ್ವಾತಂತ್ರ್ಯ ಸಮಾನತೆ. ಎಲ್ಲವನ್ನೂ ನೀಡುತ್ತಿದೆ. ಜನನಿ. ಜನ್ಮಭೂಮಿಯ ಋಣವನ್ನು ಇಂದಿನ ಯುವಕರು ಮರೆಯದೆ ತೀರಿಸಲು ಉತ್ತಮ ಶಿಕ್ಷಣ ಪಡೆಯಬೇಕಿದೆ ಎಂದರು.

ಪಿಯುಸಿ ಮತ್ತು ಎಸ್. ಎಸ್. ಎಲ್. ಸಿ. ಪರೀಕ್ಷೆಯಲ್ಲಿ ಶೇಕಡಾ 90 /95 ಅಂಕಪಡೆದ 65 ಕ್ಕೂ ಹೆಚ್ಚು ಮಂದಿ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಿ ಗೌರವಿ ಸಲಾಯಿತು.

ವೇದಿಕೆಯಲ್ಲಿ ನ್ಯಾಯವಾದಿ. ಕೆ.ಕೃಷ್ಣಸ್ವಾಮಿ. ಉಪಾಧ್ಯಕ್ಷರಾದ ಟಿ.ಹೆಚ್.ಹೆಂಚಾರಪ್ಪ. ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷರಾದ ಎನ್.ಪಿ.ಕಾರ್ತಿಕ್. ಕಾಲೇಜಿನ ಧ'ರ್ಮದರ್ಶಿ ಡಬ್ಲ್ಯೂ.ಡಿ. ಅಶೋಕ್. ಪ್ರಾಂಶುಪಾಲರಾದ ಪ್ರೊ.ಆರ್.ವಿ.ಮಂಜುನಾಥ್. ಸಾಂಸ್ಕೃತಿಕ ಸಮಿತಿಯ ಸಂಚಾಲಕ ರಾದ ಡಾ.ರಾಮಲಿಂಗೇಶ್ವರ( ಸಿಸಿರಾ). ಪ್ರೊ.ಎಂ.ಎಸ್.ಬಬಿತಾ. ಬಿ.ಎಂ.. ಮಹಾಂತೇಶ್. ಸಹನಾ. ಎಸ್. ಡಾ.ಕೆ.ವಿ.ಕೃಷ್ಣ. ಕಾವ್ಯವಿ.. ಸಂಧ್ಯಾ ಆಚಾರ್ಯ. ಜೀವಿತಾ ಹಾಗೂ ಕಾಲೇಜಿನ ಬೋಧಕರು. ಬೋಧಕೇತರ ಸಿಬ್ಬಂದಿ. ನೂರಾರು ವಿದ್ಯಾರ್ಥಿಗಳು ಉಪಸ್ಥಿತರಿದ್ದರು.

ಕು.ಕೀರ್ತನ ಮತ್ತು ತಂಡದಿಂದ ನೃತ್ಯ ವೈಭವ. ಕು.ಮೈಸೂರು ಅಮೋಘ ಅವರ ಪ್ರಾರ್ಥನಾ ಗೀತೆ ಎಲ್ಲರ ಮನಸೂರೆಗೊಂಡಿತು.

ಕನ್ನಡಪ್ರಭ

ಬುಧವಾರ 17.07.2024




ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿನಿಂದ ನಡೆದ 'ಪ್ರತಿಭಾ ಪುರಸ್ಕಾರ ಮತ್ತು ಶೈಕ್ಷಣಿಕ ಪುನಶ್ಚೇತನ ಕಾರ್ಯಾಗಾರ'ದಲ್ಲಿ ಹಲಸೂರು ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಬೋಧರೂಪಾನಂದಜೀ ಮಹಾರಾಜ್ ಭಾಗವಹಿಸಿದ್ದರು.

## ಸಾಧಕ ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ

# ಮುನ್ನುಗ್ಗಿದಾಗ ಮಾತ್ರ ಸಾಧನೆ: ಮಹಾರಾಜ್

• **ಕನ್ನಡಪ್ರಭ ವಾರ್ತೆ** ಬೆಂಗಳೂರು

ಸಾಧಿಸಲು ಹೊರಟವರು ಮುನ್ನುಗ್ಗಿದಾಗ ಮಾತ್ರ ಗುರಿ ತಲುಪಲು ಸಾಧ್ಯ ಎಂದು ಹಲಸೂರು ರಾಮಕೃಷ್ಣ ಮಠದ ಅಧ್ಯಕ್ಷರಾದ ಸ್ವಾಮಿ ಬೋಧರೂಪಾನಂದಜೀ ಮಹಾರಾಜ್ ಹೇಳಿದರು.

ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಂಗಸಂಸ್ಥೆ ಶೇಷಾದ್ರಿಪುರಂ ಸ್ವತಂತ್ರ ಪದವಿ ಪೂರ್ವ ಕಾಲೇಜಿಂದ ಚೌಡಯ್ಯ ಮೆಮೋರಿಯಲ್ ಹಾಲ್‌ನಲ್ಲಿ ನಡೆದ 'ಪ್ರತಿಭಾ ಪುರಸ್ಕಾರ ಮತ್ತು ಶೈಕ್ಷಣಿಕ ಪುನಶ್ಚೇತನ ಕಾರ್ಯಾಗಾರ' ಉದ್ಘಾಟಿಸಿ ಮಾತನಾಡಿದರು.

ಡಾ। ವೂಡೇ ಪಿ.ಕೃಷ್ಣ ಮಾತನಾಡಿದರು. ಶೇಷಾದ್ರಿಪುರಂ ಶಿಕ್ಷಣ ಸಂಸ್ಥೆಯ ಅಧ್ಯಕ್ಷ ಎನ್. ಆರ್. ಪಂಡಿತಾರಾಧ್ಯ ಅಧ್ಯಕ್ಷತೆ ವಹಿಸಿದ್ದರು. ಪಿಯುಸಿ ಮತ್ತು ಎಸ್ಸೆಸ್ಸೆಲ್ಸಿಯಲ್ಲಿ ಶೇ. 90 /95 ಅಂಕ ಪಡೆದ 65ಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಪ್ರತಿಭಾ ಪುರಸ್ಕಾರ ನೀಡಲಾಯಿತು.

ವಕೀಲ ಕೆ.ಕೃಷ್ಣಸ್ವಾಮಿ, ಉಪಾಧ್ಯಕ್ಷ ಟಿ.ಎಚ್. ಹೆಂಜಾರಪ್ಪ, ಕಾಲೇಜು ಆಡಳಿತ ಮಂಡಳಿ ಅಧ್ಯಕ್ಷ ಎನ್.ಪಿ.ಕಾರ್ತಿಕ್, ಕಾಲೇಜಿನ ಧರ್ಮದರ್ಶಿ ಡಬ್ಲ್ಯು.ಡಿ. ಅಶೋಕ್, ಪ್ರಾಚಾರ್ಯ ಪ್ರೊ. ಆರ್. ವಿ.ಮಂಜುನಾಥ್, ಡಾ.ರಾಮಲಿಂಗೇಶ್ವರ (ಸಿಸಿರಾ) ಉಪಸ್ಥಿತರಿದ್ದರು.

ಸಂಜೆವಾಣಿ

Saturday 13 July 2024



ನಗರದ ಗಾಂಧಿ ಭವನದಲ್ಲಿ ಇಂದು ನಡೆದ 'ಗೊರೂರು ಸಂಸ್ಮರಣೆ ಹಾಗೂ ಮಹಾತ್ಮಗಾಂಧಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ' ಕಾರ್ಯಕ್ರಮದಲ್ಲಿ ನಿವೃತ್ತ ಅಡ್ವೋಕೇಟ್ ಜನರಲ್ ಅಶೋಕ್ ಹಾರನಹಳ್ಳಿ, ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ನಾಡೋಜ ಡಾ. ಮಹೇಶ್ ಜೋಷಿ, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ವಾಸಂತಿ ಲಕ್ಷ್ಮೀಮೂರ್ತಿ ಗೊರೂರು ಭಾಗವಹಿಸಿದ್ದರು.

[illegible] ಕರ್ನಾಟಕ

ಶನಿವಾರ, 13, ಜುಲೈ, 2024
ಬೆಳಗಾವಿ | BELAGAVI

ಎನ್‌ಎಸ್‌ಎಸ್ ಅಧಿಕಾರಿಗಳಿಗೆ ಪುನಃಶ್ಚೇತನ ಕಾರ್ಯಾಗಾರ । ಯುವಜನರಿಗೆ ಸೂಕ್ತ ಮಾರ್ಗದರ್ಶನ ಅಗತ್ಯ । ನಾಡೋಜ ಡಾ.ವೂಡೇ ಪಿ.ಕೃಷ್ಣ ಅಭಿಮತ

# ಗಾಂಧಿವಾದ ವಿಶ್ವಕ್ಕೆ ಸಾರ್ವಕಾಲಿಕ ಅವಶ್ಯ

ಬೆಳಗಾವಿ: [illegible] ಮರೆತ ಯುವ [illegible] ವ್ಯವಸ್ಥೆ ಹೀಗೆ ಅನೇಕ [illegible] ಮಹಾತ್ಮ ಗಾಂಧೀಜಿ ಅವರ [illegible] ಸಂದೇಶಗಳು [illegible]. ಹಾಗಾಗಿ ಮಹಾತ್ಮ [illegible] ಅವರ ಆದರ್ಶಮಯ ಜೀವನ [illegible] ಮೌಲ್ಯಯುತ [illegible] ಗಾಂಧಿವಾದವು [illegible] ಅವಶ್ಯವಾಗಿದೆ ಎಂದು [illegible] ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ [illegible] ವೂಡೇ ಪಿ.ಕೃಷ್ಣ ಹೇಳಿದರು.

[illegible] ಚನ್ನಮ್ಮ ವಿಶ್ವವಿದ್ಯಾಲಯ, ಕೆಎಲ್‌ಇ [illegible] ಬೆಂಗಳೂರಿನ ಕರ್ನಾಟಕ [illegible] ನಿಧಿ ಮತ್ತು ರಾಷ್ಟ್ರೀಯ ಸೇವಾ [illegible] ಕರ್ನಾಟಕ ಸರ್ಕಾರದ ಯುವ [illegible] ಮತ್ತು ಕ್ರೀಡಾ ಇಲಾಖೆ [illegible] ನಗರದ ಕುಮಾರ ಗಂಧರ್ವ [illegible] ಶುಕ್ರವಾರ ನಡೆದ [illegible] ಅಧಿಕಾರಿಗಳ ಒಂದು ದಿನದ [illegible] ಕಾರ್ಯಾಗಾರ ಉದ್ಘಾಟಿಸಿ [illegible] ಮಾತನಾಡಿದರು.

[illegible] ಸಂಘರ್ಷ ಮತ್ತು ಯುದ್ಧಗಳಿಂದ [illegible] ಕ್ರಮದಲ್ಲಿ ಯುವಜನತೆ

> "ಸಮಾಜದಲ್ಲಿ ಜಾತೀಯತೆ, ಮತೀಯತೆ ಎದ್ದು ಕಾಣುತ್ತಿದೆ. ತಾಂತ್ರಿಕ ಜಗದಲ್ಲಿ ಆಡಂಬರದ ಬದುಕಿಗೆ ಹೆಚ್ಚಿನ ಮಹತ್ವ ನೀಡಲಾಗುತ್ತಿದೆ. ಪ್ರಕೃತಿ ಮತ್ತು ಮಾನವನ ಮಧ್ಯದ ಸಂಪರ್ಕ ಕಡಿದು ಹೋಗಿದೆ. ಸಾಮಾಜಿಕ ಜಾಲತಾಣಗಳಲ್ಲಿ ಯುವಜನಾಂಗ ಕಳೆದು ಹೋಗಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರ ದೊರೆಯುವುದು ಗಾಂಧೀವಾದದಿಂದ ಮಾತ್ರ.
>
> ■ ನಾಡೋಜ ಡಾ.ವೂಡೇ ಪಿ.ಕೃಷ್ಣ
> । ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ

ತುತ್ತಾಗುತ್ತಿದೆ. ಹಾಗಾಗಿ ಯುವಜನರಿಗೆ ಸೂಕ್ತ ದಾರಿ ತೋರುವ ಅವಶ್ಯಕತೆಯಿದೆ. ಮಹಾತ್ಮ ಗಾಂಧೀಜಿಯವರ ಮೌಲ್ಯಯುತ ಸಂದೇಶಗಳನ್ನು ಯುವಕರಿಗೆ ತಿಳಿಸುವ ಏಕ ಮಾತ್ರ ಸಂಘಟನೆ ಎನ್‌ಎಸ್‌ಎಸ್ ಆಗಿದೆ. ಎನ್‌ಎಸ್‌ಎಸ್ ಅಧಿಕಾರಿಗಳು ಪರಿಣಾಮಕಾರಿಯಾಗಿ ಎನ್‌ಎಸ್‌ಎಸ್ ಶಿಬಿರ ಮತ್ತು ಕಾರ್ಯಕ್ರಮ ಆಯೋಜಿಸುವ ಮೂಲಕ ಕಾಲೇಜು ವಿದ್ಯಾರ್ಥಿಗಳು, ಯುವಜನತೆಗೆ ಅವರ ಜವಾಬ್ದಾರಿ ಮತ್ತು ಶಕ್ತಿಯ ಅರಿವು ಮೂಡಿಸಬೇಕು ಎಂದರು.

ಮಹಾತ್ಮ ಗಾಂಧೀಜಿ ಅವರು ವಿಶ್ವದ ಮಹಾ ಮಾನವತಾವಾದಿ ಎಂದು ಖ್ಯಾತಿ ಪಡೆದಿದ್ದಾರೆ. ಅಮೆರಿಕಾದ ಲೂಥರ್ ಕಿಂಗ್ ಮತ್ತು ಆಫ್ರಿಕಾದ ನೆಲ್ಸನ್ ಮಂಡೇಲಾ ಸೇರಿದಂತೆ ವಿಶ್ವದ ಮಹಾನಾಯಕರು ಮಹಾತ್ಮ ಗಾಂಧೀಜಿ ಅವರ ಜೀವನದಿಂದ ಪ್ರೇರಣೆ ಪಡೆದಿದ್ದಾರೆ. ಗಾಂಧೀಜಿ ಅವರು ಅತ್ಯಂತ ಪರಿಶುದ್ಧ, ಪ್ರಾಮಾಣಿಕ ಮತ್ತು ಪಾರದರ್ಶಕ ಬದುಕನ್ನು ಹೊಂದಿದ್ದರು. ಆದರೆ ಇತ್ತೀಚೆಗೆ ಮಹಾತ್ಮಗಾಂಧೀಜಿ ಅವರ ಜೀವನದ ಕಾರ್ಯ ಮತ್ತು ಸಂದೇಶ ತಿರುಚುತ್ತಿರುವುದಕ್ಕೆ ಬೇಸರ ವ್ಯಕ್ತಪಡಿಸಿದರು.

ಎನ್‌ಎಸ್‌ಎಸ್ ರಾಜ್ಯ ಅಧಿಕಾರಿ ಡಾ.ಪ್ರತಾಪ್ ಲಿಂಗಯ್ಯ, ಅಧ್ಯಕ್ಷತೆ ವಹಿಸಿದ್ದ ಆರ್‌ಸಿಯು ಕುಲಪತಿ ಪ್ರೊ.ಸಿ.ಎಂ. ತ್ಯಾಗರಾಜ, ಆರ್‌ಸಿಯು ಕುಲಸಚಿವೆ ರಾಜಶ್ರೀ ಜೈನಾಪುರ



ಬೆಳಗಾವಿಯ ಕುಮಾರ ಗಂಧರ್ವ ರಂಗಮಂದಿರದಲ್ಲಿ ಶುಕ್ರವಾರ ಎನ್‌ಎಸ್‌ಎಸ್ ಅಧಿಕಾರಿಗಳ ಒಂದು ದಿನದ ಪುನಃಶ್ಚೇತನ ಕಾರ್ಯಾಗಾರವನ್ನು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ.ವೂಡೇ ಪಿ.ಕೃಷ್ಣ ಉದ್ಘಾಟಿಸಿದರು.

> "ಮಹಾತ್ಮ ಗಾಂಧೀಜಿ ಅವರ ಸಂದೇಶ, ತತ್ವ ಮತ್ತು ಸಿದ್ಧಾಂತಗಳನ್ನು ನಾವೆಲ್ಲರೂ ಪಾಲಿಸುವುದರ ಮೂಲಕ ಮುಂದಿನ ಪೀಳಿಗೆಗೆ ತಿಳಿಸದೆ ಹೋದಲ್ಲಿ ನಾವೆಲ್ಲರೂ ಬಹು ದೊಡ್ಡ ಶಿಕ್ಷೆಗೆ ಗುರಿಯಾಗುತ್ತೇವೆ.
>
> ■ ಪ್ರೊ.ಸಿ.ಎಂ. ತ್ಯಾಗರಾಜ
> । ಆರ್‌ಸಿಯು ಕುಲಪತಿ

ಮಾತನಾಡಿದರು. ಧಾರವಾಡದ ಗಾಂಧಿ ಶಾಂತಿ ಪ್ರತಿಷ್ಠಾನದ ಡಾ.ಸಂಜೀವ ಕುಲಕರ್ಣಿ ಮತ್ತು ಕವಿವಿ ಗಾಂಧಿ ಅಧ್ಯಯನ ಪೀಠದ ನಿವೃತ್ತ ನಿರ್ದೇಶಕ ಡಾ.ಶಿವಾನಂದ ಶೆಟ್ಟರ ಉಪನ್ಯಾಸ ನೀಡಿದರು. ಕಾರ್ಯಾಗಾರದಲ್ಲಿ ಬೆಳಗಾವಿ, ವಿಜಯಪುರ, ಬಾಗಲಕೋಟೆಯ ವಿವಿಧ 150ಕ್ಕೂ ಹೆಚ್ಚು ಕಾಲೇಜುಗಳ ಎನ್‌ಎಸ್‌ಎಸ್ ಅಧಿಕಾರಿಗಳು ಮತ್ತು ಸ್ವಯಂ ಸೇವಕರು ಹಾಜರಿದ್ದರು.

ಗಾಂಧಿ ಭವನದ ನಿರ್ದೇಶಕ ಪ್ರೊ.ಡಿ.ಬಿ ಶಿವರಾಜು ಪ್ರಾಸ್ತಾವಿಕ ಮಾತನಾಡಿದರು. ಡಾ.ಸಂಜೀವ ಕಳವಾರ ನಿರೂಪಿಸಿದರು. ಆರ್‌ಸಿಯು ಎನ್‌ಎಸ್‌ಎಸ್ ಸಂಯೋಜಕ ಡಾ.ಕನಕಪ್ಪ ಪೂಜಾರ ಸ್ವಾಗತಿಸಿದರು. ಕೆಎಲ್‌ಇ ವಿವಿಯ ಎನ್‌ಎಸ್‌ಎಸ್ ಸಂಯೋಜಕಿ ಡಾ.ಅಶ್ವಿನಿ ನರಸಣ್ಣವರ ವಂದಿಸಿದರು.

ಬೆಳಗಾವಿ ವರದಿ

SATURDAY, 13 JULY 2024

# ಗಾಂಧೀವಾದ ವಿಶ್ವಕ್ಕೆ ಸಾರ್ವಕಾಲಿಕ ಅವಶ್ಯ: ನಾಡೋಜ ಡಾ. ವೂಡೇ ಪಿ ಕೃಷ್ಣ

ಬೆಳಗಾವಿ: [illegible] ಪ್ರಜಾಪ್ರಭುತ್ವ ವ್ಯವಸ್ಥೆ ಹೀಗೆ [illegible] ಸಮಸ್ಯೆಗಳಿಗೆ ಮಹಾತ್ಮ ಗಾಂಧೀಜಿ ಅವರ ಮೌಲ್ಯಯುತ ಸಂದೇಶಗಳು ಪರಿಹಾರವಾಗಿವೆ. ಹಾಗಾಗಿ ಮಹಾತ್ಮ ಗಾಂಧೀಜಿ ಅವರ ಆದರ್ಶ, [illegible] ಮತ್ತು ಮೌಲ್ಯಯುತ ಸಂದೇಶಗಳನ್ನೊಳಗೊಂಡ ಗಾಂಧೀವಾದವು ವಿಶ್ವಕ್ಕೆ ಸಾರ್ವಕಾಲಿಕ ಅವಶ್ಯವಾಗಿದೆ ಎಂದು ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ ಕೃಷ್ಣ ಹೇಳಿದರು.

ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಕೆಎಲ್‌ಇ ವಿಶ್ವವಿದ್ಯಾಲಯ, ಬೆಂಗಳೂರಿನ ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಮತ್ತು ರಾಷ್ಟ್ರೀಯ ಸೇವಾ ಯೋಜನೆ, ಕರ್ನಾಟಕ ಸರ್ಕಾರದ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಹಯೋಗದಲ್ಲಿ ನಗರದ ಕುಮಾರ ಗಂಧರ್ವ ರಂಗಮಂದಿರದಲ್ಲಿ ಶುಕ್ರವಾರ ನಡೆದ ಎನ್.ಎಸ್.ಎಸ್ ಅಧಿಕಾರಿಗಳ ಒಂದು ದಿನದ ಪುನಶ್ಚೇತನ ಕಾರ್ಯಾಗಾರದಲ್ಲಿ ಅವರು ಮಾತನಾಡಿದರು.

ಇತ್ತೀಚಿಗೆ ಅಪರಾಧ ಮತ್ತು ದುಶ್ಚಟಗಳತ್ತ ಬಹು ಪ್ರಮಾಣದಲ್ಲಿ ಯುವಜನತೆ ಹೋಗುತ್ತಿದೆ. ಹಾಗಾಗಿ ಯುವಜನರಿಗೆ ಸೂಕ್ತ ದಾರಿ ತೋರುವ ಅವಶ್ಯಕತೆಯಿದೆ. ಮಹಾತ್ಮ ಗಾಂಧೀಜಿ ಅವರ ಮೌಲ್ಯಯುತ ಸಂದೇಶಗಳನ್ನು ಯುವಕರಿಗೆ ತಿಳಿಸುವ ಏಕ ಮಾತ್ರ ಸಂಘಟನೆ ಎನ್‌ಎಸ್‌ಎಸ್ ಆಗಿದೆ. ಎನ್.ಎಸ್.ಎಸ್ ಅಧಿಕಾರಿಗಳು ಪರಿಣಾಮಕಾರಿಯಾಗಿ ಎನ್.ಎಸ್.ಎಸ್ ಶಿಬಿರ ಮತ್ತು ಕಾರ್ಯಕ್ರಮಗಳನ್ನು ಆಯೋಜಿಸುವ ಮೂಲಕ ಕಾಲೇಜು ವಿದ್ಯಾರ್ಥಿಗಳಿಗೆ ಯುವಜನತೆಗೆ ಅವರ ಜವಾಬ್ದಾರಿ ಮತ್ತು ಶಕ್ತಿಯನ್ನು ಅರಿವು ಮೂಡಿಸಬೇಕು ಎಂದರು.

ಸಮಾಜದಲ್ಲಿ ಜಾತೀಯತೆ, ಮತೀಯತೆ ಎದ್ದು ಕಾಣುತ್ತಿದೆ. ತಾಂತ್ರಿಕ ಜಗದಲ್ಲಿ ಆಡಂಬರದ ಬದುಕಿಗೆ ಹೆಚ್ಚಿನ ಮಹತ್ವ ನೀಡಲಾಗುತ್ತಿದೆ. ಪ್ರಕೃತಿ ಮತ್ತು ಮಾನವನ ಮಧ್ಯದ ಸಂಪರ್ಕ ಕಡಿದು ಹೋಗಿದೆ. ಸಾಮಾಜಿಕ ಜಾಲತಾಣಗಳಲ್ಲಿ ಯುವಜನಾಂಗ ಕಳೆದು ಹೋಗಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರದೊರೆಯುವುದು ಗಾಂಧೀವಾದದಿಂದ ಮಾತ್ರ. ಆದ್ದರಿಂದ ಎನ್.ಎಸ್.ಎಸ್ ಅಧಿಕಾರಿಗಳು ಮತ್ತು ಸ್ವಯಂಸೇವಕರು ಹಳ್ಳಿಯಿಂದ ದಿಲ್ಲಿವರೆಗೆ ಸಮಾಜದ ಸಮಸ್ಯೆಗಳಿಗೆ ಪರಿಹಾರ ನೀಡಲು ಮುಂದಾಗಬೇಕು ಎಂದರು.



ಮಹಾತ್ಮ ಗಾಂಧೀಜಿ ಅವರು ವಿಶ್ವದ ಮಹಾ ಮಾನವತಾವಾದಿ ಎಂದು ಖ್ಯಾತಿ ಪಡೆದಿದ್ದಾರೆ. ಅಮೆರಿಕದ ಲೂಥರ್ ಕಿಂಗ್ ಮತ್ತ ಆಫ್ರಿಕಾದ ನೆಲ್ಸನ್ ಮಂಡೇಲಾ ಸೇರಿದಂತೆ ವಿಶ್ವದ ಮಹಾನಾಯಕರು ಮಹಾತ್ಮ ಗಾಂಧೀಜಿ ಅವರ ಜೀವನದಿಂದ ಪ್ರೇರಣೆ ಪಡೆದಿದ್ದಾರೆ. ಗಾಂಧೀಜಿ ಅವರು ತಮ್ಮ ಜೀವನವನ್ನು, ಅತ್ಯಂತ ಪರಿಶುದ್ಧ, ಪ್ರಾಮಾಣಿಕ ಮತ್ತು ಪಾರದರ್ಶಕ ಬದುಕನ್ನು ಅವರು ಹೊಂದಿದ್ದರು. ಆದರೆ ಇತ್ತೀಚಿಗೆ ಮಹಾತ್ಮಗಾಂಧೀಜಿ ಅವರ ಜೀವನದ ಕಾರ್ಯಗಳನ್ನು ಮತ್ತು ಸಂದೇಶಗಳನ್ನು ತಿರುಚಲಾಗುತ್ತಿರುವುದು ಎಂದು ಬೇಸರ ವ್ಯಕ್ತಪಡಿಸಿದರು.

ಎನ್.ಎಸ್.ಎಸ್. ರಾಜ್ಯ ಅಧಿಕಾರಿ ಡಾ. ಪ್ರತಾಪ್ ಲಿಂಗಯ್ಯ ಮಾತನಾಡಿ, ದೇಶದಲ್ಲಿ ಸದ್ಯ 45 ಲಕ್ಷ ಮತ್ತು ರಾಜ್ಯದಲ್ಲಿ 6.5 ಲಕ್ಷ ಎನ್.ಎಸ್.ಎಸ್ ಸ್ವಯಂ ಸೇವಕರಿದ್ದಾರೆ. ಈ ಸಂಖ್ಯೆಯನ್ನು ದೇಶದಲ್ಲಿ ಒಂದು ಕೋಟಿ ಮತ್ತು ರಾಜ್ಯದಲ್ಲಿ 10 ಲಕ್ಷ ವೃದ್ಧಿಸುವ ಗುರಿ ಹೊಂದಲಾಗಿದೆ. ಕೇಂದ್ರ ಸರ್ಕಾರ ಎನ್.ಎಸ್. ಎಸ್ ಅನುದಾನವನ್ನು ಹೆಚ್ಚಿಸುವ ಮೂಲಕ ಎನ್.ಎಸ್.ಎಸ್ ಕಾರ್ಯಗಳಿಗೆ ಬಹಳಷ್ಟು ಉತ್ತೇಜನ ನೀಡುತ್ತಿದೆ ಎಂದರು.

ಆರ್‌ಸಿಯು ಕುಲಸಚಿವೆ ರಾಜಶ್ರೀ ಜೈನಾಪೂರ ಮಾತನಾಡಿ, ಎನ್‌ಎಸ್‌ಎಸ್ ಸ್ವಯಂಸೇವಕರಿಗೆ ಗ್ರಾಮೀಣ ಬದುಕಿನ ಅವಿಭಾಜ್ಯ ಅಂಗವಾದ ಕೃಷಿ ಮತ್ತು ಜಾನುವಾರು ಸಾಕಾಣಿಕೆಯ ಚಟುವಟಿಕೆ ಕಾರ್ಯಗಳ ತರಬೇತಿ ನೀಡಬೇಕು. ಇದರಿಂದ ಯುವಜನತೆಗೆ ಗ್ರಾಮ ವಿಕಾಸದ ಮಹತ್ವ ಅರಿಯುತ್ತಾರೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಆರ್‌ಸಿಯು ಕುಲಪತಿ ಪ್ರೊ. ಸಿ. ಎಂ. ತ್ಯಾಗರಾಜ ಮಾತನಾಡಿ, ಮಹಾತ್ಮ ಗಾಂಧೀಜಿ ಅವರ ಸಂದೇಶ, ತತ್ವ ಮತ್ತು ಸಿದ್ಧಾಂತಗಳನ್ನು ನಾವೆಲ್ಲರೂ ಪಾಲಿಸುವುದರ ಮೂಲಕ ಮುಂದಿನ ಪೀಳಿಗೆಗೆ ತಿಳಿಸದೆ ಹೋದಲ್ಲಿ ನಾವೆಲ್ಲರೂ ಬಹು ದೊಡ್ಡ ಪಾಪಕ್ಕೆ ಗುರಿಯಾಗುತ್ತೇವೆ.

ಪಾಠ ಮತ್ತು ತರಗತಿಯಿಂದ ವಿಮುಖವಾಗುತ್ತಿರುವ ಕಾಲೇಜು ವಿದ್ಯಾರ್ಥಿಗಳಿಗೆ ಎನ್.ಎಸ್.ಎಸ್ ಮೂಲಕ ಮೌಲ್ಯಯುತ ಶಿಕ್ಷಣ ನೀಡುವ ಅವಶ್ಯಕತೆಯಿದೆ ಎಂದು ಹೇಳಿದರು.

ಧಾರವಾಡದ ಗಾಂಧೀ ಶಾಂತಿ ಪ್ರತಿಷ್ಠಾನದ ಡಾ. ಸಂಜೀವ ಕುಲಕರ್ಣಿ ಮತ್ತು ಧಾರವಾಡದ ಕವಿವಿಯ ಗಾಂಧೀ ಅಧ್ಯಯನ ಪೀಠದ ನಿವೃತ್ತ ನಿರ್ದೇಶಕರಾ. ಶಿವಾನಂದ ಶೆಟ್ಟರ ವಿಶೇಷ ಉಪನ್ಯಾಸ ನೀಡಿದರು. ಕಾರ್ಯಾಗಾರದಲ್ಲಿ ಬೆಳಗಾವಿ, ವಿಜಯಪುರ, ಬಾಗಲಕೋಟೆಯ ವಿವಿಧ 150ಕ್ಕೂ ಹೆಚ್ಚು ಕಾಲೇಜುಗಳ ಎನ್‌ಎಸ್‌ಎಸ್ ಅಧಿಕಾರಿಗಳು ಮತ್ತು ಸ್ವಯಂ ಸೇವಕರು ಹಾಜರಿದ್ದರು.

ಗಾಂಧೀ ಭವನದ ನಿರ್ದೇಶಕ ಪ್ರೊ. ಜೆ. ಬಿ ಶಿವರಾಜು ಪ್ರಾಸ್ತಾವಿಕವಾಗಿ ಮಾತನಾಡಿದರು. ಡಾ. ಸಂಜೀವ ಕಳವಾರ ನಿರೂಪಿಸಿದರು. ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಎನ್.ಎಸ್. ಎಸ್ ಸಂಯೋಜಕ ಡಾ.ಶಿವಕಪ್ಪ ಪೂಜಾರ ಸ್ವಾಗತಿಸಿದರು. ಕೆಎಲ್‌ಇ ವಿವಿಯ ಎನ್.ಎಸ್. ಎಸ್ ಸಂಯೋಜಕಿ ಡಾ.ಅಶ್ವಿನಿ ನರಸಣ್ಣವರ ವಂದಿಸಿದರು.

ಲೋಕದರ್ಶನ

13 ಜುಲೈ 2024

# ಗಾಂಧೀವಾದ ವಿಶ್ವಕ್ಕೆ ಸಾರ್ವಕಾಲಿಕ ಅವಶ್ಯ: ನಾಡೋಜ ಡಾ. ವೂಡೇ ಪಿ ಕೃಷ್ಣ



ಲೋಕದರ್ಶನ
ಬೆಳಗಾವಿ, ಜು 12 : ಜವಾಬ್ದಾರಿ ಮರೆತಯುವ ಜನಾಂಗ, ಭ್ರಷ್ಟಾಚಾರದ ವ್ಯವಸ್ಥೆ ಹೀಗೆ ಅನೇಕ ಸಮಸ್ಯೆಗಳಿಗೆ ಮಹಾತ್ಮ ಗಾಂಧೀಜಿ ಅವರ ಮೌಲ್ಯಯುತ ಸಂದೇಶಗಳು ರಾಮಬಾಣವಾಗಿವೆ. ಹಾಗಾಗೀ ಮಹಾತ್ಮ ಗಾಂಧೀಜಿ ಅವರ ಆದರ್ಶಮಯಜೀವನ ಮತ್ತು ಮೌಲ್ಯಯುತ ಸಂದೇಶಗಳನ್ನೊಳಗೊಂಡ ಗಾಂಧೀವಾದವು ವಿಶ್ವಕ್ಕೆ ಸಾರ್ವಕಾಲಿಕ ಅವಶ್ಯವಾಗಿದೆ ಎಂದು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ ಕೃಷ್ಣ ಹೇಳಿದರು.

ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಕೆಎಲ್‌ಇ ವಿಶ್ವವಿದ್ಯಾಲಯ, ಬೆಂಗಳೂರಿನ ಕರ್ನಾಟಕ ಗಾಂಧೀ ಸ್ಮಾರಕ ನಿದಿ ಮತ್ತು ರಾಷ್ಟ್ರೀಯ ಸೇವಾ ಯೋಜನೆ, ಕರ್ನಾಟಕ ಸರ್ಕಾರದ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಹಯೋಗದಲ್ಲಿ ನಗರದ ಕುಮಾರ ಗಂಧರ್ವ ರಂಗಮಂದಿರದಲ್ಲಿ ಶುಕ್ರವಾರ ಜರುಗಿದ ಎನ್.ಎಸ್.ಎಸ್ ಅಧಿಕಾರಿಗಳ ಒಂದು ದಿನದ ಪುನಶ್ಚೇತನ ಕಾರ್ಯಾಗಾರದಲ್ಲಿ ಅವರು ಮಾತನಾಡಿದರು.

ಆಯೋಜಿಸುವ ಮೂಲಕ ಕಾಲೇಜು ವಿದ್ಯಾರ್ಥಿಗಳಿಗೆ ಯುವಜನತೆಗೆ ಅವರ ಜವಾಬ್ದಾರಿ ಮತ್ತು ಶಕ್ತಿಯನ್ನು ಅರಿವು ಮೂಡಿಸಬೇಕು ಎಂದರು.

ಸಮಾಜದಲ್ಲಿ ಜಾತೀಯತೆ, ಮತೀಯತೆ ಎದ್ದು ಕಾಣುತ್ತಿದೆ. ತಾಂತ್ರಿಕ ಜಗದಲ್ಲಿ ಆಡಂಬರದ ಬದುಕಿಗೆ ಹೆಚ್ಚಿನ ಮಹತ್ವ ನೀಡಲಾಗುತ್ತಿದೆ. ಪ್ರಕೃತಿ ಮತ್ತು ಮಾನವನ ಮಧ್ಯದ ಸಂಪರ್ಕ ಕಡಿದು ಹೋಗಿದೆ. ಸಾಮಾಜಿಕ ಜಾಲತಾಣಗಳಲ್ಲಿ ಯುವಜನಾಂಗ ಕಳೆದು ಹೋಗಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರದೊರೆಯುವುದು ಗಾಂಧೀವಾದದಿಂದ ಮಾತ್ರ, ಆದ್ದರಿಂದ ಎನ್.ಎಸ್.ಎಸ್ ಅಧಿಕಾರಿಗಳು ಮತ್ತು ಸ್ವಯಂಸೇವಕರು ಹಳ್ಳಿಯಿಂದ ದಿಲ್ಲಿವರೆಗೆ ಸಮಾಜದ ಸಮಸ್ಯೆಗಳಿಗೆ ಪರಿಹಾರ ನೀಡಲು ಮುಂದಾಗಬೇಕು ಎಂದರು.

ಮಹಾತ್ಮ ಗಾಂಧೀಜಿ ಅವರು ವಿಶ್ವದ ಮಹಾ ಮಾನವತಾವಾದಿ ಎಂದು ಖ್ಯಾತಿ ಪಡೆದಿದ್ದಾರೆ. ಅಮೇರಿಕಾದ ಲೂಥರ್ ಕಿಂಗ್ ಮತ್ತ ಆಫ್ರಿಕಾದ ನೆಲ್ಸನ ಮಂಡೇಲಾ ಸೇರಿದಂತೆ ವಿಶ್ವದ ಮಹಾನಾಯಕರು ಮಹಾತ್ಮ ಗಾಂಧೀಜಿ

ಡಾ. ಪ್ರತಾಪ್ ಲಿಂಗಯ್ಯ ಮಾತನಾಡಿ, ದೇಶದಲ್ಲಿ ಸದ್ಯ 45 ಲಕ್ಷ ಮತ್ತು ರಾಜ್ಯದಲ್ಲಿ 6.5 ಲಕ್ಷ ಎನ್.ಎಸ್.ಎಸ್ ಸ್ವಯಂ ಸೇವಕರಿದ್ದಾರೆ. ಈ ಸಂಖ್ಯೆಯನ್ನು ದೇಶದಲ್ಲಿ ಒಂದು ಕೋಟಿ ಮತ್ತು ರಾಜ್ಯದಲ್ಲಿ 10 ಲಕ್ಷ ವೃದ್ಧಿಸುವ ಗುರಿ ಹೊಂದಲಾಗಿದೆ. ಕೇಂದ್ರ ಸರ್ಕಾರ ಎನ್.ಎಸ್.ಎಸ್ ಅನುದಾನವನ್ನು ಹೆಚ್ಚಿಸುವ ಮೂಲಕ ಎನ್.ಎಸ್.ಎಸ್ ಕಾರ್ಯಗಳಿಗೆ ಬಹಳಷ್ಟು ಉತ್ತೇಜನ ನೀಡುತ್ತಿದೆ ಎಂದರು.

ಆರ್‌ಸಿಯು ಕುಲಸಚಿವೆ ರಾಜಶ್ರೀ ಜೈನಾಪೂರ ಮಾತನಾಡಿ, ಎನ್‌ಎಸ್‌ಎಸ್ ಸ್ವಯಂಸೇವಕರಿಗೆ ಗ್ರಾಮೀಣ ಬದುಕಿನ ಅವಿಭಾಜ್ಯ ಅಂಗವಾದ ಕೃಷಿ ಮತ್ತು ಜಾನುವಾರು ಸಾಕಾಣಿಕೆಯ ಚಟುವಟಿಕೆ ಕಾರ್ಯಗಳ ತರಬೇತಿ ನೀಡಬೇಕು. ಇದರಿಂದ ಯುವಜನತೆಗೆ ಗ್ರಾಮ ವಿಕಾಸದ ಮಹತ್ವ ಅರಿಯುತ್ತಾರೆ ಎಂದರು.

ಅಧ್ಯಕ್ಷತೆ ವಹಿಸಿದ್ದ ಆರ್‌ಸಿಯು ಕುಲಪತಿ ಪ್ರೊ. ಸಿ. ಎಂ. ತ್ಯಾಗರಾಜ ಮಾತನಾಡಿ, ಮಹಾತ್ಮ ಗಾಂಧೀಜಿ ಅವರ ಸಂದೇಶ, ತತ್ವ ಮತ್ತು ಸಿದ್ಧಾಂತಗಳನ್ನು ನಾವೆಲ್ಲರೂ ಪಾಲಿಸುವುದರ ಮೂಲಕ ಮುಂದಿನ ಪೀಳಿಗೆಗೆ ತಿಳಿಸದೆ ಹೋದಲ್ಲಿ ನಾವೆಲ್ಲರೂ ಬಹು ದೊಡ್ಡ ಶಾಪಕ್ಕೆ ಗುರಿಯಾಗುತ್ತೇವೆ. ಪಾಠ ಮತ್ತು ತರಗತಿಯಿಂದ ವಿಮುಖವಾಗುತ್ತಿರುವ ಕಾಲೇಜು ವಿದ್ಯಾರ್ಥಿಗಳಗೆ ಎನ್.ಎಸ್.ಎಸ್ ಮೂಲಕ ಮೌಲ್ಯಯುತ ಶಿಕ್ಷಣ ನೀಡುವ ಅವಶ್ಯಕತೆಯಿದೆ ಎಂದು ಹೇಳಿದರು.

ಧಾರವಾಡದ ಗಾಂಧೀ ಶಾಂತಿ ಪ್ರತಿಷ್ಠಾನದ ಡಾ. ಸಂಜೀವ ಕುಲಕರ್ಣಿ ಮತ್ತು ಧಾರವಾಡದ ಕವಿವಿಯ ಗಾಂಧೀ ಅಧ್ಯಯನ ಪೀಠದ ನಿವೃತ್ತ ನಿರ್ದೇಶಕಡಾ. ಶಿವಾನಂದ ಶೆಟ್ಟರ ವಿಶೇಷ ಉಪನ್ಯಾಸ ನೀಡಿದರು. ಕಾರ್ಯಾಗಾರದಲ್ಲಿ ಬೆಳಗಾವಿ, ವಿಜಯಪುರ, ಬಾಗಲಕೋಟೆಯ ವಿವಿಧ 150ಕ್ಕೂ ಹೆಚ್ಚು ಕಾಲೇಜುಗಳ ಎನ್‌ಎಸ್‌ಎಸ್ ಅಧಿಕಾರಿಗಳು ಮತ್ತು




ಉದಯಕಾಲ

ಕನ್ನಡಿಗರ ಜೀವಾಳ

Jul 13, 2024


# ಗಾಂಧೀವಾದ ವಿಶ್ವಕ್ಕೆ ಸಾರ್ವಕಾಲಿಕ ಅವಶ್ಯ: ನಾಡೋಜ ಡಾ. ವೂಡೇ ಪಿ ಕೃಷ್ಣ

ಉದಯಕಾಲ ನ್ಯೂಸ್

ಬೆಳಗಾವಿ: ಜವಾಬ್ದಾರಿ ಮರೆತಯುವ ಜನಾಂಗ, ಭ್ರಷ್ಟಾಚಾರದ ವ್ಯವಸ್ಥೆ ಹೀಗೆ ಅನೇಕ ಸಮಸ್ಯೆಗಳಿಗೆ ಮಹಾತ್ಮ ಗಾಂಧೀಜಿ ಅವರ ಮೌಲ್ಯಯುತ ಸಂದೇಶಗಳು ರಾಮಬಾಣವಾಗಿವೆ. ಹಾಗಾಗೀ ಮಹಾತ್ಮ ಗಾಂಧೀಜಿ ಅವರ ಆದರ್ಶಮಯಜೀವನ ಮತ್ತು ಮೌಲ್ಯಯುತ ಸಂದೇಶಗಳನ್ನೊಳಗೊಂಡ ಗಾಂಧೀವಾದವು ವಿಶ್ವಕ್ಕೆ ಸಾರ್ವಕಾಲಿಕ ಅವಶ್ಯವಾಗಿದೆ ಎಂದು ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ ಕೃಷ್ಣ ಹೇಳಿದರು.



ರಾಣಿ ಚನ್ನಮ್ಮ ವಿಶ್ವವಿದ್ಯಾಲಯ, ಕೆಎಲ್ಇ ವಿಶ್ವವಿದ್ಯಾಲಯ, ಬೆಂಗಳೂರಿನ ಕರ್ನಾಟಕ ಗಾಂಧೀ ಸ್ಮಾರಕ ನಿದಿ ಮತ್ತು ರಾಷ್ಟ್ರೀಯ ಸೇವಾ ಯೋಜನೆ, ಕರ್ನಾಟಕ ಸರ್ಕಾರದ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಹಯೋಗದಲ್ಲಿ ನಗರದ ಕುಮಾರ ಗಂಧರ್ವ ರಂಗಮಂದಿರದಲ್ಲಿ ಶುಕ್ರವಾರ ಜರುಗಿದ ಎನ್.ಎಸ್.ಎಸ್ ಅಧಿಕಾರಿಗಳ ಒಂದು ದಿನದ ಪುನಶ್ಚೇತನ ಕಾರ್ಯಾಗಾರದಲ್ಲಿ ಅವರು ಮಾತನಾಡಿದರು.

ಇತ್ತೀಚೆಗೆ ಅಪರಾಧ ಮತ್ತು ದುಶ್ಚಟಗಳತ್ತ ಬಹು ಪ್ರಮಾಣದಲ್ಲಿ ಯುವಜನತೆ ತುತ್ತಾಗುತ್ತಿದೆ. ಹಾಗಾಗೀ ಯುವಜನರಿಗೆ ಸೂಕ್ತ ದಾರಿ ತೋರುವ ಅವಶ್ಯಕತೆಯಿದೆ. ಮಹಾತ್ಮ ಗಾಂಧೀಜಿ ಅವರ ಮೌಲ್ಯಯುತ ಸಂದೇಶಗಳನ್ನು ಯುವಕರಿಗೆ ತಿಳಿಸುವ ಏಕ ಮಾತ್ರ ಸಂಘಟನೆ ಎನ್ಎಸ್ಎಸ್ ಆಗಿದೆ. ಎನ್.ಎಸ್.ಎಸ್ ಅಧಿಕಾರಿಗಳು ಪರಿಣಾಮಕಾರಿಯಾಗಿ ಎನ್ಎಸ್ಎಸ್ ಶಿಬಿರ ಮತ್ತು ಕಾರ್ಯಕ್ರಮಗಳನ್ನು ಆಯೋಜಿಸುವ ಮೂಲಕ ಕಾಲೇಜು ವಿದ್ಯಾರ್ಥಿಗಳಿಗೆ ಯುವಜನತೆಗೆ ಅವರ ಜವಾಬ್ದಾರಿ ಮತ್ತು ಶಕ್ತಿಯನ್ನು ಅರಿವು ಮೂಡಿಸಬೇಕು ಎಂದರು.

ಸಮಾಜದಲ್ಲಿ ಜಾತೀಯತೆ, ಮತೀಯತೆ ಎದ್ದು ಕಾಣುತ್ತಿದೆ. ತಾಂತ್ರಿಕ ಜಗದಲ್ಲಿ ಆಡಂಬರದ ಬದುಕಿಗೆ ಹೆಚ್ಚಿನ ಮಹತ್ವ ನೀಡಲಾಗುತ್ತಿದೆ. ಪ್ರಕೃತಿ ಮತ್ತು ಮಾನವನ ಮಧ್ಯದ ಸಂಪರ್ಕ ಕಡಿದು ಹೋಗಿದೆ. ಸಾಮಾಜಿಕ ಜಾಲತಾಣಗಳಲ್ಲಿ ಯುವಜನಾಂಗ ಕಳೆದು ಹೋಗಿದೆ. ಈ ಎಲ್ಲ ಸಮಸ್ಯೆಗಳಿಗೆ ಪರಿಹಾರದೊರೆಯುವುದು ಗಾಂಧೀವಾದದಿಂದ ಮಾತ್ರ. ಆದ್ದರಿಂದ ಎನ್.ಎಸ್.ಎಸ್ ಅಧಿಕಾರಿಗಳು ಮತ್ತು ಸ್ವಯಂಸೇವಕರು ಹಳ್ಳಿಯಿಂದ ದಿಲ್ಲಿವರೆಗೆ ಸಮಾಜದ ಸಮಸ್ಯೆಗಳಿಗೆ ಪರಿಹಾರ ನೀಡಲು ಮುಂದಾಗಬೇಕು ಎಂದರು.

ಮಹಾತ್ಮ ಗಾಂಧೀಜಿ ಅವರು ವಿಶ್ವದ ಮಹಾ ಮಾನವತಾವಾದಿ ಎಂದು ಖ್ಯಾತಿ ಪಡೆದಿದ್ದಾರೆ. ಅಮೆರಿಕಾದ ಲೂಥರ್ ಕಿಂಗ್ ಮತ್ತ ಆಫ್ರೀಕಾದ ನೇಲ್ಸನ್ ಮಂಡೇಲಾ ಸೇರಿದಂತೆ ವಿಶ್ವದ ಮಹಾನಾಯಕರು ಮಹಾತ್ಮ ಗಾಂಧೀಜಿ ಅವರ ಜೀವನದಿಂದ ಪ್ರೇರಣೆ ಪಡೆದಿದ್ದಾರೆ. ಆದರೆ ಇತ್ತೀಚೆಗೆ ಮಹಾತ್ಮಗಾಂಧೀಜಿ ಅವರ ಜೀವನದ ಕಾರ್ಯಗಳನ್ನು ಮತ್ತು ಸಂದೇಶಗಳನ್ನು ತಿರುಚಲಾಗುತ್ತಿರುವುದು ಎಂದು ಬೇಸರ ವ್ಯಕ್ತಪಡಿಸಿದರು.

ಎನ್.ಎಸ್.ಎಸ್. ರಾಜ್ಯ ಅಧಿಕಾರಿ ಡಾ. ಪ್ರತಾಪ್ ಲಿಂಗಯ್ಯ ಮಾತನಾಡಿ, ದೇಶದಲ್ಲಿ ಸದ್ಯ 45ಲಕ್ಷ ಮತ್ತು ರಾಜ್ಯದಲ್ಲಿ 6.5ಲಕ್ಷ ಎನ್.ಎಸ್.ಎಸ್ ಸ್ವಯಂ ಸೇವಕರಿದ್ದಾರೆ. ಈ ಸಂಖ್ಯೆಯನ್ನು ದೇಶದಲ್ಲಿ ಒಂದು ಕೋಟಿ ಮತ್ತು ರಾಜ್ಯದಲ್ಲಿ 10 ಲಕ್ಷ ವೃದ್ಧಿಸುವ ಗುರಿ ಹೊಂದಲಾಗಿದೆ. ಕೇಂದ್ರ ಸರ್ಕಾರ ಎನ್.ಎಸ್.ಎಸ್ ಅನುದಾನವನ್ನು ಹೆಚ್ಚಿಸುವ ಮೂಲಕ ಎನ್.ಎಸ್. ಎಸ್ ಕಾರ್ಯಗಳಿಗೆ ಬಹಳಷ್ಟು ಉತ್ತೇಜನ ನೀಡುತ್ತಿದೆ ಎಂದರು.

ಆರ್‌ಸಿಯು ಕುಲಸಚಿವೆ ರಾಜಶ್ರೀ ಜೈನಾಪೂರ ಮಾತನಾಡಿ, ಎನ್ಎಸ್ಎಸ್ ಸ್ವಯಂಸೇವಕರಿಗೆ ಗ್ರಾಮೀಣ ಬದುಕಿನ ಅವಿಭಾಜ್ಯ ಅಂಗವಾದ ಕೃಷಿ ಮತ್ತು ಜಾನುವಾರು ಸಾಕಾಣಿಕೆಯ ಚಟುವಟಿಕೆ ಕಾರ್ಯಗಳ ತರಬೇತಿ ನೀಡಬೇಕು ಎಂದರು.

ಅಧ್ಯಕ್ಷತೆ ವಹಿಸಿದ್ದ ಆರ್‌ಸಿಯು ಕುಲಪತಿ ಪ್ರೊ. ಸಿ. ಎಂ. ತ್ಯಾಗರಾಜ ಮಾತನಾಡಿ, ಮಹಾತ್ಮ ಗಾಂಧೀಜಿ ಅವರ ಸಂದೇಶ, ತತ್ವ ಮತ್ತು ಸಿದ್ಧಾಂತಗಳನ್ನು ನಾವೆಲ್ಲರೂ ಪಾಲಿಸುವುದರ ಮೂಲಕ ಮುಂದಿನ ಪೀಳಿಗೆಗೆ ತಿಳಿಸದೆ ಹೋದಲ್ಲಿ ನಾವೆಲ್ಲರೂ ಬಹು ದೊಡ್ಡ ಶಾಪಕ್ಕೆ ಗುರಿಯಾಗುತ್ತೇವೆ. ಪಾಠ ಮತ್ತು ತರಗತಿಯಿಂದ ವಿಮುಖವಾಗುತ್ತಿರುವ ಕಾಲೇಜು ವಿದ್ಯಾರ್ಥಿಗಳಿಗೆ ಎನ್.ಎಸ್.ಎಸ್ ಮೂಲಕ ಮೌಲ್ಯಯುತ ಶಿಕ್ಷಣ ನೀಡುವ ಅವಶ್ಯಕತೆಯಿದೆ ಎಂದು ಹೇಳಿದರು.

ಧಾರವಾಡದ ಗಾಂಧೀ ಶಾಂತಿ ಪ್ರತಿಷ್ಠಾನದ ಡಾ. ಸಂಜೀವ ಕುಲಕರ್ಣಿ ಮತ್ತು ಧಾರವಾಡದ ಕವಿವಿಯ ಗಾಂಧೀ ಅಧ್ಯಯನ ಪೀಠದ ನಿವೃತ್ತ ನಿರ್ದೇಶಕಡಾ. ಶಿವಾನಂದ ಶೆಟ್ಟರ ವಿಶೇಷ ಉಪನ್ಯಾಸ ನೀಡಿದರು. ಕಾರ್ಯಾಗಾರದಲ್ಲಿ ಬೆಳಗಾವಿ, ವಿಜಯಪುರ, ಬಾಗಲಕೋಟೆಯ ವಿವಿಧ 150ಕ್ಕೂ ಹೆಚ್ಚು ಕಾಲೇಜುಗಳ ಎನ್ಎಸ್ಎಸ್ ಅಧಿಕಾರಿಗಳು ಮತ್ತು ಸ್ವಯಂ ಸೇವಕರು ಹಾಜರಿದ್ದರು.

ಗಾಂಧೀ ಭವನದ ನಿರ್ದೇಶಕ ಪ್ರೊ. ಜಿ. ಬಿ ಶಿವರಾಜು ಪ್ರಾಸ್ತಾವಿಕವಾಗಿ ಮಾತನಾಡಿದರು. ಡಾ. ಸಂಜೀವ ತಳವಾರ ನಿರೂಪಿಸಿದರು. ರಾಣಿ ಚನ್ನಮ್ಮ ವಿಶ್ವವಿದ್ಯಾಲಯದ ಎನ್.ಎಸ್.ಎಸ್ ಸಂಯೋಜಕ ಡಾ.ಕನಕಪ್ಪ ಪೂಜಾರ ಸ್ವಾಗತಿಸಿದರು. ಕೆಎಲ್ಇ ವಿವಿಯ ಎನ್.ಎಸ್.ಎಸ್ ಸಂಯೋಜಕಿ ಡಾ.ಅಶ್ವಿನಿ ನರಸಣ್ಣವರ ವಂದಿಸಿದರು.

ನಂ. 1 ಕನ್ನಡ ದಿನಪತ್ರಿಕೆ
ವಿಜಯವಾಣಿ

ಸೋಮವಾರ 29 ಜುಲೈ 2024
29 JULY 2024

## ಮಾಜಿ ಡಿಸಿಎಂ ಸಿ.ಎನ್. ಅಶ್ವತ್ಥನಾರಾಯಣ ಬಣ್ಣನೆ ತೇಜಸ್ವಿ ಸಾಹಿತ್ಯ-ಸಂಸ್ಕೃತಿ ಹಬ್ಬ ವಿಚಾರಸಂಕಿರಣ

# ಹಲವು ವ್ಯಕ್ತಿತ್ವವುಳ್ಳ ಸಮಗ್ರ ವ್ಯಕ್ತಿ ಪೂರ್ಣಚಂದ್ರ ತೇಜಸ್ವಿ

■ ವಿಜಯವಾಣಿ ಸುದ್ದಿಜಾಲ ಬೆಂಗಳೂರು

ಸಮಾಜದಲ್ಲಿ ಹೇಗೆ ಬಾಳಬೇಕು, ಸಾಮಾಜಿಕ ಜವಾಬ್ದಾರಿ ಏನು? ಎಂಬುದನ್ನು ಹಲವು ವ್ಯಕ್ತಿತ್ವವುಳ್ಳ ಕೆ.ಪಿ. ಪೂರ್ಣಚಂದ್ರ ತೇಜಸ್ವಿ ಅವರು ಅಚ್ಚುಕಟ್ಟಾಗಿ ತಿಳಿಸಿಕೊಟ್ಟಿದ್ದಾರೆ ಎಂದು ಮಾಜಿ ಉಪಮುಖ್ಯಮಂತ್ರಿ ಡಾ.ಸಿ.ಎನ್.ಅಶ್ವತ್ಥನಾರಾಯಣ ತಿಳಿಸಿದ್ದಾರೆ.

ಮೆ। ಮುನಿಸ್ವಾಮಿ ಆ್ಯಂಡ್ ಸನ್ಸ್, ಎಂ.ಚಂದ್ರಶೇಖರ್ ಪ್ರತಿಷ್ಠಾನ, ಬನ್ನೇರುಘಟ್ಟದ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರ ನಗರದ ರವಿಂದ್ರ ಕಲಾಕ್ಷೇತ್ರದಲ್ಲಿ ಭಾನುವಾರ ಆಯೋಜಿಸಿದ್ದ 'ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಸಮಗ್ರ ಕೃತಿ ಜಗತ್ತು' 14 ಸಂಪುಟಗಳ ಬಿಡುಗಡೆ, 'ತೇಜಸ್ವಿ ಎಂಬ ವಿಸ್ಮಯ' ಸಾಕ್ಷ್ಯಚಿತ್ರ ಸರಣಿ ಲೋಕಾರ್ಪಣೆ, 'ಪೂರ್ಣಚಂದ್ರ' ಚಿತ್ರ ಸಂಪುಟ ಬಿಡುಗಡೆ ಹಾಗೂ 'ತೇಜಸ್ವಿ ಸಾಹಿತ್ಯ: ಸಂಸ್ಕೃತಿ ಹಬ್ಬ' ರಾಷ್ಟ್ರೀಯ ವಿಚಾರ ಸಂಕಿರಣ ಕಾರ್ಯಕ್ರಮದಲ್ಲಿ ಮಾತನಾಡಿದರು. ಆತ್ಮತೃಪ್ತಿ ಇರುವ ಕೆಲಸ ಮಾಡಬೇಕು. ಆದರೆ ಸಮಾಜದಲ್ಲಿ ಆಸೆ, ಸ್ವಾರ್ಥಕ್ಕೆ ಕೊನೆಯಿಲ್ಲದಂತಾಗಿದೆ. ಏನು ಕೊಟ್ಟರೂ ಸಾಲುವುದಿಲ್ಲ ಎನ್ನುವ ಮಂದಿ ವರ್ತಮಾನದಲ್ಲಿ ಹೆಚ್ಚಿದ್ದಾರೆ. ಇಂತಹ ಕಾಲಘಟ್ಟದಲ್ಲಿ ತೇಜಸ್ವಿ ಅವರ ವ್ಯಕ್ತಿತ್ವ ಆಶ್ಚರ್ಯ ಹುಟ್ಟಿಸುತ್ತದೆ. ಸಮಾಜದಲ್ಲಿ ಹೇಗೆ ಬದುಕಬೇಕು ಎಂಬುದನ್ನು ತೋರಿಸಿಕೊಟ್ಟರು. ಅವರ ಬರವಣಿಗೆ ಹಾಗೂ ಬದುಕು ಸ್ಫೂರ್ತಿದಾಯಕ ಎಂದರು.

ನಿರ್ದಿಷ್ಟ ಕ್ಷೇತ್ರದಲ್ಲಿ ಸಾಧನೆ ಮಾಡುವುದು ಜೀವನದ ಬಹುದೊಡ್ಡ ಸಾಧನೆಯಾಗಿರುತ್ತದೆ. ಆದರೆ ತೇಜಸ್ವಿ ಅವರು ಕೃಷಿ, ಸಾಹಿತ್ಯ, ಪರಿಸರ, ಛಾಯಾಗ್ರಹಣ, ಶಿಕ್ಷಣ ಇತ್ಯಾದಿ ವಿಷಯಗಳ ಬಗ್ಗೆ ಜ್ಞಾನ ಹೊಂದಿದ್ದರು. ಹೀಗಾಗಿ ಅವರ ಸಂದೇಶ, ವಿಚಾರಗಳನ್ನು ಆಗಾಗ್ಗೆ ಸಮಾಜದಲ್ಲಿ ತಿಳಿಸಿಕೊಡುವುದು ಮುಖ್ಯವಾಗಿರುತ್ತದೆ. ಕಾಲಕಾಲಕ್ಕೆ ಅವರ ವಿಚಾರಗಳ ಅವಲೋಕನ ಆಗಬೇಕಿದೆ. ತೇಜಸ್ವಿ ಅಂದು ಹೇಳಿದ್ದ ಪ್ರಾಕೃತಿಕ ಸಮಸ್ಯೆಗಳು ಇಂದು ನಮ್ಮ ಕಣ್ಣ ಮುಂದಿವೆ. ಭೂಮಂಡಲವನ್ನು ಹೇಗೆ ಕಾಪಾಡಬೇಕು, ಈ ನಿಟ್ಟಿನಲ್ಲಿ ಜನರು ತಮ್ಮ ಕರ್ತವ್ಯಗಳೇನು ಎಂಬ ಬಗ್ಗೆ ಸ್ಪಷ್ಟ ಸಂದೇಶ ನೀಡಿದ್ದಾರೆ. ಈ ಸೂಕ್ಷ್ಮತೆಗಳನ್ನು ಅರಿತುಕೊಂಡು ಬದುಕುವುದು ಮುಖ್ಯವಾಗುತ್ತದೆ ಎಂದು ಹೇಳಿದರು.

ಹಂಪಿ ಕನ್ನಡ ವಿವಿ ವಿಶ್ರಾಂತ ಪ್ರಾಧ್ಯಾಪಕ ಪ್ರೊ.ಕೆ.ಸಿ ಶಿವಾರೆಡ್ಡಿ, ಎಂ.ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯೆ ಸರೋಜ ಎಂ. ಚಂದ್ರಶೇಖರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ನಾಡೋಜ ಡಾ. ವೂಡೇ ಪಿ. ಕೃಷ್ಣ, ಕನ್ನಡ ವಿವಿ ಕುಲಪತಿ ಡಾ.ಡಿ.ವಿ. ಪರಮಶಿವಮೂರ್ತಿ, ಗಾಂಧಿ ಭವನದ ಕಾರ್ಯಾಧ್ಯಕ್ಷ ಎನ್.ಆರ್.ವಿಶುಕುಮಾರ್, ಎಂ. ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯ ಕಾರ್ಯದರ್ಶಿ ಎಂ.ಸಿ. ನರೇಂದ್ರ ಇತರರಿದ್ದರು.



ರವಿಂದ್ರ ಕಲಾಕ್ಷೇತ್ರದಲ್ಲಿ ಭಾನುವಾರ ಆಯೋಜಿಸಿದ್ದ 'ತೇಜಸ್ವಿ ಸಾಹಿತ್ಯ: ಸಂಸ್ಕೃತಿ ಹಬ್ಬ' ಕಾರ್ಯಕ್ರಮದಲ್ಲಿ ಸಿ.ಎನ್. ಅಶ್ವತ್ಥನಾರಾಯಣ, ವೂಡೇ ಪಿ. ಕೃಷ್ಣ, ಡಾ.ಡಿ.ವಿ. ಪರಮಶಿವಮೂರ್ತಿ, ಎಸ್.ಜಿ. ಸಿದ್ದರಾಮಯ್ಯ ಮತ್ತಿತರರು ಹಾಜರಿದ್ದರು.

> ಅನುಭವಿಸಿ ಬರೆಯುತ್ತಿದ್ದರಿಂದ ತೇಜಸ್ವಿ ಅವರ ಕೃತಿಗಳು ಓದುಗರ ಹೃದಯಕ್ಕೆ ನೇರವಾಗಿ ಮುಟ್ಟುತ್ತಿತ್ತು ಹಾಗೂ ಯುವಜನತೆಗೆ ಹತ್ತಿರವಾಗುತ್ತಿತ್ತು. ಇಂದಿನ ಆರ್ಟಿಫಿಶಿಯಲ್ ಇಂಟಲಿಜೆನ್ಸ್ ಜಗತ್ತಿನಲ್ಲಿ ನ್ಯಾಚುರಲ್ ಇಂಟಲಿಜೆನ್ಸ್ ಬಗ್ಗೆ ಬರೆಯುತ್ತಿದ್ದರು.
>
> | ಡಾ. ಕೆ. ಚಿದಾನಂದಗೌಡ
> ವಿಶ್ರಾಂತ ಕುಲಪತಿ, ಕುವೆಂಪು ವಿವಿ

### ಪ್ರಸಿದ್ಧಿಗೆ ಓದುಗರೊಂದಿಗೆ ಸಂವಾದ ಕಾರಣ

ತೇಜಸ್ವಿ ಅವರ ಸಾಹಿತ್ಯ ಪ್ರಸಿದ್ಧ ವಾಗಲು ಅವರು ಓದುಗರೊಂದಿಗೆ ನಡೆಸುತ್ತಿದ್ದ ಸಂವಹನ ಕಾರಣ. ಬರೆದುದ್ದನ್ನು ಓದುಗರು ಅರ್ಥೈಸಿಕೊಳ್ಳುತ್ತಾರೋ, ಇಲ್ಲವೋ ಎಂಬುದನ್ನು ಚೆನ್ನಾಗಿ ಅರಿತು ಕೊಂಡಿದ್ದರು. ಕರ್ವಾಲೋ ಮತ್ತು ಮಿಸ್ಸಿಂಗ್ ಲಿಂಗ್ ಕೃತಿಯ ಓದು, ತೇಜಸ್ವಿ ಅವರ ಸಂವಹನ ಗುಣಗಳನ್ನು ತಿಳಿಸುತ್ತದೆ. ತೇಜಸ್ವಿ ಅವರ ಕಥೆಗಳಲ್ಲಿ ಬರುವ ತಿಳಿಹಾಸ್ಯ, ತುಂಟಾಟ, ಸಾಹಿತ್ಯ, ರಾಜಕೀಯ ಎಲ್ಲವೂ ಕುವೆಂಪು ಅವರಿಂದ ಬಳುವಳಿಯಾಗಿ ಬಂದಿದ್ದವು. ಕಠಿಣವಾದ ವಿಷಯವನ್ನು ಸರಳ ಪದಗಳಲ್ಲಿ ಬರೆಯುವ ಕೌಶಲವನ್ನು ಹೊಂದಿದ್ದರು ಎಂದು ಹಿರಿಯ ಸಾಹಿತಿ ಪ್ರೊ. ಬಿ.ಎಸ್. ಶ್ರೀರಾಮ್ ಬಣ್ಣಿಸಿದರು.

ಸಂಜೆವಾಣಿ

ಭಾನುವಾರ 28 ಜುಲೈ 2024



ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಏರ್ಪಡಿಸಿದ್ದ ಕಾರ್ಯಕ್ರಮದಲ್ಲಿ ಪ್ರೊಡಕ್ಷನ್ ಅರವಿಂದ್ ಮೋತಿ ನಿರ್ಮಾಣ ಮಾಡಿರುವ ತೇಜಸ್ವಿ ವಿಸ್ಮಯ ಬದುಕು ಬರಹಗಳ ಕುರಿತು ಸಾಕ್ಷ್ಯಚಿತ್ರ ಸರಣಿಯನ್ನು ಶಾಸಕ ಸಿ.ಎನ್. ಅಶ್ವತ್ಥನಾರಾಯಣ ಬಿಡುಗಡೆ ಮಾಡಿದರು. ಸಾಹಿತಿಗಳಾದ ಪ್ರೊ. ಎಸ್.ಜಿ. ಸಿದ್ದರಾಮಯ್ಯ, ಪ್ರೊ. ಬಿ.ಎಂ ಶ್ರೀರಾಮ್, ಎಂ.ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯೆ ಸರೋಜ. ಎಂ ಚಂದ್ರಶೇಖರ್, ಕರ್ನಾಟಕ ಗಾಂಧಿಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಹಂಪಿ ಕನ್ನಡ ವಿವಿ ಕುಲಪತಿ ಡಿ.ವಿ. ಪರಮಶಿವಯ್ಯ, ಕೆ. ಚಿದಾನಂದಗೌಡ, ತಾರಿಣಿ, ಸುಸ್ಮಿತಾ ಇದ್ದಾರೆ.

ಸಮಸ್ತ ಕನ್ನಡಿಗರ ಏಕೈಕ ಸಂಜೆ ದಿನಪತ್ರಿಕೆ

Jul 28, 2024

# ಈ ಸಂಜೆ



ನಗರದ ರವೀಂದ್ರ ಕಲಾಕ್ಷೇತ್ರದಲ್ಲಿ ಎಂ. ಚಂದ್ರಶೇಖರ್ ಪ್ರತಿಷ್ಠಾನ ಹಾಗೂ ಪೂರ್ಣಚಂದ್ರ ಸಾಂಸ್ಕೃತಿಕ ಅಧ್ಯಯನ ಕೇಂದ್ರ ಆಯೋಜಿಸಿದ್ದ ಕಾರ್ಯಕ್ರಮದಲ್ಲಿ ಮಾಧ್ಯಮ ಅನೇಕ ಪ್ರೊಡಕ್ಷನ್ ಅರವಿಂದ್ ಮೋತಿ ನಿರ್ಮಾಣ ಮಾಡಿರುವ ತೇಜಸ್ವಿ ಎಂಬ ವಿಸ್ಮಯ ಬದುಕು ಬರಹಗಳ ಕುರಿತು ಸಾಕ್ಷ್ಯಚಿತ್ರ ಸರಣಿಯನ್ನು ಶಾಸಕ ಸಿ.ಎನ್. ಅಶ್ವತ್ ನಾರಾಯಣ ಬಿಡುಗಡೆ ಮಾಡಿದರು. ಸಾಹಿತಿ ಪ್ರೊ. ಎಸ್. ಜಿ. ಸಿದ್ದರಾಮಯ್ಯ, ಸಾಹಿತಿ ಪ್ರೊ. ಬಿ.ಎಂ. ಶ್ರೀ ರಾಮ್, ಎಂ. ಚಂದ್ರಶೇಖರ್ ಪ್ರತಿಷ್ಠಾನದ ಸದಸ್ಯರು ಸರೋಜ ಎಂ. ಚಂದ್ರಶೇಖರ್, ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ವೂಡೇ ಪಿ. ಕೃಷ್ಣ, ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಕುಲಪತಿ ಡಿ.ವಿ. ಪರಮಶಿವಯ್ಯ, ಕೆ. ಚಿದಾನಂದ ಗೌಡ, ತಾರಿಣಿ ಮತ್ತು ಸುಸ್ಮಿತಾ ಪಾಲ್ಗೊಂಡಿದ್ದರು

# ಗಾಂಧಿ ತತ್ವಾದರ್ಶಗಳಿಂದ ಯುವಕರು ಹಿಮ್ಮುಖ



ಕರ್ನಾಟಕ ಗಾಂಧಿ ಸ್ಮಾರಕ ನಿಧಿ ಸಹಯೋಗದಲ್ಲಿ ಡಾ.ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 120ನೇ ಜನ್ಮದಿನದ ಅಂಗವಾಗಿ ಹಮ್ಮಿಕೊಂಡಿದ್ದ ವಿಶೇಷ ದತ್ತಿ ಉಪನ್ಯಾಸ ಸಮಾರಂಭದಲ್ಲಿ ಕಮಲಾ ನರಸಿಂಹ ಅವರು ಸಂಪಾದಿಸಿರುವ 'ಹೇಮಾವತಿಯ ಚೇತನ' ಮರುಮುದ್ರಣ ಕೃತಿಯನ್ನು ಮಾಜಿ ಅಡ್ವೋಕೇಟ್ ಜನರಲ್ ಅಶೋಕ್ ಹಾರನಹಳ್ಳಿ ಬಿಡುಗಡೆಗೊಳಿಸಿದರು. ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ಮಹೇಶ್ ಜೋಶಿ, ಗಾಂಧಿ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ ಇತರರಿದ್ದಾರೆ.

ಬೆಂಗಳೂರು: ಆಧುನಿಕ ಕಾಲಘಟ್ಟದ ಸಂದರ್ಭದಲ್ಲಿ ಯುವಕರು ಗಾಂಧಿ ತತ್ವಾದರ್ಶಗಳಿಂದ ಹಿಮ್ಮುಖವಾಗುತ್ತಿದ್ದಾರೆ ಎಂದು ಮಾಜಿ ಅಡ್ವೋಕೇಟ್ ಜನರಲ್ ಅಶೋಕ್ ಹಾರನಹಳ್ಳಿ ಅವರು ಆತಂಕ ವ್ಯಕ್ತಪಡಿಸಿದರು.

ಕರ್ನಾಟಕ ಗಾಂಧಿ ಸ್ಮಾರಕ ನಿಧಿ, ಬೆಂಗಳೂರು ನಗರ ವಿಶ್ವವಿದ್ಯಾನಿಲಯ (ರಾಷ್ಟ್ರೀಯ ಸೇವಾ ಯೋಜನೆ) ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಇಲಾಖೆ ಸಹಯೋಗದಲ್ಲಿ ಡಾ.ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರ 120ನೇ ಜನ್ಮದಿನದ ಅಂಗವಾಗಿ ಹಮ್ಮಿಕೊಂಡಿದ್ದ "ಗೊರೂರು ಸಂಸ್ಮರಣೆ ಹಾಗೂ ಮಹಾತ್ಮ ಗಾಂಧಿ ವ್ಯಕ್ತಿ ವಿಚಾರಗಳ ಪ್ರಸ್ತುತತೆ" ಕುರಿತಾದ ವಿಶೇಷ ದತ್ತಿ ಉಪನ್ಯಾಸ ಸಮಾರಂಭವನ್ನು ಉದ್ಘಾಟಿಸಿ ಮಾತನಾಡಿ, ಯುವ ಸಮೂಹ ಎಂತಹ ಸಂದಿಗ್ಧ ಪರಿಸ್ಥಿತಿಯಲ್ಲೂ ಗಾಂಧಿ ವಿಚಾರಧಾರೆಗಳಿಂದ ದೂರ ಸರಿಯುವುದು ಒಳ್ಳೆಯ ಬೆಳವಣಿಗೆಯಲ್ಲ. ಗಾಂಧಿಯಿಂದ ಪ್ರೇರಣೆಗೊಂಡವರು ಸಾಕಷ್ಟು ಮಂದಿ ಇದ್ದು, ಗಾಂಧಿ ವಿಚಾರಧಾರೆಗಳು ಎಂದಿಗೂ ಪ್ರಸ್ತುತ ಎಂದು ತಿಳಿಸಿದರು.

ಪ್ರಸ್ತುತ ಯುವಕರು ಮಹಾತ್ಮ ಗಾಂಧೀಜಿ ಅವರ ತತ್ವಾದರ್ಶಗಳ ಬಗ್ಗೆ ತಿಳಿದುಕೊಳ್ಳಲೇಬೇಕಾದ ಅಗತ್ಯತೆ ಕೂಡ ಹೆಚ್ಚಿದೆ. ಗಾಂಧೀಜಿ ಅವರು ಸ್ವಾತಂತ್ರ್ಯ ಚಳುವಳಿಗಳಲ್ಲಿ ತೊಡಗಿಸಿಕೊಂಡ ಪರಿ ಎಂತವಹರನ್ನು ಸ್ಫೂರ್ತಿಗೊಳಿಸುವಂತಿತ್ತು. ಆ ನಿಟ್ಟಿನಲ್ಲಿ ಸಾಕಷ್ಟು ಮಂದಿ ಪ್ರೇರಣೆ ಪಡೆದಿದ್ದು ವಿಶೇಷವೇ ಸರಿ. ಗಾಂಧಿಯಿಂದ ಹೆಚ್ಚು ಪ್ರಭಾವಿತರಾದ ಕಾರ್ನಾಡ್ ಸದಾಶಿವರಾಯರು, ತಮ್ಮಲ್ಲಿದ್ದ ಆಸ್ತಿ–ಸಂಪತ್ತು ಎಲ್ಲವನ್ನು ಬಡಬಗ್ಗರಿಗೆ ಹಂಚಿ, ಗಾಂಧಿ ಪ್ರೇರಿತ ಸ್ವಾತಂತ್ರ್ಯ ಚಳುವಳಿಗಳಲ್ಲಿ ಸಂಪೂರ್ಣವಾಗಿ ತೊಡಗಿಕೊಂಡ ಬಗೆ ಅವಿಸ್ಮರಣೀಯವಾದದ್ದು. ದೇಶ ವಿಭಜನೆಗೆ ಗಾಂಧಿ ಕಾರಣ ಎನ್ನುತ್ತಾರೆ, ಇದು ಸಮಂಜಸವಾದ ಕಾರಣವಲ್ಲ, ಅಂದಿನ ಪರಿಸ್ಥಿತಿ ಹಾಗಿತ್ತು. ಹಾಗಾಗಿ ಗಾಂಧೀಜಿ ಅವರ ಮೇಲೆ ಅಪವಾದ ಸಲ್ಲದು ಎಂದು ಹೇಳಿದರು.

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು ಮಹಾತ್ಮ ಗಾಂಧಿಯಿಂದ ಪ್ರೇರಣೆ ಹೊಂದಿದ್ದರು. ಹಾರನಹಳ್ಳಿ ರಾಮಸ್ವಾಮಿ ಮತ್ತು ಗೊರೂರರು ಬಹಳ ಆತ್ಮೀಯರು. ಗೊರೂರರು ಶಾಸನ ಸಭೆಯಲ್ಲಿ ಪ್ರತಿನಿಧಿಸುತ್ತಿದ್ದಾಗ ಎಂದಿಗೂ ತಮ್ಮ ತತ್ವಾದರ್ಶಗಳನ್ನು ಬಿಟ್ಟುಕೊಡುತ್ತಿರಲಿಲ್ಲ. ಗೊರೂರರು ಗಾಂಧಿ ವಿಚಾರಧಾರೆಗಳಿಂದ ಪ್ರೇರಣೆ ಪಡೆದು ಹಲವು ತರಹದ ಸಾಹಿತ್ಯ ಹೊರ ಬರಲು ಕಾರಣೀಭೂತರಾದರು ಎಂದು ತಿಳಿಸಿದರು.

ಕನ್ನಡ ಸಾಹಿತ್ಯ ಪರಿಷತ್ ಅಧ್ಯಕ್ಷ ಡಾ.ಮಹೇಶ್ ಜೋಶಿ ಮಾತನಾಡಿ, ಗಾಂಧಿಯನ್ನು ನಾವು ನೋಡಲು ಸಾಧ್ಯವಾಗಲಿಲ್ಲ. ಆದರೆ ಗಾಂಧಿಯಿಂದ ಪ್ರಭಾವಿತರಾದ ಒಬ್ಬ ಅತ್ಯುತ್ತಮ ವ್ಯಕ್ತಿಯನ್ನು ನಾವು ನೋಡಿ ಅವರ ಪರಿಪಕ್ವ ಸಾಹಿತ್ಯ ಕುರಿತು ತಿಳಿಯುತ್ತಿದ್ದೇವೆ ಎಂಬುದು ಹೆಮ್ಮೆ ಪಡುವಂತಹ ಸಂಗತಿ. ಗಾಂಧಿಯಿಂದ ಪ್ರಭಾವಿತರಾದ ಗೊರೂರರ ಬಗ್ಗೆ ಇನ್ನಷ್ಟು ನಾವು ತಿಳಿಯಬೇಕಾದ ಅಗತ್ಯವಿದ್ದು, ಈ ನಿಟ್ಟಿನಲ್ಲಿ ಹೆಚ್ಚು ಕಾರ್ಯಪ್ರವೃತ್ತರಾಗುತ್ತೇವೆ ಎಂದು ಹೇಳಿದರು. ಗೊರೂರರ ಬಗ್ಗೆ ಚಿಂತಕ ಡಾ.ಎಚ್.ಎಸ್. ಮುರಳೀಧರ್ ವಿಶೇಷ ಉಪನ್ಯಾಸ ನೀಡಿ, ಗೊರೂರರ ಒಟ್ಟಾರೆ ಸಾಹಿತ್ಯವನ್ನು ಸಮಗ್ರ ಸಂಪುಟಗಳಲ್ಲಿ ಹೊರತರಲು ಶೀಘ್ರವೇ ಮುಂದಾಗಬೇಕಾಗಿರುವುದು ಔಚಿತ್ಯಪೂರ್ಣವಾದದ್ದು ಎಂದು ಅಭಿಪ್ರಾಯ ವ್ಯಕ್ತಪಡಿಸಿದರು.

ಕಮಲಾ ನರಸಿಂಹ ಅವರ ಸಂಪಾದಿಸಿರುವ 'ಹೇಮಾವತಿಯ ಚೇತನ' ಮರುಮುದ್ರಣ ಕೃತಿಯನ್ನು ಬಿಡುಗಡೆಗೊಳಿಸಲಾಯಿತು. ಕರ್ನಾಟಕ ಗಾಂಧೀ ಸ್ಮಾರಕ ನಿಧಿ ಅಧ್ಯಕ್ಷ ಡಾ.ವೂಡೇ ಪಿ.ಕೃಷ್ಣ, ಗೊರೂರರ ಸುಪುತ್ರಿ ವಾಸಂತಿ ಲಕ್ಷ್ಮೀ ಮೂರ್ತಿ ಗೊರೂರು(ಕೆನಡಾ) ಇತರರಿದ್ದರು.